# BHARATA KATHA SARA



MRS. ANNIE BESANT'S

THE STORY OF THE GREAT WAR

IN KANARESE

# ಭಾರತ ಕಥಾ ಸಾರ



PANDIT V. VENKANNA BHATTA

LIBRARIAN

PUBLIC LIBRARY, MYSORE



1915

TO

C. W. Leadbeater, Esq., F.T.S.

This Book is Respectfully

INSCRIBED

*with kind permission*

AS A TOKEN OF REVERENCE AND LOVE

**BY HIS DEVOTED PUPIL**

**THE TRANSLATOR**

WHO OWES TO HIM MORE THAN HE CAN

ACKNOWLEDGE OR FORGET.

# ಪ್ರಸ್ತಾವನೆ.

ಈ ಗ್ರಂಥವನ್ನು ಶ್ರೀಮತಿ ಅನಿಬೆಸಂಟಮ್ಮನವರು ಆಂಗ್ಲೇಯ ಭಾಷೆಯಲ್ಲಿ ರಚಿಸಿರುವರು. ಈ ಗ್ರಂಥಕರ್ತರ ಪಾಂಡಿತ್ಯವೂ ವಿವೇಕವೂ ಲೌಕಿಕ ವ್ಯಾಪಾರ ದಲ್ಲಿನ ನಿಪುಣತೆಯೂ ಲೋಕಪ್ರಸಿದ್ಧವಾದುವು. ಇಂತಹವರ ಅಭಿಪ್ರಾಯಗಳನ್ನೊಳಗೊಂಡಿರುವ ಈ ಗ್ರಂಥವು ಪಾಠಕರಿಗೆ ಅತ್ಯಂತ ಪ್ರಯೋಜನಕರವಾಗಿರುವುದೆಂದು ಹೇಳತಕ್ಕ ಆವಶ್ಯಕತೆ ಯಿಲ್ಲವಷ್ಟೆ. ಆದುದರಿಂದ ಇದನ್ನು ವಿಶೇಷ ಆಂಗ್ಲೇಯಭಾಷಾ ಪರಿಚಯವಿಲ್ಲದ ಕರ್ಣಾಟಕ ದೇಶೀಯರ ಉಪಯೋಗಾರ್ಥವಾಗಿ ಪರಿವರ್ತಿಸಿದೆನು.

ಪರಿವರ್ತನಾಕಾರ್ಯಗಲ್ಲಿ ವಿಶೇಷ ಸಹಾಯಮಾಡಿರುವ ನಮ್ಮಣ್ಣನವರಾದ ಕ್ಲೋಸ್‌ಪೇಟೆ ಗೌ|| ಕನ್ನಡ ಸ್ಕೂಲ್ ಅ. ಮಾಸ್ಟರ್ ಮ|ರಾ| ವಿ. ಸುಬ್ಬಯ್ಯನವರ ಮತ್ತು ಭಾಷಾಂತರವನ್ನು ಆ ಮೂಲಾಗ್ರವಾಗಿ ಶೋಧಿಸಿ ಅಲ್ಲಲ್ಲಿ ತಿದ್ದುಪಾಡುಗಳನ್ನುಮಾಡಿ ತುಂಬಾ ಸಹಾಯಮಾಡಿರುವ ಮೈಸೂರು ಶ್ರೀಮನ್ಮಹಾರಾಜರವರ ಕಾಲೇಜಿನ ಸೈನ್ಸ್ ಮಾಸ್ಟರ್ ಮ||ರಾ| ಅ. ವೆಂಕಟೇಶಯ್ಯನವರ, ಅಮೋಘವಾದ ಉಪಕಾರವು ಚಿರಸ್ಮರಣೀಯವಾಗಿದೆ. ಈ ಗ್ರಂಥದ ಪರ್ವಗಳ ಭಾಷಾಂತರವು ಮೈಸೂರು ಬ್ರಹ್ಮವಿದ್ಯಾಸಮಾಜದವರಿಂದ ಪ್ರಕಟವಾಗುತ್ತಿರುವ "ಸುಪಂಥ" ವೆಂಬ ಆತ್ಮವಿಚಾರವಾದ ಕನ್ನಡಮಾಸಪತ್ರಿಕೆಯಲ್ಲಿ ಮುದ್ರಿತವಾಗಿದೆ.

ಬಾಲಕರಿಗೂ, ಸ್ತ್ರೀಯರಿಗೂ, ಉದ್ಗ್ರಂಥವನ್ನು ಓದುವುದಕ್ಕೆ ಕಾಲವೂ ಸಾಮರ್ಥ್ಯವೂ ಇಲ್ಲದ ಸರ್ವರಿಗೂ, ಇದು ವಿಶೇಷ ಉಪಯೋಗಕರವಾಗಿರುವುದಲ್ಲದೆ ಅದರಿಂದ ತಿಳಿಯಬಹುದಾದ ವಿಶೇಷಾರ್ಥವೂ ನೀತಿಗಳೂ ಸಹ ಪ್ರೌಢರೂ ವಿದ್ವಾಂಸರೂ ಕೂಡ ಗಮನಿಸತಕ್ಕವುಗಳಾಗಿರುವುವು.

ಗ್ರಂಥವು ಕರ್ಣಾಟಕಭಾಷಾಭಿಮಾನಿಗಳ ಅವಗಾಹನೆಗೆ ಬರುವುದರಿಂದ ಪರಿವರ್ತಕನ ಶ್ರಮವು ಸಾರ್ಥಕವಾಗುವುದು.

ಇತಿ ವಿದ್ವಜ್ಜನವಿಧೇಯ,

17-2-1915
ಮೈಸೂರು

ಪಂಡಿತ ವಿ. ವೆಂಕಣ್ಣಭಟ್ಟ,
ಪರಿವರ್ತಕ.



# ವಿಷಯಸೂಚಿಕೆ.





# ಭಾರತಕಥಾಸಾರ.

## ಮೊದಲನೇ ಅಧ್ಯಾಯ.

---

### ಉಪೋದ್ಘಾತ.

ಪ್ರಪಂಚದಲ್ಲಿನ ಸಮಸ್ತ ಗ್ರಂಥಗಳಲ್ಲಿಯೂ ಅತ್ಯುತ್ತಮವೆನಿಸಿಕೊಂಡಿರುವ ಮಹಾಭಾರತವನ್ನು ಈಗ ನಾವು ಓದಲು ಉಪಕ್ರಮಿಸಿರುವೆವು. ಹಾಗೆ ಪ್ರಾರಂಭಿಸುವುದಕ್ಕೆ ಮೊದಲು ನಾವು ಓದುವ ಗ್ರಂಥವಿಂತಹುದೆಂಬದಾಗಿಯೂ ನಮ್ಮ ಮನಸ್ಸನ್ನು ಯಾವ ಸ್ಥಿತಿಯಲ್ಲಿಟ್ಟುಕೊಂಡು ಓದಬೇಕೆಂಬದಾಗಿಯೂ, ಸ್ವಲ್ಪ ವಿಚಾರಮಾಡುವುದು ಅತ್ಯಾವಶ್ಯಕವು. ಏಕೆಂದರೆ ಗ್ರಂದಾವಗಾಹನಕ್ಕೆ ನಮ್ಮ ಮನಸ್ಸಿನ ಭಾವವು ಮುಖ್ಯ ಕಾರಣವು. ಮನಸ್ಸು ಸರಿಯಾದ ಸ್ಥಿತಿಯಲ್ಲಿ ಇದ್ದುದಾದರೆ ನಾವು ಓದುವ ಗ್ರಂಥವನ್ನು ಸುಲಭವಾಗಿ ತಿಳಿದುಕೊಳ್ಳಬಹುದು. ಇಲ್ಲದಿದ್ದರೆ ಅದನ್ನು ಕಷ್ಟಪಟ್ಟು ತಪ್ಪಾಗಿ ಗ್ರಹಿಸುವೆವು. ಹೇಗೆಂದರೆ, ಒಂದು ಪದಾರ್ಥವನ್ನು ನಾವು ನೋಡಲೆಣಿಸಿದಾಗ ಮುಖವನ್ನು ಆಕಡೆ ತಿರುಗಿಸಿ ಕಣ್ಣನ್ನು ತೆರೆದು ನೋಡಿದಲ್ಲದೇ ಬೇರೇಕಡೆ ತಿರುಗಿ ಕಣ್ಣನ್ನು ಮುಚ್ಚಿಕೊಂಡಿದ್ದರೆ ವಸ್ತುಸ್ವರೂಪವು ಗೊತ್ತಾಗುವುದೆ? ಹಾಗೆಯೇ ಒಂದು ಗ್ರಂಥವನ್ನು ಓದಬೇಕಾದರೆ ನಮ್ಮ ಮನಸ್ಸನ್ನು ಅದರಲ್ಲಿ ಉನ್ಮುಖವನ್ನಾಗಿ ಮಾಡಿಕೊಂಡು ಅವಧಾನದಿಂದ ಓದಬೇಕು. ಓದುವಾಗ್ಯೆ. ಅದರ ಮರ್ಯಾದೆಯನ್ನೂ ಪರಿಕ್ರಮವನ್ನೂ ಅವಶ್ಯವಾಗಿ ತಿಳಿಯಬೇಕು. ಇದಕ್ಕಾಗಿ, ಸಂಗೀತಗಾರನು ಹಾಡುವುದಕ್ಕೆ ಮುಂಚೆ ವಾದ್ಯಗಳನ್ನು ಶ್ರುತಿಮಾಡಿಕೊಳ್ಳುವಂತೆ, ನಾವು ಈ ದೊಡ್ಡ ಗ್ರಂಥವನ್ನು ವ್ಯಾಸಂಗ ಮಾಡುವುದಕ್ಕೆ ಮುಂಚೆ ಮನಸ್ಸನ್ನು ಹದಪಡಿಸಿಕೊಂಡು ಸರಿಯಾದ ಮನೋಭಾವದಿಂದ ಕಾರ್ಯಾರಂಭವನ್ನು ಮಾಡಬೇಕು. ಅನಂತರ ಇದರಲ್ಲಿನ ಪ್ರತಿಪರ್ವದಲ್ಲಿರುವ ಪ್ರಧಾನಗಳಾದ ಕಥಾಸಂದರ್ಭಗಳನ್ನು ಕ್ರಮತಪ್ಪದೇ ತಿಳಿಯುತ್ತಾ ಈ ಗ್ರಂಥದಲ್ಲಿರುವ ನೀತಿಗಳೆಂತಹವೆಂಬುದನ್ನೂ ಆ ಕಥಾನಾಯಕರ ಸ್ವಭಾವ ವಿಂತಹದೆಂಬುದನ್ನೂ ಅವರು ಮಾಡಿ

ರುವೆ. ಕೆಲಸಗಳ ರೀತಿಗಳನ್ನೂ ಅವರಿಗೆ ದೇವತೆಗಳು ಹೇಗೆ ಸಾಧಕಬಾಧಕಗಳನ್ನು ಕಲ್ಪಿಸಿದರೆಂಬುದನ್ನೂ ಇವರಲ್ಲಿ ನಡೆದಿರುವ ಸಂತತಿಗಳಿಗೆಲ್ಲಾ ದೇವತೆಗಳು ಹೇಗೆ ಪ್ರೇರಕರಾಗಿರುವರೆಂಬುದನ್ನೂ ಗಮನಿಸಬೇಕಾಗಿದೆ.

ವಿಚಾರ ಮಾಡಿದರೆ ದೇವತೆಗಳು ಲೋಕಪಾಲಕರೆಂಬುದನ್ನು ನಂಬದಿರುವ ಜನಗಳನೇಕರಿರುವರೆಂಬುದು ನಮಗೆ ಗೊತ್ತಾಗುವುದು. ಹಿಂದೂಮತವನ್ನು ನಂಬದಿರತಕ್ಕವರು ನಮ್ಮ ವೇದಶಾಸ್ತ್ರಗಳನ್ನೂ ಪ್ರಮಾಣ ಗ್ರಂಥಗಳನ್ನೂ ಸಹ ತಪ್ಪೆಂದು ಆಕ್ಷೇಪಿಸುವರು. ಆದುದರಿಂದ ನಮ್ಮ ಮತವನ್ನೂ ಅದರ ಪ್ರಮಾಣ ಗ್ರಂಥಗಳನ್ನೂ ಕುರಿತು ತಿಳುವಳಿಕೆಯನ್ನುಂಟುಮಾಡಿಕೊಂಡು ಮೂಢರೂ ಅನ್ಯ ದೇಶೀಯರೂ ಆಕ್ಷೇಪಿಸಿದಾಗ ನಮ್ಮ ಮತದಲ್ಲಿ ಸಂದೇಹಪಡದೇ ಇರತಕ್ಕದ್ದು ಆರ್ಯಬಾಲಕರಿಗೆ ಕರ್ತವ್ಯವು.

ಕೇವಲ ಲೌಕಿಕದೃಷ್ಟಿಯಿಂದ ನೋಡಿದರೂ ಕೂಡ ಮಹಾಭಾರತವು ಅತಿ ಪ್ರಯೋಜನಕಾರಿಯಾದ ಗ್ರಂಥವು. ಸಮಸ್ತ ಜನಾಂಗದವರಿಗೂ ಕಾವ್ಯಗಳೂ ದರ್ಶನಗಳೂ ಮತ್ತು ಇತಿಹಾಸರೂಪವಾದ ಗ್ರಂಥಗಳೂ ಉಂಟು. ಮತ್ತು ಈ ಗ್ರಂಥಗಳ ಉತ್ಕೃಷ್ಟತೆ ಕುಶಲತೆಗಳಿಂದ ಆಯಾಜನಾಂಗಕ್ಕೆ ಗೌರವವು ಬರುವುದು. ಯಾವದೇಶದಲ್ಲಿ ಪ್ರಸಿದ್ಧವಾದ ಗ್ರಂಥಗಳು ಇರುವುವೋ ಆ ದೇಶದವರನ್ನು ಇತರರು ದೊಡ್ಡವರೆಂದು ಕೊಂಡಾಡುವರು; ಉದ್ಗ್ರಂಥಗಳನ್ನು ಹೊಂದದೇ ಇದ್ದ ಜನರನ್ನು ತುಚ್ಛೀಕರಿಸುವರು. ನಮ್ಮ ಹಿಂದೂದೇಶದಲ್ಲಿರತಕ್ಕಷ್ಟುಮಟ್ಟಿನ ಉದ್ಗ್ರಂಥಗಳು ಇನ್ಯಾವದೇಶದಲ್ಲಿಯೂ ಜನಾಂಗದಲ್ಲಿಯೂ ಇಲ್ಲವು.

ಪಾಶ್ಚಾತ್ಯರು ಸಂಸ್ಕೃತಭಾಷೆಯಲ್ಲಿ ನಮ್ಮ ಪೂರ್ವಿಕರು ಬರೆದಿರುವ ಗ್ರಂಥಗಳನ್ನು ಈಗ ಓದಲುಪಕ್ರಮಿಸಿ ನಮ್ಮ ದೇಶವು ಪೂರ್ವದಲ್ಲಿ ಎಷ್ಟರಮಟ್ಟಿನ ಉನ್ನತಸ್ಥಿತಿಯಲ್ಲಿದ್ದಿತೋ ಎಂದು ಆಶ್ಚರ್ಯಪಡುತ್ತಿರುವರು. ಈ ಭೂಮಿಯ ಮೇಲಿರುವ ಎಲ್ಲಾ ಕಾವ್ಯಗಳಲ್ಲಿಯೂ ಮಹಾಭಾರತವು ಅತ್ಯಂತ ಉತ್ತಮವಾದ ಗ್ರಂಥವಾಗಿರುವುದು. ನಮಗೆ ತಿಳಿದಿರುವ ಮತ್ತು ನಮಗೆ ಉಪಯುಕ್ತಗಳಾದ ಇಷ್ಟು ವಿಷಯಗಳನ್ನೊಳಕೊಂಡಿರುವ ಬೇರೊಂದು ಕಾವ್ಯವೇ ಇಲ್ಲವು. ಇದು ಅತಿ ರಮಣೀಯವಾದ ಶೈಲಿಯಲ್ಲಿ ಬರೆಯಲ್ಪಟ್ಟಿರುವದರಿಂದಲೂ ಇದರಲ್ಲಿನ

ಕಥೆಗಳು ಮನೋಹರಗಳಾಗಿರುವದರಿಂದಲೂ ಪ್ರತಿಯೊಬ್ಬ ಹಿಂದೂಬಾಲಕನೂ ಇದನ್ನು ಸ್ವಲ್ಪಮಟ್ಟಿಗಾದರೂ ತಿಳಿದಿರಬೇಕು. ನಮ್ಮ ಪೂರ್ವಿಕರು ನಮಗಾಗಿ ಬರೆದಿರುವ ಈ ಮಹಾಗ್ರಂಥದಲ್ಲಿನ ವಿಷಯಗಳನ್ನು ಸ್ವಲ್ಪವಾದರೂ ತಿಳಿದುಕೊಳ್ಳದಿರುವುದು ಒಳ್ಳೇಯದಲ್ಲ.

ಈ ಚರಿತ್ರೆಯ ಮಾಹಾತ್ಮ್ಯವನ್ನು ನಾವು ಮೂರುಭಾಗವಾಗಿ ವಿಂಗಡಿಸಬಹುದು. ಇದರಲ್ಲಿನ (1) ನೀತಿ (2) ತತ್ವವಿಚಾರ (3) ಚರಿತ್ರೆ.

1. ನೀತಿಯೆಂದರೆ ಸತ್ಪ್ರವರ್ತನೆ ಮತ್ತು ಅದರ ನಿಬಂಧನೆಗಳು. ನೀತಿಶಾಸ್ತ್ರವು ಧರ್ಮಾಧರ್ಮಗಳ ರೀತಿಯನ್ನು ತಿಳಿಸುವುದು. ಯಾವುದನ್ನು ಮಾಡುವುದರಿಂದ ನಮಗೆ ಮೇಲುಂಟಾಗುವುದೋ ಅದು ಧರ್ಮವೆಂಬದಾಗಿಯೂ ಯಾವುದನ್ನಾಚರಿಸುವುದರಿಂದ ನಮಗೆ ಅನಿಷ್ಟ ಫಲಗಳುಂಟಾಗುವುವೋ ಅದು ಅಧರ್ಮವೆಂಬುದಾಗಿಯೂ ತಿಳಿದವರು ಹೇಳುವರು. ಗಣಿತಶಾಸ್ತ್ರವನ್ನು ಅಭ್ಯಾಸಮಾಡುವಾಗ ಭಾಗಕಾರ ಮೊದಲಾದಪ್ರಕ್ರಿಯೆಗಳನ್ನು ಮಾಡುವುದಕ್ಕೆ ಕೆಲವು ನಿಬಂಧನೆ (Rules) ಗಳನ್ನು ಹೇಳಿಕೊಡುತ್ತಾರೆ. ಆ ಕ್ರಮವನ್ನು ಅನುಸರಿಸಿ ಮಾಡಿದರೆ ಪ್ರಕ್ರಿಯೆಯು ಸರಿಯಾಗಿ ಉತ್ತರವು ಸರಿಬರುವುದು. ಇದೇರೀತಿಯಲ್ಲಿ ನಾವು ಇಹಪರಗಳಲ್ಲಿ ಸುಖಿಗಳಾಗಿರಬೇಕಾಗಿದ್ದರೆ ನಮ್ಮ ನಡತೆಯು ಕೆಲವು ನಿಬಂಧನೆಗಳಿಗೆ ಒಳಪಟ್ಟುದಾಗಿರಬೇಕು. ಇಂತಹ ನಿಬಂಧನೆಗಳನ್ನು ತಿಳಿಸತಕ್ಕ ಶಾಸ್ತ್ರವೇ ನೀತಿ ಶಾಸ್ತ್ರವು. ನೀತಿಶಾಸ್ತ್ರವು 'ಪ್ರಾಣಿಯನ್ನು ಹಿಂಸೆಮಾಡಬೇಡ' ಎಂದು ಆಜ್ಞೆಯನ್ನು ವಿಧಿಸುವುದಿಲ್ಲ. ಆದರೆ ಪ್ರಾಣಿಹಿಂಸೆಯಿಂದ ಕಷ್ಟಪ್ರಾಪ್ತಿಯಾಗುವುದೆಂದು ಬೋಧಿಸುವುದು.

ಮಹಾಭಾರತವು ನಮಗೆ ಸದ್ವೃತ್ತಿಯನ್ನು ಬೋಧಿಸುವ ಒಂದು ದೊಡ್ಡ ನೀತಿಶಾಸ್ತ್ರವಾಗಿರುವುದು. ಇದು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮೊದಲಾದ ಸರ್ವವರ್ಣದವರಿಗೂ ಬಾಲಕಬಾಲಿಕೆಯರಿಗೂ, ಸ್ತ್ರೀಪುರುಷರಿಗೂ ತಕ್ಕ ಧರ್ಮಗಳನ್ನು ಸುಲಭವಾಗಿ ಬೋಧಿಸುವುದು. ವ್ಯವಹಾರದಲ್ಲಿಯೂ ಸಂಸಾರದಲ್ಲಿಯೂ ಗಂಡಹೆಂಡತಿಯರೂ, ತಂದೆತಾಯಿಗಳೂ, ತಂದೆಮಕ್ಕಳೂ ಪ್ರತಿನಿತ್ಯದಲ್ಲಿಯೂ ಹೇಗೆ ನಡೆದುಕೊಳ್ಳಬೇಕೆಂಬ ಲೋಕಮರ್ಯಾದೆಗಳನ್ನು ಮನೋಜ್ಞವಾದ ಕಥೆಗಳಿಂದ ಲಲಿತವಾಗಿ ತಿಳಿಸುವುದು. ಹೇಗೆಂದರೆ 'ನಿಜವನ್ನು ಹೇಳು'

ಎಂದು ಆಜ್ಞಾಪಿಸುವುದಕ್ಕೆ ಬದಲಾಗಿ ನಿಜವನ್ನು ಹೇಳಿರುವ ದೊಡ್ಡವರನ್ನು ಕುರಿತ ಅನೇಕ ಕಥೆಗಳನ್ನು ಹೇಳಿ ಅವರಿಗೆ ಎಂತಹ ಸದ್ಗತಿ ಪ್ರಾಪ್ತವಾಯಿತೋ ಅಂತಹ ರೀತಿಯನ್ನು ವರ್ಣಿಸುವುದು. ಹಾಗೆಯೇ ' ಸುಳ್ಳುಹೇಳಬಾರದು. ' ಎಂದು ವಿಧಿಸದೇ ಅಂತಹ ಸುಳ್ಳುಹೇಳಿದವರನ್ನು ಕುರಿತ ಅನೇಕ ಕಥೆಗಳನ್ನು ಹೇಳಿ ಅಂತಹವರಿಗೆ ಎಂತಹದುರ್ಗತಿ ಪ್ರಾಪ್ತವಾಯಿತೋ ಅದನ್ನು ತಿಳಿಸುವುದು. ಹೀಗೆ ನೀತಿಯನ್ನು ಕಥಾರೂಪವಾಗಿ ಹೇಳದೇ ವಿಧಿಗಳನ್ನುಮಾತ್ರ ತಿಳಿಸಿದಲ್ಲಿ ಆ ನೀತಿಯು ಅಷ್ಟುಚೆನ್ನಾಗಿ ಜನಗಳ ಮನಸ್ಸಿನಲ್ಲಿ ನಿಲ್ಲಲಾರದು. ಈ ಕಥೆಗಳಿಂದ ನಾವು ನೀತಿ ಶಾಸ್ತ್ರದ ನಿಬಂಧನೆಗಳನ್ನು ದಿನಚರ್ಯದಲ್ಲಿ ಹೇಗೆ ಅನ್ವಯಿಸಿಕೊಳ್ಳಬೇಕೆಂಬುದು ಸ್ಪಷ್ಟವಾಗಿಯೂ ಸುಲಭವಾಗಿಯೂ ಮನಸ್ಸಿಗೆ ಗೊತ್ತಾಗುತ್ತದೆ. ಉಪಾಧ್ಯಾಯನು ಭಾಗಕಾರವನ್ನು ಹೇಳಿಕೊಡುವಲ್ಲಿ ಅನೇಕಲೆಕ್ಕಗಳನ್ನು ಮಾಡಿಸುತ್ತಾನೆ. ಇದರಿಂದ ಕೇವಲ ನಿಬಂಧನೆಯನ್ನು ಹೇಳುವುದಕ್ಕಿಂತಲೂ ನಮ್ಮ ಮನಸ್ಸಿಗೆ ಪ್ರಕ್ರಿಯೆಯ ಕ್ರಮವೂ ನಿಬಂಧನೆಯೂ ಚೆನ್ನಾಗಿ ಗೊತ್ತಾಗುವುವು.

ಒಳ್ಳೇನಡತೆಯು ಅಷ್ಟುಮುಖ್ಯವಾದುದಲ್ಲವೆಂದು ಕೆಲವರು ಎಣಿಸುತ್ತಾರೆ. ಆದರೆ ಆ ಅಭಿಪ್ರಾಯವು ತಪ್ಪು. ವಿಜಯವೂ, ಸಮಸ್ತಶುಭವೂ, ಐಶ್ವರ್ಯಾದಿಗಳೂ ಸತ್ಪ್ರವರ್ತನೆಯಿಂದಲೇ ಉಂಟಾಗತಕ್ಕವುಗಳು. ಇದಕ್ಕೆ ದೃಷ್ಟಾಂತವಾಗಿ ಪ್ರಹ್ಲಾದನಚರಿತ್ರೆಯನ್ನು ಹೇಳುವರು. ಆತನು ತನ್ನ ಉತ್ತಮವಾದ ನಡವಳಿಕೆಯಿಂದ ಇಂದ್ರನ ತ್ರಿಲೋಕಾಧಿಪತ್ಯವನ್ನು ತನ್ನ ವಶಮಾಡಿಕೊಂಡನು. ಆಗ ರಾಜ್ಯಭ್ರಷ್ಟನಾದ ಇಂದ್ರನು ಬ್ರಾಹ್ಮಣವೇಷವನ್ನುಧರಿಸಿ ಪ್ರಹ್ಲಾದನಬಳಿಗೆ ಬಂದು ಆತನ ಶಿಷ್ಯವೃತ್ತಿಯನ್ನು ಮಾಡಿ ಅವನನ್ನು ಬಹಳವಾಗಿ ಮೆಚ್ಚಿಸಿದನು. ಸಂತುಷ್ಟನಾದ ಪ್ರಹ್ಲಾದನು ಅವನಲ್ಲಿ ಪ್ರಸನ್ನನಾಗಿ " ವರವಂ ಕೇಳಿಕೋ, ಕೊಡುವೆನು." ಎಂದು ಕೇಳಿದನು. ಇಂದ್ರನು ಆನಂದಭರಿತನಾಗಿ " ನಿನ್ನ ಸದ್ವರ್ತನೆಯನ್ನು ನನಗೆ ಕೊಡಬೇಕೆಂದು ಕೇಳಿದನು. ಪ್ರಹ್ಲಾದನು ಹಾಗೆ ಕೊಟ್ಟಲ್ಲಿ ತನಗೆ ಕೇಡಾಗುವುದೆಂದು ತಿಳಿದಿದ್ದಾಗ್ಯೂ ತನ್ನ ಪ್ರತಿಜ್ಞೆಯನ್ನು ನೆರವೇರಿಸುವ ಉದ್ದೇಶದಿಂದ ಆ ಶಿಷ್ಯನಿಗೆ ಅದರಂತೆಯೇ ತನ್ನ ಸದ್ವರ್ತನೆಯನ್ನು ಕೊಟ್ಟನು. ಅಷ್ಟರಲ್ಲಿ ಆತನ ಶರೀರದಿಂದ ತೇಜೋಮಯವಾದ ಮೂರ್ತಿಯೊಂದು ಹೊರಗೆ ಬರಲು ಅದನ್ನು ನೋಡಿ ನೀನು ಯಾರೆಂದು ಪ್ರಹ್ಲಾದನು ಕೇಳಿದನು. ಆ ಮೂ

ತ್ರಿಯು ಅಯ್ಯಾ ! ನಾನು ನಿನ್ನ ಸತ್ಪ್ರವರ್ತನೆಯ ಸ್ವರೂಪನು. ನೀನು ನನ್ನನ್ನು ಹೊರಪಡಿಸಿದುದರಿಂದ ನಿನ್ನ ಶಿಷ್ಯನಲ್ಲಿಗೆ ನಾನು ಹೋಗಿಸೇರುವೆನು ; ಎಂದು ಹೇಳುತ್ತಿರುವಷ್ಟರಲ್ಲಿ ಮತ್ತೊಂದುರೂಪವು ಆತನ ಶರೀರದಿಂದ ಹೊರಹೊರಡಲು ಅದನ್ನು ನೋಡಿ ಪ್ರಹ್ಲಾದನು ನೀನು ಯಾರೆಂದು ಕೇಳಿದನು. ಅದಕ್ಕೆ ಆ ರೂಪವು 'ಅಯ್ಯಾ ! ನಾನು ಧರ್ಮಸ್ವರೂಪನು ಸತ್ಪ್ರವರ್ತನೆಯಿದ್ದಲ್ಲಿಗೇ ನಾನು ಹೋಗುವೆನೆಂದು ಹೊರಟುಹೋಯಿತು. ಹಾಗೆಯೇ ಸತ್ಯವೂ ಸುಕೃತವೂ, ಬಲವೂ, ಸಂಪತ್ತೂ ಒಂದೊಂದಾಗಿ ಆತನನ್ನು ಬಿಟ್ಟು ಹೋಗುವಾಗ ಆತನನ್ನು ಕುರಿತು, ಮಹಾತ್ಮಾ ! ನಿನ್ನ ಸಚ್ಚಾರಿತ್ರದಿಂದ ಮೂರು ಲೋಕಗಳೂ ನಿನ್ನ ಕೈಯಲ್ಲಿದ್ದವು; ಇದನ್ನು ತಿಳಿದು ದೇವೇಂದ್ರನು ನಿನ್ನ ಸದ್ವರ್ತನೆಯನ್ನು ತೆಗೆದುಕೊಂಡನು; ಆ ಸದ್ವರ್ತನೆಯನ್ನು ಧರ್ಮವೂ, ಸತ್ಯವೂ, ಸುಕೃತವೂ, ಬಲವೂ ನಾನೂ ಸಹ ಆಶ್ರಯಿಸಿರುವೆವು, ಎಂದು ಹೇಳಿ ಸತ್ಪ್ರವರ್ತನೆಯು ಸೇರಿದ ಸ್ಥಳವನ್ನೇ ತಾನೂ ಸೇರಿತು.

ಮತ್ತೊಂದು ವಿಶೇಷಧರ್ಮವನ್ನು ಈ ಗ್ರಂಥದಲ್ಲಿನ ಕಥೆಗಳಿಂದ ತಿಳಿಯಬಹುದು. ಧರ್ಮವು ದೇಶಕಾಲ ಸಂದರ್ಭಗಳಿಗನುಗುಣವಾಗಿರುವುದು. ಒಬ್ಬನಿಗೆ ಧರ್ಮವಾಗಿರತಕ್ಕುದು ಮತ್ತೊಬ್ಬನಿಗೆ ಅಧರ್ಮವು. ಮತ್ತು ಪ್ರತಿಯೊಬ್ಬ ಮನುಷ್ಯನಿಗೂ ಅವನವನ ಧರ್ಮವು ಪ್ರತ್ಯೇಕವಾಗಿರುವುದು. ಉಪಾಧ್ಯಾಯನ ಆಜ್ಞಾನುಸಾರ ನಡೆಯುವುದು ಶಿಷ್ಯನ ಧರ್ಮವು. ಶಿಷ್ಯರನ್ನು ಆಜ್ಞಾಪಿಸುವುದು ಉಪಾಧ್ಯಾಯನ ಧರ್ಮವು. ಬಾಲಕರನ್ನು ಕಾಪಾಡಿ ಗುಣವಂತರನ್ನಾಗಿ ಮಾಡುವುದು ತಂದೆಗೆ ಧರ್ಮವು. ತಂದೆಯು ಹೇಳಿದಂತೆ ನಡೆಯುವುದೇ ಮಕ್ಕಳಿಗೆ ಧರ್ಮವು. ಆದುದರಿಂದ ತನ್ನ ಧರ್ಮವನ್ನು ತಿಳಿದು ಅದರಂತೆ ನಡೆದಹಾಗೆಲ್ಲಾ ಮನುಷ್ಯನು ಲೋಕಕ್ಕೆ ಉಪಕಾರಿಯಾಗುವನು. ಕುಟುಂಬಾಧಿಪತಿಗೆ ವಿಹಿತವಾದ ಧರ್ಮಗಳನ್ನು ಬಾಲಕರಾದ ನೀವು ತಿಳಿಯದಿದ್ದರೆ ಏನೂ ಬಾಧಕವಿಲ್ಲ. ಆದರೆ ನಿಮಗೆ ವಿಹಿತವಾದ ವಿದ್ಯಾರ್ಥಿಧರ್ಮವನ್ನು ತಿಳಿದು ಅದರಂತೆ ಆಚರಿಸುವುದು ಅತ್ಯಾವಶ್ಯಕವು. ಹೀಗೆ ಮನುಷ್ಯರು ತಮ್ಮ ಅಂತಸ್ತಿಗೆ ತಕ್ಕ ಧರ್ಮಗಳನ್ನು ಆಚರಿಸಬೇಕೆಂದು ಭಾರತವು ಖಂಡಿತವಾಗಿ ಬೋಧಿಸುತ್ತದೆ.

ಈ ಮಹಾಕಾವ್ಯದಲ್ಲಿ ಎಲ್ಲಾ ಅಂತಸ್ತಿನ ಜನಗಳ ಧರ್ಮಗಳೂ ವಿವರಿಸಲ್ಪಟ್ಟಿವೆ; ಮತ್ತು ಈ ಗ್ರಂಥವು ಸಮಸ್ತರಿಗೂ ಉಪಯುಕ್ತವಾದುದು. ಕೆಲವು

ಗ್ರಂಥಗಳು ಪಂಡಿತರಿಗೆ ಮಾತ್ರವೂ ಮತ್ತೆ ಕೆಲವು ಬಾಲಕರಿಗೂ ಕೆಲವು ಸ್ತ್ರೀಯರಿಗೂ ಕೆಲವು ಕ್ಷತ್ರಿಯರಿಗೂ ಮಾತ್ರ ಉಪಯುಕ್ತವು, ಉದ್ಗ್ರಂಥವು ಪಂಡಿತರಿಗೆ ಮಾತ್ರ ತಿಳಿಯುವುದೇ ಹೊರತು ಪಾಮರರಿಗೆ ತಿಳಿಯದು. ನ್ಯಾಯಶಾಸ್ತ್ರವು ನ್ಯಾಯವಾದಿಗೆ ಅನುಕೂಲವೇ ಹೊರತು ರೈತನಿಗೆ ಉಪಯುಕ್ತವಾದುದಲ್ಲ. ಹಾಗಲ್ಲದೇ ಈ ಗ್ರಂಥವು ಪಂಡಿತರಿಗೂ ಪಾಮರರಿಗೂ ಮತ್ತು ಎಲ್ಲಾ ತರಹ ಜನಗಳಿಗೂ ಪ್ರಯೋಜನಕರವಾದುದು. ಎಂತಹವನಾದರೂ ಬೇರೆ ಯಾವ ಪುಸ್ತಕವನ್ನೂ ಓದದೇ ಇದ್ದಾಗ್ಯೂ ಇದೊಂದನ್ನೇ ಓದಿ ತನ್ನ ಅಂತಸ್ತಿನ ಧರ್ಮವನ್ನು ತಿಳಿದುಕೊಳ್ಳಬಹುದು.

(೨) ಅಲ್ಲದೆ ಮಹಾಭಾರತವು ತತ್ವಶಾಸ್ತ್ರ ಬೋಧಕವಾಗಿರುವುದು. ತತ್ವಶಾಸ್ತ್ರವು ಬುದ್ಧಿಗೆ ಮಾತ್ರ ವಿಷಯವಾಗಿದೆ. ಅಂದರೆ ಮನುಷ್ಯನ ಮೇಧಾಶಕ್ತಿಯಿಂದಲೂ ವಿವೇಚನೆಯಿಂದಲೂ ಗ್ರಹಿಸಲ್ಪಡತಕ್ಕ ಶಾಸ್ತ್ರವು. ಅದು ಜೀವೇಶ್ವರ ಸ್ವರೂಪಗಳನ್ನೂ, ಪ್ರಪಂಚದ ಉತ್ಪತ್ತಿನಾಶಗಳ ಕ್ರಮವನ್ನೂ ಬುದ್ಧಿಗೆ ತಿಳಿಸುವುದು. ಹಿಂದೂ ಮತಕ್ಕೆ ಆಧಾರವಾದ ತತ್ವಶಾಸ್ತ್ರವು ಈ ಗ್ರಂಥದಲ್ಲಿ ನಿರೂಪಿಸಲ್ಪಟ್ಟಿದೆ. ಅದೆಂತೆಂದರೆ :—ಈಶ್ವರನೊಬ್ಬನೇ. ಆತನು ಸರ್ವವ್ಯಾಪಿ. ಸರ್ವಭೂತಾತ್ಮನಾಗಿ ಸೂರ್ಯಚಂದ್ರರಲ್ಲಿಯೂ, ನಕ್ಷತ್ರಗಳಲ್ಲಿಯೂ, ಸಮಸ್ತ ಜೀವರಾಶಿಗಳಲ್ಲಿಯೂ ಎಲ್ಲಾ ಚರಾಚರ ವಸ್ತುಗಳಲ್ಲಿಯೂ ವ್ಯಾಪಿಸಿರುವನು. ವಿಚಾರ ಮಾಡುವಲ್ಲಿ ಸಕಲ ಪ್ರಾಣಿಗಳಲ್ಲಿಯೂ ಇರುವ ಪರಮಾತ್ಮನು ಒಬ್ಬನೇ. ಸಮಸ್ತ ಪ್ರಾಣಿಗಳ ಚೈತನ್ಯಶಕ್ತಿಯೂ ಒಂದೆಯೇ. ಅದೇ ಈಶ್ವರನ ಸ್ವರೂಪವು. ಹೀಗಿರುವುದರಿಂದ ಅನೇಕವಾಗಿ ಕಾಣಬರುವ ಜೀವಕೋಟಿಗಳೆಲ್ಲವೂ ಒಂದರ ಖಂಡಗಳೇ ಎಂದು ತಿಳಿಯಬೇಕು. ಆದುದರಿಂದ ಸಮಸ್ತ ಪ್ರಾಣಿಗಳೂ ತತ್ವತಃ ಒಂದೆಯೇ. ಒಂದುಪ್ರಾಣಿಗೆ ಒಳ್ಳೇದಾದುದು ಸಮುದಾಯಕ್ಕೂ ಹಿತಕರವೇ. ಸಮುದಾಯಕ್ಕೆ ಹಿತವಾದುದು ಒಂದೊಂದು ಪ್ರಾಣಿಗೂ ಸುಖಕರವಾದುದಾಗಿಯೇ ಇರಬೇಕು. ಆದುದರಿಂದ ನಾವು ಬೇರೇಜೀವವನ್ನು ಹಿಂಸಿಸಿದಾಗ ನಮ್ಮನ್ನೇ ತೊಂದರೆಪಡಿಸಿಕೊಂಡಂತಾಗುವುದು. ಪಶುಪಕ್ಷ್ಯಾದಿಗಳಲ್ಲಿರುವ ಚೈತನ್ಯವೂ ನಮ್ಮದೇನೇ ಎಂದು ಭಾವಿಸಿ ಆ ಪ್ರಾಣಿಗಳನ್ನೂ ನಮ್ಮಂತೆಯೇ ಕಾಪಾಡಬೇಕು. ಈ ಅರ್ಥದಲ್ಲಿ ಶಿಬಿಚಕ್ರವರ್ತಿಯು ಪಾರಿವಾಳ ಪಕ್ಷಿಯನ್ನು ಕಾಪಾಡಿದ ಕಥೆ

ಯೊಂದಿರುವುದು. ತಮ್ಮ ಪ್ರಭುತ್ವಕ್ಕೆ ಒಳಪಟ್ಟಿರುವ ಸರ್ವಪ್ರಾಣಿಗಳನ್ನೂ ಕಾಪಾಡಬೇಕಾದುದು ದೊರೆಗಳ ಮುಖ್ಯ ಧರ್ಮವು. ಶಿಬಿಚಕ್ರವರ್ತಿಯು ಈ ಧರ್ಮದಿಂದ ವರ್ತಿಸುತ್ತಿರುವನೇ ಇಲ್ಲವೇ ಎಂದು ಪರೀಕ್ಷಿಸುವುದಕ್ಕಾಗಿ ಇಂದ್ರಾಗ್ನಿಗಳು ಗಿಡುಗ ಪಾರಿವಾಳ ಪಕ್ಷಿಗಳ ರೂಪಗಳನ್ನು ಧರಿಸಿದರು. ಆಗ ಗಿಡುಗನಿಂದ ಅಟ್ಟಲ್ಪಟ್ಟ ಪಾರಿವಾಳವು ಮಹಾಭಯದಿಂದ ಕೂಡಿದುದಾಗಿ ಚಕ್ರವರ್ತಿಯ ಬಳಿಗೆ ಹೋಗಿ "ದೊರೆಯೇ, ನನ್ನನ್ನು ಕಾಪಾಡು" ಎಂದು ಹೇಳಿ ಅವನ ಮರೆಹೊಕ್ಕಿತು. ಆಗ ಗಿಡುಗನು ದೊರೆಯನ್ನು ನೋಡಿ ಇದು ನನಗೆ ವಿಹಿತವಾದ ಆಹಾರವಾಗಿರುವುದರಿಂದಲೂ ನಾನು ಅದನ್ನು ಅಟ್ಟಿಕೊಂಡು ಬಂದುದರಿಂದಲೂ ನನ್ನ ಆಹಾರವನ್ನು ನನಗೆ ಕೊಡಬೇಕೆಂದು ಕೇಳಲು "ಶರಣಾಗತರನ್ನು ಶತ್ರುಗಳಿಗೆ ಒಪ್ಪಿಸುವುದು ನನ್ನ ಧರ್ಮವಲ್ಲ" ವೆಂದು ದೊರೆಯು ಉತ್ತರ ಹೇಳಿದನು. ಆದಕ್ಕೆ ಆ ಗಿಡುಗನು "ಎಲೈ ರಾಜನೇ! ಈಗ ನೀನು ಆ ಪಾರಿವಾಳವನ್ನು ನನಗೆ ಕೊಡದಿದ್ದರೆ ನಾನು ಹಸಿವಿನಿಂದ ಪ್ರಾಣತ್ಯಾಗಮಾಡುವೆನು. ಒಂದು ಪ್ರಾಣಿಯನ್ನು ಕಾಪಾಡುವುದಕ್ಕಾಗಿ ಮತ್ತೊಂದು ಪ್ರಾಣಿಯನ್ನು ಕೊಲ್ಲುವುದು ನಿನಗೆ ಧರ್ಮವೇ? ಎಂದು ಕೇಳಿತು. ಚಕ್ರವರ್ತಿಯು ಪಾರಿವಾಳದ ಹೊರತು ಬೇರೆ ಯಾವ ಆಹಾರವನ್ನಾದರೂ ಕೇಳು ಕೊಡುವೆನು, ಎಂದು ಎಷ್ಟು ಬಗೆಯಿಂದ ಹೇಳಿದರೂ ಕೇಳದೆ, ಕೊನೆಗೆ "ಆ ಪಾರಿವಾಳದ ತೂಕದಷ್ಟು ನಿನ್ನ ಶರೀರದ ಮಾಂಸವನ್ನು ಕೊಟ್ಟರೆ ಒಪ್ಪುತ್ತೇನೆ" ಎಂದು ಗಿಡುಗವು ಹೇಳಿತು. ಆದಕ್ಕೆ ದೊರೆಯು ಹಾಗೆಯೇಆಗಲೆಂದು ಸಂತೋಷಪಟ್ಟು ತ್ರಾಸಿನಲ್ಲಿ ಪಾರಿವಾಳವನ್ನಿಟ್ಟು ತನ್ನ ಶರೀರದಿಂದ ಅನೇಕ ತುಂಡುಗಳನ್ನು ಕುಯ್ದು ಹಾಕಿದರೂ ತೂಕಕ್ಕೆ ಸಾಲಲಿಲ್ಲ. ಆಗ ಚಕ್ರವರ್ತಿಯು ಗಾಯಪಟ್ಟಿದ್ದ ತನ್ನ ಶರೀರವನ್ನೇ ತ್ರಾಸಿನಲ್ಲಿಟ್ಟನು. ಆಗ ಇಂದ್ರಾಗ್ನಿಗಳು ಪ್ರತ್ಯಕ್ಷರಾಗಿ ಆತನ ಶರಣಾಗತರಕ್ಷಕತ್ವವನ್ನು ಹೊಗಳಿ ಆತನಿಗೆ ಬೇಕಾದ ವರಗಳನ್ನು ಕೊಟ್ಟು ತಮ್ಮ ಲೋಕಗಳಿಗೆ ತೆರಳಿದರು.

(3) ಮಹಾಭಾರತವು ದೊಡ್ಡಚರಿತ್ರೆ. ಇದು ಹದಿನೆಂಟು ಪರ್ವಗಳುಳ್ಳದಾಗಿ ಐದು ಸಾವಿರ ವರ್ಷಗಳ ಹಿಂದೆ ನಡೆದ ನಿಜವಾದ ವೃತ್ತಾಂತವನ್ನು ಹೇಳುತ್ತಿದೆ. ಭಗವಂತನಾದ ಶ್ರೀ ಕೃಷ್ಣನು ಐದುಸಾವಿರ ವರ್ಷಗಳಹಿಂದೆ ತನ್ನ ಮಾನು

ಷಶರೀರವನ್ನು ಬಿಟ್ಟು ಹೋಗಲು ಅಂದಿನಿಂದ ಕಲಿಯುಗವು ಪ್ರಾರಂಭವಾಯಿತು. ಮಹಾಭಾರತದ ಕಥೆಯು ಅಲ್ಲಿಗೆ ಮುಗಿಯಿತು. ಇದು ನಿಜವಾದ ಸಮಾಚಾರವಲ್ಲದೇ ಕಲ್ಪಿತ ಕಥೆಯಲ್ಲ. ಮಹಾ ಬಾಹುಬಲವುಳ್ಳ ಕ್ಷತ್ರಿಯರನೇಕರು ಭಾರತ ಯುದ್ಧದಲ್ಲಿ ಮಡಿದರು. ಇದಕ್ಕೆ ಕಾರಣವೇನಂದರೆ ಮಹಾಬಲಪರಾಕ್ರಮಶಾಲಿಗಳಿಂದ ಕ್ಷತ್ರಿಯರಾಜರು ಹಿಂದೂದೇಶವನ್ನು ವಜ್ರಕವಚದಂತೆ ಕಾಪಾಡಿಕೊಂಡಿದ್ದರು. ಪರದೇಶೀಯರು ಒಳಕ್ಕೆನುಳಿಯಲು ಆಸ್ಪದವಿರಲಿಲ್ಲ. ಆದರೆ ಅನ್ಯದೇಶೀಯರು ಇಲ್ಲಿಗೆ ಬಂದು ಪ್ರಭುಗಳಾಗುವುದಕ್ಕೂ ಇಲ್ಲಿನ ಆರ್ಯರು ಅವರ ದಾಸರಾಗುವುದಕ್ಕೂ ಈಶ್ವರನ ಸಂಕಲ್ಪರೀತಿಯಾಗಿ ಸಮಯ ಒದಗಿಬಂತು. ಆದಕ್ಕಾಗಿಯೇ ಇತರರಿಂದಮಾಡಲು ಅಸಾಧ್ಯವಾದ ಈ ಕೆಲಸವನ್ನು ನೆರವೇರಿಸುವುದಕ್ಕೆ ಶ್ರೀಕೃಷ್ಣನೇ ಅವತಾರಮಾಡಿ ಅವರನ್ನು ಪರಸ್ಪರ ಒಬ್ಬರಿಂದೊಬ್ಬರನ್ನು ಕೊಲ್ಲಿಸಿ ಪರದೇಶಿಯರಿಗೆ ದಾರಿಮಾಡಿಕೊಟ್ಟನು.

ಕಲಿಯುಗದಲ್ಲಿ ಜನಗಳು ಇಹಲೋಕದ ಭೋಗಗಳಲ್ಲಿ ಆಸಕ್ತರಾಗಿರುವರು. ಅವರಿಗೆ ದೇವತೆಗಳಲ್ಲಿಯೂ ಅವರು ಮಾಡುತ್ತಿರುವ ಕಾರ್ಯಗಳಲ್ಲಿಯೂ ನಂಬಿಕೆಯು ತಪ್ಪಿಹೋಗಿರುವುದು. ತಮ್ಮ ಇಂದ್ರಿಯಗಳಿಗೆ ಗೋಚರವಾಗುವ ಸಂಗತಿಗಳನ್ನು ಮಾತ್ರ ನಿಜವೆಂದು ಭಾವಿಸುವರಲ್ಲದೇ ಇಂದ್ರಿಯಾತೀತವಾದವುಗಳನ್ನು ಸ್ವಲ್ಪವೂ ನಂಬುವುದಿಲ್ಲ. ದೇವತೆಗಳು ತಮ್ಮ ತೇಜಸ್ಸಿನಿಂದ ಸರ್ವದಾ ಪ್ರಕಾಶಿಸುತ್ತಿರುವವರಾಗಿ ನಮಗೆ ಅನೇಕ ಉಪಕಾರಗಳನ್ನು ಮಾಡುತ್ತಿದ್ದರೂ ಅವರಿರುವುದನ್ನೇ ನಂಬದಿರುವುದನ್ನು ನೋಡಿ ವಿಷಾದಿಸಬೇಕಾಗಿದೆ. ಕೆಲವರು ದೇವತೆಗಳಿಲ್ಲವೆಂದು ಖಂಡಿತವಾಗಿ ಹೇಳದಿದ್ದರೂ ಅವರ ನಡವಳಿಕೆಗಳಿಂದ ಅವರಿಗೆ ದೇವತೆಗಳಲ್ಲಿ ನಂಬಿಕೆ ಯಿಲ್ಲವೆಂದು ತಿಳಿಯಬಹುದಾಗಿದೆ. ಸದಾಕಾಲದಲ್ಲಿಯೂ ದೇವತೆಗಳು ಮಾಡುತ್ತಿರುವ ಕಾರ್ಯಗಳನ್ನು ಅಂತಹವರು ಪ್ರಕೃತಿಯ ಕಾರ್ಯಗಳೆಂದು ತಿಳಿಯುವರು. ಸೂರ್ಯನು ಪ್ರಕಾಶಿಸುವುದು, ಚಂದ್ರನು ತಂಪಾದ ಕಿರಣಗಳನ್ನು ಹೊಂದಿರುವುದು, ನೀರು ಪ್ರವಹಿಸುವುದು, ಬೆಂಕಿ ಉರಿಯುವುದು, ಇವನ್ನೆಲ್ಲಾ ಅವರು ಸ್ವಭಾವವೆಂದು ತಿಳಿದಾಗ್ಯೂ, ಇವೆಲ್ಲವೂ ದೇವತೆಗಳ ಅನುಗ್ರಹದಿಂದಲೇ ನಡೆಯುತ್ತಿವೆ. ಒಲೆಯಲ್ಲಾಗಲೀ ಬೇರೆ ಸ್ಥಳದಲ್ಲಾಗಲೀ ಬೆಂಕಿ ಉರಿಯುತ್ತಿರುವಾಗ ಒಬ್ಬ ದೇವತೆಯು ಆ ಕಾರ್ಯವನ್ನು ಮಾಡುತ್ತಾ ಆ ಮೂಲಕ ತಾನು ಈ ಪ್ರಪಂಚದಲ್ಲಿ ಪ್ರಕಟಗೊಳ್ಳುವನೆಂದು ಭಾವಿಸಬೇಕು.

ಬೆಂಕಿಯು ಕೇವಲ ಅಂಗಾರಾಮ್ಲಸಂಯೋಗಜನ್ಯವಸ್ತುಮಾತ್ರವೇ ಅಲ್ಲ. ಇದು ಚೈತನ್ಯವೂ ಜ್ಞಾನವೂ ಇರತಕ್ಕ ಒಬ್ಬ ದೇವನ ಸ್ಥೂಲಾಕೃತಿಯು. ಇತರ ಲೋಕಗಳಲ್ಲಿ ಅಗ್ನಿದೇವತೆಯು ಬೇರೇ ರೂಪದಿಂದಿದ್ದು ಈ ಲೋಕದಲ್ಲಿ ಬೆಂಕಿಯರೂಪದಿಂದ ಕಾಣಿಸಿಕೊಳ್ಳುತ್ತಿರುವನು. ಗಂಗಾನದಿಯ ಹೆಚ್ಚಾದ ಪ್ರವಾಹದಿಂದ ಒಬ್ಬ ದೇವತೆಯು ಅಲ್ಲಿರುವುದಾಗಿ ತಿಳಿಯಬಹುದು. ಆ ದೇವತೆಯು ಸ್ವರ್ಗಲೋಕದಲ್ಲಿ ಬೇರೇರೂಪದಿಂದಿದ್ದಾಗ್ಯೂ ಈ ಲೋಕದಲ್ಲಿ ಪ್ರವಾಹರೂಪದಿಂದ ಪ್ರಕಾಶಿಸುತ್ತಿರುವಳು. ಇಂತಹ ವಿಷಯಗಳನ್ನು ನಂಬದವನು ಮಹಾಭಾರತವನ್ನು ಚೆನ್ನಾಗಿ ತಿಳಿಯಲಾರನು. ಏಕೆಂದರೆ ಈ ಗ್ರಂಥದಲ್ಲಿ ವಿಷಯಗಳು ನಮ್ಮ ಚರ್ಮಚಕ್ಷುಸ್ಸಿಗೆ ಕಾಣುವಂತಲ್ಲದೇ ನಿಜವಾಗಿ ಹೇಗೆ ನಡೆಯಿತೆಂಬುದನ್ನು ಅದು ತಿಳಿಸುತ್ತದೆ. ಹೇಗೆಂದರೆ ಖಾಂಡವವೆಂಬ ಅರಣ್ಯವು ಬೆಂಕಿಯಿಂದ ಸುಡಲ್ಪಟ್ಟಿತೆಂದು ಹೇಳದೆ ಅಗ್ನಿದೇವತೆಯು ಅದನ್ನು ಕಬಳಿಸಿದನೆಂದು ಈ ಗ್ರಂಥವು ಹೇಳುತ್ತದೆ. ದೇವತೆಗಳು ಮಾಡುವ ಕಾರ್ಯಗಳನ್ನು ಈ ಗ್ರಂಥವು ಹೇಳುವುದರಿಂದ ಆ ದೇವತೆಗಳಲ್ಲಿ ನಂಬಿಕೆಯಿಲ್ಲದವರಿಗೆ ಈ ಸಂಗತಿಗಳು ವಿಜಾತೀಯವಾಗಿಯೂ ಕಲ್ಪನೆಗಳಾಗಿಯೂ ತೋರುವುವು. ಈಗಲೂ ದೇವತೆಗಳು ಎಂದಿನಂತೆ ತಮ್ಮ ಕೆಲಸಗಳನ್ನು ನಡೆಸುತ್ತಿದ್ದಾಗ್ಯೂ ಈ ಕಾಲದವರು ಭೋಗೈಕಪರಾಯಣರಾಗಿ ದೇವತೆಗಳನ್ನು ಅಸಡ್ಡೆಮಾಡುವುದರಿಂದ ಅವರು ಇಂತಹವರ ಮಧ್ಯೆ ಪ್ರಕಟಗೊಳ್ಳರು. ಶುದ್ಧಾತ್ಮರಾದವರಿಗೆ ಈಗಲೂ ಅವರು ಕಾಣುತ್ತಲೇ ಇರುವರು. ಅಂಥವರು ಈ ಗ್ರಂಥದಲ್ಲಿನ ಕಥೆಗಳನ್ನೂ ನಂಬುವರು.

ಪ್ರಪಂಚದಲ್ಲಿ ದೃಶ್ಯಭಾಗವು ಸ್ವಲ್ಪ, ಅದೃಶ್ಯಭಾಗವು ಅತಿಶಯವಾಗಿರುವುದು. ಮತ್ತು ಈ ಅದೃಶ್ಯ ಪ್ರಪಂಚದಲ್ಲಿ ದೇವತೆಗಳಿದ್ದುಕೊಂಡು ಈ ದೃಶ್ಯಪ್ರಪಂಚದ ವ್ಯಾಪಾರಗಳನ್ನೆಲ್ಲಾ ನಡೆಸುವರು. ಆದುದರಿಂದ ಈ ಚರ್ಮಚಕ್ಷುಸ್ಸಿಗೆ ಗೋಚರವಾಗದಿರುವ ವಿಷಯಗಳನ್ನು ಅಸಾಧ್ಯಗಳೆಂದು ಹೇಳುವುದು ಸರಿಯಲ್ಲ. ಪ್ರಪಂಚದಲ್ಲಿ ನಮ್ಮ ಪಂಚೇಂದ್ರಿಯಗಳಿಗೆ ಗೋಚರವಿಲ್ಲದ ಲೋಕಗಳೂ ಜೀವರಾಶಿಗಳೂ ಅನೇಕವಾಗುಂಟು. ಅವರು ಈ ಭೂಲೋಕದ ಕಾರ್ಯಗಳನ್ನು ನಡೆಸುವರು.

ಪೂರ್ವದಲ್ಲಿ ದೇವತೆಗಳು ಕೆಲವುವೇಳೆ ತಾವಾಗಿಯೂ ಕೆಲವುವೇಳೆ ಮಹಾತ್ಮರಾದ ಋಷಿಗಳ ಮೂಲಕವಾಗಿಯೂ ಮಂತ್ರ, ಧ್ಯಾನ, ಅಸ್ತ್ರವಿದ್ಯೆ ಮೊದಲಾದ ಅನೇಕ ವಿದ್ಯೆಗಳನ್ನು ಜನಗಳಿಗೆ ಉಪದೇಶಿಸುತ್ತಿದ್ದರು. ಮಂತ್ರಗಳಿಗೂ ನಮಗೆ ಗೋಚರವಿಲ್ಲದ ಲೋಕಗಳಲ್ಲಿನ ಶಕ್ತಿವಿಶೇಷಗಳಿಗೂ ವಿಶೇಷ ಸಂಬಂಧವಿದೆ. ಇದರಿಂದ ಅವನ್ನುಚ್ಚರಿಸಿದ ಮಾತ್ರದಿಂದಲೇ ಅದ್ಭುತವಾದ ವ್ಯಾಪಾರಗಳು ನಡೆದು ಸಂಕಲ್ಪಸಿದ್ಧಿಯಾಗುತ್ತಿದ್ದವು. ಧ್ಯಾನಮಾಡಿದ ಮಾತ್ರದಿಂದಲೇ ಕಾರ್ಯಗಳು ಕೈಗೂಡುವಂತಹ ಮನಶ್ಶಕ್ತಿಯನ್ನು ಅವರು ಉಪದೇಶಿಸುತ್ತಿದ್ದರು. ದೇವತೆಗಳನ್ನು ಧ್ಯಾನಿಸಿದಾಗ ಅವರೂ ಅಸ್ತ್ರಗಳನ್ನು ಧ್ಯಾನಿಸಿದಾಗ ಅವೂ ಅವರಿಗೆ ಪ್ರತ್ಯಕ್ಷವಾಗುತ್ತಿದ್ದವು. ಮನಸ್ಸಿನ ಶಕ್ತಿಗೆ ಈಗಲೂ ಅಷ್ಟು ಪ್ರಭಾವವಿರುವುದರಿಂದ ಪ್ರಕೃತಿಶಾಸ್ತ್ರಜ್ಞರು ಅದರ ತತ್ವವನ್ನು ತಿಳಿಯುವುದಕ್ಕಾಗಿ ಈಗಲೂ ಪ್ರಯತ್ನಪಡುತ್ತಿರುವರು. ಪೂರ್ವಕಾಲದಲ್ಲಿಯೂ ದೇವತೆಗಳ ಅನುಗ್ರಹವನ್ನು ಪಡೆದಿದ್ದ ಕೆಲವರಿಗೇ ಹೊರತು ಎಲ್ಲರಿಗೂ ಇಂತಹ ಶಕ್ತಿ ಇರಲಿಲ್ಲ. ಈಗಲೂ ಕೆಲವು ಯೋಗಿಗಳು ದೇವತೆಗಳ ಅನುಗ್ರಹವನ್ನು ಪಡೆದವರಾಗಿ ಅತಿವಿಚಿತ್ರಗಳಾದ ಕಾರ್ಯಗಳನ್ನು ಮಾಡುತ್ತಿರುವರು. ಈ ಕಾಲದವರು ಇಂತಹವುಗಳಲ್ಲಿ ನಂಬಿಕೆಯಿಲ್ಲದವರಾದುದರಿಂದ ಇವರಿಗೆ ಅಂತಹ ಶಕ್ತಿಯುಂಟಾಗಲು ಅವಕಾಶವಿಲ್ಲ.

ಸಾರಥಿಯು ರಥವನ್ನು ನಡೆಸುವ ಕ್ರಮದಲ್ಲಿ ದೇವತೆಗಳು ಈ ಲೋಕವನ್ನು ನಡೆಸುವರು. ನಾವು ರಥವನ್ನು ಹತ್ತಿ ಹಗ್ಗವನ್ನು ಯಾವ ಕಡೆಗೆ ತಿರುಗಿಸಿದರೆ ಕುದುರೆಗಳು ಆಕಡೆಗೆ ರಥವನ್ನು ಎಳೆಯುವ ರೀತಿಯಲ್ಲಿ ದೇವತೆಗಳ ಆಜ್ಞೆಗೊಳಪಟ್ಟು ಲೋಕಗಳು ನಡೆಯುತ್ತಿರುವುವು. ದೇವತೆಗಳು ಪ್ರಪಂಚವನ್ನು ಸನ್ಮಾರ್ಗದಲ್ಲಿಯೇ ನಡೆಸುವರು. ಈ ಪ್ರಪಂಚದ ಸೃಷ್ಟಿಯಾದಿಯಾಗಿ ಲಯಪರ್ಯಂತವೂ ಅದಕ್ಕುಂಟಾಗುವ ಗತಿಗಳನ್ನು ಸಂಸಾರವೆಂದು ಹೇಳುತ್ತಾರೆ. ಈ ಪ್ರಪಂಚವು ಒಂದು ದೊಡ್ಡದಾದ ಸಂಸಾರಮಾರ್ಗದಲ್ಲಿ ಹೋಗುತ್ತಿರುವುದು. ಮತ್ತು ಈ ಪ್ರಧಾನಮಾರ್ಗದಿಂದ ಅಲ್ಲಲ್ಲಿ ಸೀಳುದಾರಿಗಳು ಒಡೆದಿವೆ. ಒಂದೂರಿನಿಂದ ಮತ್ತೊಂದೂರಿಗೆ ಅನೇಕ ಮಾರ್ಗಗಳಿದ್ದರೂ ಸರಿಯಾದ

ಮಾರ್ಗವನ್ನು ನಾವು ತಿಳಿದಿದ್ದು ಅದರಲ್ಲಿ ಹೋಗುವುದಾದರೆ ಜಾಗ್ರತೆಯಾಗಿ ಊರನ್ನು ಸೇರುವೆವು. ದೇವತೆಗಳು ಮನುಷ್ಯರನ್ನು ಒಳ್ಳೆಯ ದಾರಿಯಲ್ಲಿ ಹೋಗುವಂತೆ ಪ್ರೇರಿಸುತ್ತಿದ್ದರೂ ಇವರು ತಮಗೆ ಮನೋಹರವಾಗಿ ತೋರುವ ಅಡ್ಡದಾರಿಗಳಲ್ಲಿಯೇ ನಡೆಯಲು ಇಷ್ಟಪಡುವರು. ಆ ದಾರಿಗಳು ಕೂಡುವ ಸ್ಥಳಗಳಲ್ಲಿ ದೊಡ್ಡ ದೊಡ್ಡ ಹಳ್ಳಗಳನ್ನೂ ಜನಗಳು ಅವುಗಳಲ್ಲಿ ಬೀಳದಿರುವುದ ಕ್ಕಾಗಿ ಅಲ್ಲಲ್ಲಿ ನಿಶಾನಿ ಕಂಬಗಳನ್ನೂ ದೇವತೆಗಳು ನಿರ್ಮಿಸಿರುವರು. ಅದನ್ನು ತಿಳಿದು ಒಳ್ಳೆಯ ಮಾರ್ಗವನ್ನು ಹಿಡಿದು ಹೊರಟರೆ ತಾನು ಸೇರಬೇ ಕಾದ ಸ್ಥಳವನ್ನು ಜಾಗ್ರತೆ ಸೇರುವನು. ಹಾಗಲ್ಲದೆ ತಿಳಿದುತಿಳಿದೂ ಅತ್ತಿತ್ತ ತಿರುಗಿದರೆ ಆ ಕಂಬಗಳಿಗೆ ತಗಲಿ ಹಳ್ಳಗಳಲ್ಲಿಬಿದ್ದು ಪೆಟ್ಟುತಿನ್ನುವರು. ಅಂದರೆ ಅಧರ್ಮಮಾರ್ಗವನ್ನವಲಂಬಿಸುವುದರಿಂದ ಕಷ್ಟಪಡುವರು. ಅಂತಹ ಅವಸ್ಥೆ ಯನ್ನು ದುಃಖಾನುಭವವೆಂದು ಹೇಳುವರು. ದೇವತೆಗಳು ಇಂತಹ ಅಡ್ಡದಾರಿ ಗಳನ್ನು ದುಃಖಪ್ರದವನ್ನಾಗಿ ಮಾಡದಿದ್ದಲ್ಲಿ ಜನಗಳು ಅಂತಹ ಮಾರ್ಗಗಳನ್ನು ಸೇರಿ ಸದಾಕಾಲವೂ ಆ ಮಾರ್ಗದಲ್ಲಿಯೇ ಇರುತ್ತಿದ್ದರು. ಅದನ್ನುಬಿಟ್ಟು ಸನ್ಮಾರ್ಗವನ್ನು ಸೇರುತ್ತಿರಲಿಲ್ಲ. ಹೀಗೆ ಮಾಡಿರುವುದು ಜನಗಳ ಹಿತಕ್ಕಾ ಗಿಯೇ ಮಾಡಿರುವ ಒಳ್ಳೇ ಏರ್ಪಾಡು ಎಂದು ತಿಳಿಯಬೇಕು.

ಕೆಲವು ವೇಳೆ ಒಟ್ಟು ಜನಾಂಗವೇ ದುರ್ಮಾರ್ಗವನ್ನವಲಂಬಿಸುವುದು. ಅಂತಹ ಸಂದರ್ಭದಲ್ಲಿ ದೇವತೆಗಳು ಆ ಜನಾಂಗಮಾರ್ಗದ ಅಡ್ಡವಾಗಿ ಒಂದು ಯುದ್ಧವನ್ನಾಗಲೀ ಕ್ಷಾಮವನ್ನಾಗಲೀ ಮಾರಿ ಮುಂತಾದ ಉಪದ್ರವವನ್ನಾ ಗಲೀ ಉಂಟುಮಾಡಿ ಒಳ್ಳೆಯ ಮಾರ್ಗಕ್ಕೆ ಅವರು ಬರುವವರೆಗೂ ಅವರನ್ನು ಶಿಕ್ಷಿಸುವರು. ಈಗ ನಾವು ಓದುತ್ತಿರುವ ಮಹಾಭಾರತ ಯುದ್ಧವು ಪ್ರಪಂಚ ವನ್ನು ಸನ್ಮಾರ್ಗಕ್ಕೆ ತರುವುದಕ್ಕಾಗಿ ದೇವತೆಗಳಿಂದಲೇ ಕಲ್ಪಿತವಾದದ್ದು. ಒಂದು ಯುದ್ಧದಲ್ಲಿ ಅನೇಕ ಜನಗಳೂ ಪ್ರಾಣಿಗಳೂ ಸಾಯುವುದನ್ನು ನೋಡಿ ಅಯ್ಯೋ! ಎಷ್ಟು ಭಯಂಕರವಾದ ಸಂಗತಿಯೆಂದು ನಾವು ಪಶ್ಚಾತ್ತಾಪಪಡುವೆ ವಾದರೂ, ದೇವತೆಗಳು ಅವರ ಶರೀರಗಳಿಂದ ಪ್ರಯೋಜನವಿಲ್ಲವೆಂದು ತೋರಿ ದಾಗ ಅಂತಹವರು ಬೇರೆ ಶರೀರಗಳನ್ನು ಹೊಂದುವುದಕ್ಕಾಗಿ ಈರೀತಿಯಲ್ಲಿ

ಮನುಷ್ಯರನ್ನೂ ಪ್ರಾಣಿಗಳನ್ನೂ ಒದಗಿಸುವರು. ಇದನ್ನೇ ಮರಣವೆಂದು ಹೇಳುವೆವು. ಶರೀರವು ನಾವು ತೊಡುವ ಕವಚವನ್ನು ಹೋಲುವುದು. ಶರೀರವು ದಪ್ಪವಾಗಿ ಬೆಳೆದಾಗ ಕವಚವು ಒಡೆದುಹೋಗಿ ಹೊಸ ಕವಚವು ಬೇಕಾಗುವಂತೆ ಮನೋವೃತ್ತಿಗಳು ಬೆಳೆದಹಾಗೆಲ್ಲಾ ಹೊಸ ಶರೀರಗಳು ಅವಶ್ಯಕವು. ಹೀಗೆ ಮನುಷ್ಯನು ಹೊಸ ಶರೀರಗಳನ್ನು ತೆಗೆದುಕೊಳ್ಳುವುದಕ್ಕಾಗಿ ದೇವತೆಗಳು ಸಹಾಯಮಾಡುವರಾದುದರಿಂದ ಅವರು ಸ್ತೋತ್ರಾರ್ಹರೇಹೊರತು ಅವರನ್ನು ದೂಷಿಸಬಾರದು. ಈ ಯುದ್ಧದಲ್ಲಿ ಶರೀರತ್ಯಾಗಮಾಡಿದ ಅನೇಕ ವೀರಶ್ರೇಷ್ಠರು ಸ್ವರ್ಗದಲ್ಲಿ ದೇವತೆಗಳೊಡನೆ ವಾಸಮಾಡಲು ಹೋದರು.

ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತ್ಯಾತ್ಮಕನಾದ ಪರಮಾತ್ಮನ ಸಂಕಲ್ಪವನ್ನು ನೆರವೇರಿಸುತ್ತಾ ಈ ಪ್ರಪಂಚವನ್ನು ಆ ಭಗವಂತನ ದಿವ್ಯ ಸ್ವರೂಪಕ್ಕೆ ಒಯ್ಯುವರು. ಈ ಕೆಲಸವನ್ನು ಅವರು ಮಾಡುವರೇ ವಿನಾ ಮನುಷ್ಯರ ಇಚ್ಛಾನುಸಾರ ಅವರು ವರ್ತಿಸುವುದಿಲ್ಲ. ಆದುದರಿಂದ ದೇವತೆಗಳ ಧರ್ಮವೂ ಮನುಷ್ಯರ ಧರ್ಮವೂ ಬೇರೆ ಬೇರೆ. ಮನುಷ್ಯರನ್ನು ಪರೀಕ್ಷಿಸುವುದು ದೇವತೆಗಳ ಕರ್ತವ್ಯ. ಇದಕ್ಕಾಗಿ ದೇವತೆಗಳು ಮನುಷ್ಯರಿಗೆ ಅನೇಕ ತೊಂದರೆಗಳನ್ನುಂಟುಮಾಡಿ ಅವರ ಇಂದ್ರಿಯಗಳನ್ನಾಕರ್ಷಿಸುವ ಸನ್ನಿವೇಶಗಳನ್ನು ಕಲ್ಪಿಸುವರು. ಜನರು ಮನೋದಾರ್ಢ್ಯವನ್ನೂ ಸದ್ಗುಣವನ್ನೂ ಕಲಿಯಲೆಂಬ ಉದ್ದೇಶದಿಂದ ದೇವತೆಗಳು ಅವರಿಗೆ ಅನೇಕ ವಿಘ್ನಗಳನ್ನು ಕಲ್ಪಿಸಿ ಇಂದ್ರಿಯಭೋಗಗಳಿಗೆ ವಿಷಯಗಳನ್ನು ಕಲ್ಪಿಸಿ ಕೊಡುವರು. ಜನರು ಈ ವಿಘ್ನಗಳನ್ನೆಲ್ಲಾ ಪರಿಹಾರಮಾಡಿಕೊಂಡು ವಿಷಯಗಳಲ್ಲಿ ಮಗ್ನರಾಗದೇ ಜಿತೇಂದ್ರಿಯರಾಗಿರಬೇಕು. ಇಂತಹ ಸಂದರ್ಭಗಳಲ್ಲಿ ಮನುಷ್ಯರಿಗೆ ಅಧರ್ಮಗಳಾದ ಕೆಲಸಗಳನ್ನು ದೇವತೆಗಳು ಮಾಡುವರು. ಆದುದರಿಂದ ತಪ್ಪುಮಾಡಿದುದಕ್ಕಾಗಿ ಮನುಷ್ಯರನ್ನು ದಂಡಿಸುವುದು ನ್ಯಾಯಾಧಿಪತಿಗೆ ಧರ್ಮವಾದರೂ ನಮಗೆ ಅಧರ್ಮವಾಗಿರುವಂತೆ, ಧರ್ಮದ ವಿಷಯದಲ್ಲಿ ದೇವತೆಗಳು ನಮಗೆ ಮೇಲ್ಪಂಕ್ತಿಯಲ್ಲ. ಕಳ್ಳನು ನ್ಯಾಯಾಧಿಪತಿಯ ಹಣವನ್ನು ಅಪಹರಿಸದಿದ್ದವನಾದರೂ ಅವನಲ್ಲಿ ನ್ಯಾಯಾಧಿಪತಿಗೆ ಯಾವ ಕಾರಣದಿಂದಲಾಗಲೀ ಕೋಪವಿಲ್ಲದಿದ್ದಾಗ್ಯೂ ನ್ಯಾಯಾಧಿಪತಿಯು

ಅವನನ್ನು ಶಿಕ್ಷಿಸಲು ಅರ್ಹನು. ನಿನ್ನ ದ್ರವ್ಯವನ್ನು ಯಾರಾದರೂ ಕದ್ದರೆ ನೀನು ಸಿಟ್ಟುಗೊಂಡು, "ನ್ಯಾಯಾಧಿಪತಿಯೇಕೆ ? ನಾನೇ ಕಳ್ಳನನ್ನು ಶಿಕ್ಷಿಸುವೆನು" ಎಂದು ಹೇಳಿದರೆ ನಿನ್ನ ವರ್ತನೆಯೂ ತಪ್ಪಾಗುವುದು. ನಾವು ಫಲಾಪೇಕ್ಷೆಯಿಲ್ಲದೇ ಈಶ್ವರಾಜ್ಞೆಯಂತೆ ಪ್ರವರ್ತಿಸುವುದನ್ನು ಬಿಟ್ಟು ನಮ್ಮ ಇಷ್ಟಾನುಸಾರ ಅಂದರೆ ಕಾಮಕ್ರೋಧದಿಂದ ನಡೆಯತಕ್ಕುದು ತಪ್ಪೆಂದು ನೀವು ದೊಡ್ಡವರಾದಾಗ ತಿಳಿಯುವಿರಿ.

ಒಂದು ದೇಶದವರು ತಪ್ಪುಮಾಡಿದಲ್ಲಿ ಆ ದೇಶಕ್ಕೆಲ್ಲಾ ಕೇಡುಂಟಾಗುವುದೆಂದು ಮಹಾಭಾರತವು ತಿಳಿಸುತ್ತದೆ. ಇದಕ್ಕೆ ಈಶ್ವರಾಜ್ಞೆ ಅಥವಾ ಧರ್ಮ ಎಂದು ಹೆಸರು. ಈ ಧರ್ಮವು ದೇವತೆಗಳಿಂದ ನೆರವೇರಿಸಲ್ಪಡುತ್ತದೆ. ನಮ್ಮ ದೇಶಕ್ಕೆ ಪೂರ್ವದಂತೆ ಹೆಚ್ಚಾದ ಭಾಗ್ಯವೂ ಸ್ವಾತಂತ್ರ್ಯವೂ ಉಂಟಾಗಬೇಕಾದರೆ ನಾವು ಪರಿಶುದ್ಧಾಂತಃಕರಣವುಳ್ಳವರಾಗಿಯೂ ಈಶ್ವರ ಭಕ್ತಿಯುಳ್ಳವರಾಗಿಯೂ ಧರ್ಮಿಷ್ಠರಾಗಿಯೂ ಇರಬೇಕು. ಇದಲ್ಲದೆ ಬೇರೇ ಮಾರ್ಗವಿಲ್ಲ. ಏಕಂದರೆ ಪ್ರಪಂಚವನ್ನು ಆಳತಕ್ಕವರು ದೇವತೆಗಳೇ. ಅವರು ಈಶ್ವರನ ಇಚ್ಛಾನುಸಾರ ಸದ್ವರ್ತನದಿಂದಲೇ ಜನಾಂಗವನ್ನು ಉನ್ನತಪದವಿಗೆ ತರುತ್ತಾರೆ. ಪ್ರಜೆಗಳು ಒಳ್ಳೇ ನಡವಳಿಕೆಯಿಂದ ವರ್ತಿಸಿದಲ್ಲಿ ಅಂತಹ ದೇಶಕ್ಕೆ ದೇವತೆಗಳು ಶುಭವನ್ನುಂಟುಮಾಡುವರು. ಜನಗಳು ದುರ್ಮಾರ್ಗಿಗಳಾಗಿದ್ದಲ್ಲಿ ದೊಡ್ಡ ಜನಾಂಗವೂ ಕೂಡ ಹೀನಸ್ಥಿತಿಗೆ ಬರುವುದು.

ಒಂದು ದೇಶದ ಸ್ಥಿತಿಯು ಬದಲಾವಣೆಯಾಗಬೇಕಾಗಿರುವ ಸಂದರ್ಭದಲ್ಲಿ ಆ ದೇಶದಲ್ಲಿ ಮಹಾತ್ಮರು ಅವತರಿಸುವರು. ನಮ್ಮ ದೇಶದಲ್ಲಿ ಇಂತಹ ಸಮಯವು ಐದು ಸಹಸ್ರವರ್ಷಗಳ ಹಿಂದೆ ಸಂಭವಿಸಿತ್ತು. ಇಂತಹ ಸಮಯದಲ್ಲಿ ಕೆಲವರು ಸತ್ಪುರುಷರೂ ಕೆಲವರು ಕೇವಲದುಷ್ಟಾತ್ಮರೂ ಹುಟ್ಟುವರು. ಸತ್ಪುರುಷರು ತಾವು ಪೂರ್ವಜನ್ಮದಲ್ಲಿ ಮಾಡಿದ ಪುಣ್ಯಕರ್ಮ ಪರಿಪಾಕದಿಂದ ಉತ್ತಮ ಪದವಿಯನ್ನು ಹೊಂದಿ ಇಂತಹ ವಿಪತ್ಕಾಲದಲ್ಲಿ ಮಹಾತ್ಮರಾಗಿ ಹುಟ್ಟಿ ದೇವತೆಗಳ ಕೆಲಸಗಳಲ್ಲಿ ಸಹಾಯಕರಾಗುವರು. ದುಷ್ಟರು ತಮ್ಮ ಪೂರ್ವಜನ್ಮದ ಕ್ರೂರ ಕರ್ಮವಾಸನೆಯಿಂದ ದೇವತೆಗಳು ಮಾಡುವ ಸತ್ಕಾರ್ಯಗಳಿಗೆ ಅಡ್ಡಿಮಾಡಲು

ತೆಕ್ಕ ಶಕ್ತಿಯುಳ್ಳವರಾಗಿ ಲೋಕಕಂಟಕರಾಗಿ ಜನಿಸಿ ಪ್ರಜೆಗಳಿಗೆ ಕೇಡನ್ನುಂಟು ಮಾಡುತ್ತಾ ಉತ್ತಮವಾದ ಜ್ಞಾನವನ್ನು ಹೊಂದುವವರೆಗೂ ತೊಂದರೆ ಪಡಿಸುತ್ತಿರುವರು. ಹೀಗೆ ಸತ್ಪುರುಷರೂ ದುಷ್ಟರೂ ತಮ್ಮತಮ್ಮ ಕರ್ಮಗಳಿಂದ ದೇವತೆಗಳಿಗೆ ಅನುಕೂಲ ಪ್ರತಿಕೂಲಕಾರ್ಯಗಳನ್ನು ಮಾಡುವರು. ಈ ಜೀವರು ಇಂತಹ ಜನಾಂಗಕ್ಕೆ ಅವಶ್ಯಕವಾದುದರಿಂದಲೇ ಜನ್ಮವೆತ್ತುವರು. ಆದುದರಿಂದ ದೇವತೆಗಳಲ್ಲಿ ಸ್ವಲ್ಪವೂ ಪಕ್ಷಪಾತಬುದ್ಧಿಯಿಲ್ಲ. ದುಷ್ಟರನ್ನೂ ಸತ್ಪುರುಷರನ್ನೂ ದೇವತೆಗಳು ಅವರವರಿಗೆ ಅವಶ್ಯಕವಾದ ಸ್ಥಾನಗಳಲ್ಲಿ ಹುಟ್ಟುವಂತೆ ಮಾಡುವರು. ಅಲ್ಲದೆ ಜನ್ಮಸ್ಥಾನವನ್ನು ಕಲ್ಪಿಸುವುದು ಮಾತ್ರ ದೇವತೆಗಳ ಕಾರ್ಯವೇ ವಿನಾ ಮನುಷ್ಯರ ಸ್ವಭಾವವನ್ನು ಬದಲಾಯಿಸುವುದು ಅವರಿಗೆ ಸಾಧ್ಯವಿಲ್ಲ.

ಭಾರತ ಯುದ್ಧಕ್ಕಾಗಿ ಸ್ವರ್ಗಲೋಕದಲ್ಲಿ ನಡೆದ ಸನ್ನಾಹಗಳನ್ನು ಆದಿಪರ್ವವು ಹೇಳುವುದು. ಅಲ್ಲಿ ದೇವತೆಗಳು ತಮ್ಮಲ್ಲಿ ಕೆಲವರು ಪ್ರಧಾನ ಪುರುಷರಾಗಿ ಹುಟ್ಟಬೇಕೆಂದು ನಿಶ್ಚಯಿಸಿ ಅದಕ್ಕಾಗಿ ಮೊದಲು ದೇವೇಂದ್ರ ಪದವಿಯಲ್ಲಿದ್ದ ನಾಲ್ವರನ್ನು ಕೇಳಿಕೊಂಡರು. ದೇವತೆಗಳ ದೊರೆಗೆ ಇಂದ್ರನೆಂದು ಹೆಸರು. ಈಗಿರುವ ಇಂದ್ರನು ಒಂದಾನೊಂದು ಸಮಯದಲ್ಲಿ ಗರ್ವಯುಕ್ತನಾಗಿ ದುಷ್ಕಾರ್ಯವನ್ನು ಮಾಡಲು ಮಹಾದೇವನು ಅವನಲ್ಲಿ ಕೋಪಿಸಿ ಇಂದ್ರನನ್ನು ನೋಡಿ ನಿನ್ನಂತಹ ದುಷ್ಟಸ್ವಭಾವವುಳ್ಳವನು ನನ್ನ ವಿಶ್ವಾಸಕ್ಕೆ ಪಾತ್ರನಾಗಲಾರನು, ಎಂದು ಹೇಳಿ ಆ ಸ್ಥಾನದಿಂದ ಕೆಲವುಕಾಲ ವಿಚ್ಯುತನಾಗುವಂತೆ ಶಪಿಸಿದನು. ಹಾಗೆ ಶಾಪಕೊಟ್ಟು ಆ ಇಂದ್ರನೂ ಇನ್ನೂ ಅಂತಹ ನಾಲ್ವರೂ ಮನುಷ್ಯರಾಗಿ ಹುಟ್ಟಿ ಕೆಲವು ಕಾರ್ಯಗಳನ್ನು ಮಾಡಿ ಅನಂತರ ಸ್ವರ್ಗಕ್ಕೆ ಬರಬಹುದೆಂದು ಅವರಿಗೆ ಅಪ್ಪಣೆಮಾಡಿದನು. ಹಾಗೆ ಆ ನಾಲ್ವರು ಇಂದ್ರರೂ ತಾವು ಮನುಷ್ಯಯೋನಿಯಲ್ಲಿ ಹುಟ್ಟಿದರೂ ತಾವು ದೇವತೆಗಳ ಬೀಜೋತ್ಪನ್ನರಾಗಬೇಕೆಂದೂ ಐದನೇ ಇಂದ್ರನು ತನ್ನ ಅಂಶದಿಂದ ಒಬ್ಬ ಮಗನನ್ನು ಪಡೆಯುವೆನೆಂದೂ ಮಹಾದೇವನಲ್ಲಿ ವಿಜ್ಞಾಪಿಸಿದರು. ಈಶ್ವರನು ಅವರು ಕೇಳಿದವರಗಳನ್ನು ಕೊಟ್ಟನು. ಅನಂತರದಲ್ಲಿ ಆ ನಾಲ್ವರು ಇಂದ್ರರೂ ಯಮ, ವಾಯು, ಅಶ್ವಿನೀದೇವತೆಗಳ ಅನುಗ್ರಹದಿಂದ ಯುಧಿಷ್ಠಿರ, ಭೀಮ, ನಕುಲ, ಸಹದೇವರಾಗಿ ಹುಟ್ಟಿದರು. ಮೊದಲು ಮಹರ್ಷಿಯಾಗಿದ್ದ ನರನು ದೇವೇಂದ್ರನ ಮಗನಾಗಿ ಅರ್ಜುನನೆಂಬ ಹೆಸರಿನಿಂದ

ಹುಟ್ಟಿದನು. ಈ ಐದು ಜನ ಮಹಾವೀರರೇ ಭಾರತಯುದ್ಧದಲ್ಲಿ ವಿಜಯವನ್ನು ಹೊಂದಿದವರು. ಅವರ ಚರಿತ್ರೆಯನ್ನೇ ಈ ಭಾರತದಲ್ಲಿ ಈಗ ನಾವು ಓದಲುಪಕ್ರಮಿಸಿರುವುದು.

ಆ ಮಹಾಯುದ್ಧವಾದನಂತರದಲ್ಲಿ ಬೇರೇಯುಗವು ಹುಟ್ಟುವುದೆಂದು ತಿಳಿದೇ ಶ್ರೀ ಮಹಾವಿಷ್ಣುವು ಶ್ರೀಕೃಷ್ಣನಾಗಿಯೂ ಆದಿಶೇಷನು ಬಲರಾಮನಾಗಿಯೂ ಭೂಮಿಯಮೇಲೆ ಅವತಾರ ಮಾಡಿದರು. ಪ್ರಪಂಚವನ್ನು ಕಾಪಾಡುವ ಧರ್ಮಕ್ಕೆ ಭಂಗವನ್ನುಂಟುಮಾಡುವ ಅಧರ್ಮವನ್ನು ನಿವಾರಣೆಮಾಡುವುದಕ್ಕಾಗಿ ಈಶ್ವರನು ಧರಿಸುವ ಪ್ರಾಕೃತರೂಪವನ್ನು ಅವತಾರವೆಂದು ದೊಡ್ಡವರು ಹೇಳುವರು.

ಭರತನೆಂದು ಪ್ರಸಿದ್ಧನಾದ ಚಕ್ರವರ್ತಿಯ ವಂಶದಲ್ಲಿ ಹುಟ್ಟಿದವರ ಚರಿತ್ರೆಯನ್ನು ತಿಳಿಸುವ ಗ್ರಂಥಕ್ಕೆ ಮಹಾಭಾರತವೆಂದು ಹೆಸರು. ಆ ಭರತನು ದುಷ್ಯಂತ ಚಕ್ರವರ್ತಿಯ ಪತ್ನಿಯಾದ ಶಕುಂತಲೆಯ ಗರ್ಭದಲ್ಲಿ ಜನಿಸಿದ ಪುತ್ರನು. ಆ ಚರಿತ್ರೆಯು ಮುಂದೆ ವಿವರಿಸಲ್ಪಡುವುದು. ಶಕುಂತಲೆಯ ವೃತ್ತಾಂತವನ್ನೇ ಶಾಕುಂತಲ ನಾಟಕವೆಂಬದಾಗಿ ಮಹಾಕವಿಯಾದ ಕಾಳಿದಾಸನು ಸಂಸ್ಕೃತ ಭಾಷೆಯಲ್ಲಿ ರಚಿಸಿರುವನು. ಮಹಾ ಎಂದರೆ ದೊಡ್ಡದು; ಭಾರತವೆಂದರೆ ಭರತವಂಶದವರ ಚರಿತ್ರೆ; ಆದುದರಿಂದ ಮಹಾಭಾರತವೆಂದರೆ ಭರತವಂಶದವರನ್ನು ಕುರಿತ ದೊಡ್ಡಚರಿತ್ರೆಯೆಂದರ್ಥವು. ಆ ವಂಶದಲ್ಲಿ ಕುರುವೆಂಬ ರಾಜಶ್ರೇಷ್ಠನೊಬ್ಬನು ರಾಜ್ಯಭಾರ ಮಾಡುತ್ತಿದ್ದು ಅನಂತರ ಸನ್ಯಾಸವನ್ನುಹೊಂದಿ ಒಂದು ದೊಡ್ಡ ಕ್ಷೇತ್ರದಲ್ಲಿ ಪರಮನಿಷ್ಠೆಯಿಂದ ಅನೇಕಕಾಲ ತಪಸ್ಸು ಮಾಡುತ್ತಿದ್ದುದರಿಂದ ಆ ಕ್ಷೇತ್ರವು ಕುರುಕ್ಷೇತ್ರವೆಂದು ಹೆಸರುಗೊಂಡಿತು. ಆ ಕುರುಕ್ಷೇತ್ರವೇ ಪಾಂಡವಕೌರವರಿಗೆ ನಡೆದ ಮಹಾಯುದ್ಧದ ರಂಗಸ್ಥಾನವು. ಆ ಕುರುವಿನ ವಂಶದಲ್ಲಿ ಧೃತರಾಷ್ಟ್ರ, ಪಾಂಡು, ವಿದುರರೆಂಬ ಮೂವರು ಅಣ್ಣತಮ್ಮಂದಿರು ಹುಟ್ಟಿದರು. ಅವರಲ್ಲಿ ಧೃತರಾಷ್ಟ್ರನ ಮಕ್ಕಳು ಯುದ್ಧದಲ್ಲಿ ಅಧರ್ಮನಿರತರಾಗಿದ್ದು ಹೋರಾಡಿದರು. ನಾಮಮಾತ್ರಕ್ಕೆ ಪಾಂಡು ಪುತ್ರರಾದ ಧರ್ಮರಾಯ ಮೊದಲಾದ ಐದು ಜನರೂ ಧರ್ಮಕ್ಕಾಗಿ ಯುದ್ಧಮಾಡಿದರು. ವಿದುರನು ಅತ್ಯಂತ ಬುದ್ಧಿಶಾಲಿಯೂ ಧರ್ಮನಿರತನೂ

ಆಗಿದ್ದು ರಾಜ್ಯದಲ್ಲಿ ಶ್ರೇಷ್ಠವಾದ ಪದವಿಯನ್ನು ಹೊಂದಿದನು. ಇವರುಗಳ ಚರಿತ್ರೆಯು ಈ ಮಹಾಕಾವ್ಯದ ಹದಿನೆಂಟು ಪರ್ವಗಳಲ್ಲಿ ಹೇಳಲ್ಪಟ್ಟಿರುವುದು. ಆ ಪರ್ವಗಳಲ್ಲಿರುವ ಸಂದರ್ಭಗಳಿಗನುಸಾರವಾಗಿ ಪ್ರತಿಪರ್ವಕ್ಕೂ ಹೆಸರು ಕೊಡಲ್ಪಟ್ಟಿರುವುದು.

ಈ ಕಾವ್ಯವನ್ನು ರೋಮಹರ್ಷಣನೆಂಬ ಸೂತನ ಪುತ್ರನಾದ ಸೌತಿ ಎಂಬ ಹೆಸರುಳ್ಳ ಉಗ್ರಶ್ರವಸ್ಸೆಂಬುವನು ನೈಮಿಶಾರಣ್ಯವಾಸಿಗಳಾದ ಋಷಿಗಳಿಗೆ ಹೇಳಿದನು. ಒಬ್ಬಾನೊಬ್ಬ ಋಷಿಶ್ರೇಷ್ಠನು ಆತನನ್ನು ಕುರಿತು ನೀನೆಲ್ಲಿಂದ ಬಂದೆಯೆಂದು ಕೇಳಲು ಉಗ್ರಶ್ರವಸ್ಸು ಹೀಗೆ ಹೇಳಿದನು. ‹ ಸ್ವಾಮಿಾ, ನಾನು ಜನಮೇಜಯನು ಮಾಡುತ್ತಿದ್ದ ಸರ್ಪಯಾಗಕ್ಕೆ ಹೋಗಿದ್ದು ಅಲ್ಲಿಂದ ಬಂದೆನು. ಕಪ್ಪಾದ ಶರೀರವುಳ್ಳವನಾದುದರಿಂದ ಕೃಷ್ಣನೆಂದೂ ದ್ವೀಪದಲ್ಲಿ ಹುಟ್ಟಿದವನಾದುದರಿಂದ ದ್ವೈಪಾಯನನೆಂದೂ ವೇದಗಳನ್ನು ವಿಭಾಗಮಾಡಿದವನಾದುದರಿಂದ ವೇದವ್ಯಾಸನೆಂದೂ ಪ್ರಸಿದ್ಧಿಗೊಂಡ ಕೃಷ್ಣದ್ವೈಪಾಯನ ವೇದವ್ಯಾಸನೆಂಬ ಮುನಿಶ್ರೇಷ್ಠನಿಂದ ವಿರಚಿತವಾದ ಮಹಾಭಾರತವೆಂಬ ಕಾವ್ಯರತ್ನವನ್ನು ಅಲ್ಲಿ ವೈಶಂಪಾಯನನು ಪಠಿಸುತ್ತಿರಲು ಅದನ್ನು ಕೇಳಿ ನಾನೂ ತಿಳಿದುಕೊಂಡೆನು.› ಎಂದು ಉತ್ತರ ಹೇಳಿದನು. ಆ ಮುನಿಶ್ರೇಷ್ಠರು ಆ ಕಾವ್ಯವನ್ನು ನಮಗೆ ಹೇಳಬೇಕೆಂದು ಆ ಸೂತಪುತ್ರನನ್ನು ಪ್ರಾರ್ಥಿಸಲು ಆತನು ಅತ್ಯಂತ ಆನಂದಭರಿತನಾಗಿ ಅವರಿಗೆ ಆ ಕಥೆಯನ್ನು ಹೇಳತೊಡಗಿದನು. ಆ ಕಥೆಯನ್ನೇ ನಾವು ಮುಂದಿನ ಅಧ್ಯಾಯದಲ್ಲಿ ಓದಲು ಪ್ರಾರಂಭಿಸುವೆವು.

ಓದುದರಿಂದ ಮಹಾಭಾರತದ ಕಥೆಯನ್ನು ತಿಳಿದುಕೊಂಡು ಅದರಿಂದ ಪ್ರಯೋಜನವನ್ನು ಪಡೆಯಬೇಕಾಗಿದ್ದರೆ ಮೇಲೆ ಹೇಳಿದಂತೆ ದೇವತೆಗಳಿದ್ದಾರೆಂತಲೂ ಪ್ರಪಂಚವ್ಯಾಪಾರವು ಈಶ್ವರಸಂಕಲ್ಪಾನುಸಾರ ಇವರಿಂದಲೇ ನಡೆಸಲ್ಪಡುತ್ತದೆಂತಲೂ ಮನುಷ್ಯರಿಗೆ ಅಸಾಧ್ಯವಾದ ಕಾರ್ಯಗಳನ್ನು ದೇವತೆಗಳು ಸುಲಭವಾಗಿ ಮಾಡಬಲ್ಲರೆಂತಲೂ ನಮಗೆ ಕೆಟ್ಟುದು ಕಷ್ಟತರವಾದುದು ಎಂದು ತೋರುವ ಕಾರ್ಯಗಳೆಲ್ಲವೂ ಉತ್ತರೋತ್ತರ ಮನುಷ್ಯರ ಶ್ರೇಯಸ್ಸಿಗಾಗಿಯೇ ದೇವತೆಗಳಿಂದ ಮಾಡಲ್ಪಡುತ್ತವೆಂತಲೂ ಇತ್ಯಾದಿ ವಿಷಯಗಳನ್ನು ನಾವು ಯಾವಾಗಲೂ ಮನಸ್ಸಿನಲ್ಲಿಟ್ಟುಕೊಂಡು ಈ ಗ್ರಂಥವನ್ನು ಓದಬೇಕು.

# ಎರಡನೇ ಅಧ್ಯಾಯ.

---

## ಕಥಾನಾಯಕರ ಬಾಲ್ಯ.

ಮಹಾಭಾರತದ ಆದಿಪರ್ವದಲ್ಲಿರುವ ಕಥೆಗಳನ್ನು ಓದಲು ನಾವು ಈಗ ಪ್ರಾರಂಭಿಸೋಣ. ಇದರಲ್ಲಿ ಕಥಾನಾಯಕರ ಬಾಲ್ಯವನ್ನು ಕುರಿತ ಮತ್ತು ಅವರ ವಿದ್ಯಾಭ್ಯಾಸವನ್ನು ಕುರಿತ ಕಥೆಗಳಿಗೂ ಮೊದಲು ಪೀಠಿಕೆಯಲ್ಲಿ ವಿವರಿಸಿರುವ ಕೆಲವು ನೀತಿಗಳಿಗೂ ಇರತಕ್ಕ ಪರಸ್ಪರ ಸಂಬಂಧವನ್ನು ತಿಳಿಯೋಣ.

ಈ ಚರಿತ್ರೆಯಲ್ಲಿ ಬರುವ ಶೂರರಲ್ಲೆಲ್ಲಾ ಭೀಷ್ಮನುಶ್ರೇಷ್ಠನೂ ಅತ್ಯಂತ ಪರಾಕ್ರಮಿಯೂ ಆದವನು. ಉತ್ತಮರಾದ ಆರ್ಯಶ್ರೇಷ್ಠರಲ್ಲಿ ಇವನೊಬ್ಬನು. ಪ್ರಪಂಚದ ಜನಗಳು ಈತನನ್ನು ಸದ್ವರ್ತನೆಗೆ ಮೇಲ್ಪಂಕ್ತಿಯಾಗಿ ತೆಗೆದುಕೊಳ್ಳಬಹುದು. ಈತನು ದುಷ್ಕಾರ್ಯವೊಂದನ್ನಾದರೂ ಮಾಡಿದವನಲ್ಲವು. ಸದಾಕಾಲದಲ್ಲೂ ಧರ್ಮವನ್ನೇ ಆಚರಿಸಿದವನು. ಒಂದು ಸಂದರ್ಭದಲ್ಲಾದರೂ ನ್ಯಾಯವನ್ನು ಸ್ವಲ್ಪವೂ ಮೀರಿ ನಡೆದವನಲ್ಲ. ಈತನು ಪರಮಗುರುವಾಗಿಯೂ ಮಂತ್ರಿಯಾಗಿಯೂ ಇದ್ದನು. ಮಗನಾಗಿಯೂ, ನಿರ್ವಾಹಕನಾಗಿಯೂ ಇದ್ದು ಮಾಡಬೇಕಾದ ಸಮಸ್ತಕಾರ್ಯಗಳನ್ನೂ ಧರ್ಮವಿರುದ್ಧವಿಲ್ಲದೇ ನಡೆಸಿದನು. ಈತನಿಗೆ ಗೊತ್ತಿಲ್ಲದ ನೀತಿಗಳೇ ಆಗಲಿ ಧರ್ಮಗಳೇ ಆಗಲೀ ಯಾವುವೂ ಇರಲಿಲ್ಲವು.

ಭೀಷ್ಮನು ಹುಟ್ಟುವುದಕ್ಕೆ ಬಹುಕಾಲದಹಿಂದೆ ಬ್ರಹ್ಮಲೋಕದಲ್ಲಿ ದೇವತೆಗಳು ಒಂದು ಮಹೋತ್ಸವವನ್ನು ನಡೆಸಿದರು. ಆಗ ತಪೋಬಲದಿಂದ ದೇವಲೋಕವನ್ನು ಸೇರಿದ್ದ ಮಹಾಭಿಷನೆಂಬ ರಾಜನು ಅಲ್ಲಿ ಇದ್ದನು. ನದಿಗಳಿಗೆಲ್ಲಾ ರಾಣಿಯಾದ ಗಂಗಾದೇವಿಯೂ ಸಹ ಆಗ ಅಲ್ಲಿದ್ದಳು. ಗಾಳಿಬೀಸಿ ಆಕೆಯ ಸೆರಗು ಜಾರಿತು. ಅವಳಿಗೆ ಮನೋವಿಕಲ್ಪವುಂಟಾಗದಿರಲೆಂದು ದೇವತೆಗಳೆಲ್ಲರೂ ಆಗ ತಲೆಬಾಗಿಸಿಕೊಂಡರು. ಮಹಾಭಿಷನು ಆದರಂತೆ ನಡೆದುಕೊಳ್ಳಲಿಲ್ಲ. ಆದುದರಿಂದ ಬ್ರಹ್ಮನು ಅವನನ್ನು ಕುರಿತು "ನೀನು ಈರೀತಿ ಮರ್ಯಾದೆಮೀರಿ ನಡೆದುದಕ್ಕಾಗಿ ಭೂಲೋಕದಲ್ಲಿ ಹುಟ್ಟಬೇಕು. ಗಂಗೆಯೂ ಮನುಷ್ಯಲೋಕದಲ್ಲಿಹುಟ್ಟಿ ನಿನಗೆ ಭಾರ್ಯೆಯಾಗುವಳು" ಎಂದು ಹೇಳಿ ಗಂಗೆಯನ್ನುನೋಡಿ

"ಮಹಾಭಿಷನು ನಿನಗೆ ಕೋಪವನ್ನುಂಟುಮಾಡಿದಾಗ ನಿನಗೆ ಶಾಪವಿಮೋಚನೆಯಾಗುವುದು." ಎಂದು ಶಪಿಸಿದನು. ಮನೋವಾಕ್ಕಾಯುಗಳೆಂಬ ತ್ರಿಕರಣಗಳಿಂದ ಆಚರಿಸುವ ಕಾರ್ಯಗಳಿಗೆ ಅನಂತರದಲ್ಲಿ ಉಂಟಾಗುವ ಫಲಗಳೇ ಕರ್ಮಗಳೆನಿಸಿಕೊಳ್ಳುವುವು. ನಮ್ಮ ಕರ್ಮದಿಂದ ಉಂಟಾಗುವ ಫಲವನ್ನು ದೇವತೆಗಳಾಗಲೀ ಋಷಿಗಳಾಗಲೀ ಮುಂದಾಗಿಯೇ ತಿಳಿಸತಕ್ಕದ್ದಕ್ಕೆ ಶಾಪವೆಂದು ಹೆಸರು. ಅಂದರೆ ಮಹಾಭಿಷನನ್ನು ಬ್ರಹ್ಮನು ದೇವಲೋಕದಿಂದ ತಳ್ಳಿ ಮನುಷ್ಯಲೋಕದಲ್ಲಿ ಜನ್ಮವನ್ನುಂಟುಮಾಡಿದ್ದು ತನ್ನ ಇಚ್ಛಾನುಸಾರವಲ್ಲ. ಮಹಾಭಿಷನು ಮಾಡಿದ ಕರ್ಮದಿಂದ ಅದು ತಾನಾಗಿ ಉತ್ಪನ್ನವಾದ ಫಲ. ಬ್ರಹ್ಮದೇವರು ಈ ಮಾತನ್ನು ಹೇಳದಿದ್ದರೂ ಮಹಾಭಿಷನಿಗೆ ಮನುಷ್ಯಜನ್ಮವು ಬರುತ್ತಲೇಯಿತ್ತು. ಕಾರ್ಯಗಳೆಲ್ಲವೂ ಯಥೋಕ್ತವಾಗಿಯೇ ನಡೆಯುತ್ತಿದ್ದವು.

ಅನಂತರದಲ್ಲಿ ಆ ಮಹಾಭಿಷನು ಮನುಷ್ಯಲೋಕದಲ್ಲಿ ಜನ್ಮವೆತ್ತುವ ಕಾಲವು ಒದಗಿಬಂದು, ಕೇವಲ ಶಾಂತಗುಣವುಳ್ಳ ಪ್ರತೀಪನೆಂಬ ದೊರೆಗೆ ಮಗನಾಗಿ ಹುಟ್ಟಿದನು. ಆ ದೊರೆಯು ಒಂದಾನೊಂದು ದಿನ ತಪಸ್ಸುಮಾಡುತ್ತಾ ಗಂಗಾತೀರದಲ್ಲಿರುವಾಗ್ಯೆ ಗಂಗಾದೇವಿಯು ದಿವ್ಯವಾದ ಕನ್ಯಾರೂಪದಿಂದ ಆತನ ಬಳಿಗೆ ಬಂದು ತನ್ನನ್ನು ವಿವಾಹಮಾಡಿಕೊಳ್ಳಬೇಕೆಂದು ಪ್ರಾರ್ಥಿಸಿದಳು. ಆ ದೊರೆಯು ಆಕೆಯ ಮಾತಿಗೆ ಒಡಂಬಡದೆ ತನ್ನ ಮಗನಿಗೆ ಮದುವೆಮಾಡುವೆನೆಂದು ಹೇಳಲು ಹಾಗೆಯೇ ಆಗಲೆಂದು ಆ ತರುಣಿಯು ಒಪ್ಪಿ 'ನಾನು ಏನು ಮಾಡಿದಾಗ್ಯೂ ನಿನ್ನ ಮಗನು ನನ್ನನ್ನು ಕೇಳಕೂಡದು' ಎಂದು ಹೇಳಿ ಹೊರಟು ಹೋದಳು. ಆ ದೊರೆಯು ಸುಗುಣವಂತನಾದ ಮಗನನ್ನು ಪಡೆಯಲಪೇಕ್ಷಿಸಿ ತನ್ನ ಹೆಂಡತಿಯೊಡನೆ ಕೂಡಿ ತಪಸ್ಸನ್ನಾಚರಿಸಲು ಮಹಾಭಿಷನು ಅವರಿಗೆ ಮಗನಾಗಿ ಹುಟ್ಟಿದನು. ದೊರೆಯು ವಿಶೇಷ ಶಾಂತಸ್ವಭಾವವುಳ್ಳವನಾದುದರಿಂದಲೇ ಆತನ ಮಗನಿಗೆ ಶಂತನನೆಂದು ಹೆಸರಾಯಿತು. ಶಂತನನು ವಯೋವಂತನಾಗಿ ಯೌವನಸ್ಥನಾಗಿರಲು ಪ್ರತೀಪನು ಮಗನನ್ನು ಕುರಿತು ಹೀಗೆ ಹೇಳಿದನು. "ಒಬ್ಬ ದೇವತಾಸ್ತ್ರೀಯು ನಿನ್ನನ್ನು ಮದುವೆಯಾಗುತ್ತೇನೆಂದು ನನ್ನೊಡನೆ ಮೊದಲು ಹೇಳಿದ್ದಳು. ಆ ಸ್ತ್ರೀಯು ನಿನ್ನಲ್ಲಿ ಬಂದುದಾದರೆ ಆಕೆಯನ್ನು ಸ್ವೀಕರಿಸು. ಆದರೆ ಆಕೆಯು ಯಾವರೀತಿ ನಡೆದಾಗ್ಯೂ ಯಾವುದನ್ನೂ ಆಕ್ಷೇಪಿಸ

ಬೇಡ. ಆಕೆಯ ಕುಲಗೋತ್ರಗಳಾವುದನ್ನೂ ವಿಚಾರಿಸಬೇಡ. ನನ್ನ ಆಜ್ಞಾನು ಸಾರ ಅವಳನ್ನೇ ಮದುವೆಮಾಡಿಕೋ" ಎಂದು ಅಪ್ಪಣೆಮಾಡಿ ಶಂತನನಿಗೆ ರಾಜ್ಯಾಭಿಷೇಕಮಾಡಿ ತಾನು ತಪಸ್ಸುಮಾಡಲು ಕಾಡಿಗೆ ಹೊರಟುಹೋದನು.

ಅನಂತರದಲ್ಲಿ ಶಂತನನು ಧರ್ಮದಿಂದ ಪ್ರಜಾಪಾಲನೆಯನ್ನು ಮಾಡುತ್ತಾ ಒಂದುದಿನ ಗಂಗಾನದಿಯ ದಡದಲ್ಲಿ ಸಂಚರಿಸುವ ಸಮಯದಲ್ಲಿ ರೂಪಲಾವಣ್ಯಾತಿಶಯಗಳಿಂದ ಮನೋಹರಳಾದ ಒಬ್ಬ ತರುಣೀಮಣಿಯನ್ನು ನೋಡಿ ಕಾಮುಕನಾಗಿ ತನ್ನನ್ನು ಮದುವೆಯಾಗೆಂದು ಆಕೆಯನ್ನು ಬೇಡಿಕೊಂಡನು. ಆಕೆಯು ಅದಕ್ಕೆ ಸಮ್ಮತಿಸಿ ಆತನನ್ನು ಕುರಿತು ಹೀಗೆಂದಳು. "ನಾನು ಏನುಮಾಡಿದಾಗ್ಯೂ ನೀನು ಕೇಳಲಾಗದು, ನನ್ನನ್ನು ಕುರಿತು ಕಠಿಣವಾದ ಮಾತುಗಳನ್ನಾಡಲಾಗದು. ಎಷ್ಟುದಿನಗಳು ನನ್ನನ್ನು ಪ್ರೀತಿಯಿಂದ ಕಾಣುವೆಯೋ ಅದುವರೆಗೇ ನಾನು ನಿನ್ನಲ್ಲಿರತಕ್ಕವಳು. ಯಾವಾಗ ನಾನು ಮಾಡುವ ಕಾರ್ಯವನ್ನಾಕ್ಷೇಪಿಸಿ ಕೋಪಿಸುವೆಯೋ ಆಗ ನಿನ್ನನ್ನು ಬಿಟ್ಟು ಹೊರಟುಹೋಗುವೆನು. ಇದು ನಿಶ್ಚಯವು. ಇದಕ್ಕೆ ಒಪ್ಪುವೆಯಾ?" ಎಂದು ಕೇಳಲು, ಆ ದೊರೆಯು ಹಾಗೆಯೇ ಆಗಲೆಂದು ಒಪ್ಪಿ ಆಕೆಯನ್ನು ಪಾಣಿಗ್ರಹಣಮಾಡಿಕೊಂಡು ಯಥೇಷ್ಟವಾಗಿ ಸುಖವನ್ನನುಭವಿಸುತ್ತಾ ಆನಂದದಿಂದಿದ್ದನು. ಈಕೆಯೇ ಗಂಗಾದೇವಿಯು. ಸ್ವಲ್ಪಕಾಲದಲ್ಲೇ ಆಕೆಗೆ ಒಬ್ಬ ಕುಮಾರನು ಜನಿಸಿದನು. ಆಕೆಯು ಮಗುವನ್ನು ನೋಡಿ ನಿನಗೆ ಮೇಲನ್ನುಂಟುಮಾಡುವುದಕ್ಕಾಗಿಯೇ ಹೀಗೆ ಮಾಡುತ್ತೇನೆಂದು ಹೇಳಿ ಆ ಮಗುವನ್ನು ಗಂಗಾನದಿಯ ಪ್ರವಾಹದಲ್ಲಿ ಹಾಕಿಬಿಟ್ಟಳು. ಈ ರೀತಿಯಲ್ಲಿ ಕ್ರಮವಾಗಿ ಪಡೆದ ಏಳುಮಂದಿ ಪುತ್ರರನ್ನೂ ನದಿಯ ಪ್ರವಾಹದಲ್ಲಿ ಹಾಕಿಬಿಡಲು ಆ ನರಪತಿಯು ಮನಸ್ಸಿನಲ್ಲಿ ಬಹಳವಾಗಿ ಖೇದಹೊಂದಿ ಆಕೆಗೆ ವ್ಯತಿರಿಕ್ತವಾಗಿ ಮಾತನಾಡಿದಲ್ಲಿ ಆ ತರುಣಿಯು ತನ್ನನ್ನು ಬಿಟ್ಟು ಹೋಗುವಳೆಂಬ ಯೋಚನೆಯಿಂದ ಸುಮ್ಮನಿದ್ದನು. ಅನಂತರದಲ್ಲಿ ಎಂಟನೇ ಸುತನನ್ನು ಪಡೆದು ಆಕೆಯು ಎಂದಿನಂತೆ ಆ ಶಿಶುವನ್ನೂ ಪ್ರವಾಹದಲ್ಲಿ ಹಾಕಹೋಗುವಷ್ಟರಲ್ಲಿ ಆ ದೊರೆಯು ಅತ್ಯಂತ ಚಿಂತಾಕ್ರಾಂತನಾಗಿ ಕಣ್ಣಿನಲ್ಲಿ ನೀರು ಸುರಿಸುತ್ತಾ, "ಎಲೌ ಪುತ್ರಘಾತಿನಿಯಾದ ರಕ್ಕಸಿಯೇ! ನೀನು ಯಾರು? ಹೀಗೆ ಹುಟ್ಟಿದ ಸಣ್ಣ ಶಿಶುಗಳನ್ನು ಏಕೆ ನೀರಿನಲ್ಲಿ ಹಾಕಿ ಕೊಲ್ಲುವೆ? ನೀನು ಮಾಡಿದ ಕ್ರೂರಕೃತ್ಯಗಳ ಪಾಪರಾಶಿಯು ಬಹಳ ದುರ್ಭರವಾದುದು. ಇನ್ನು

ಈ ಮಗುವನ್ನು ಕೊಲ್ಲಲೀಸೆನು." ಎಂದು ಪುತ್ರವಾತ್ಸಲ್ಯದಿಂದ ಹಿಂದಿನ ಸಂಗತಿಯನ್ನು ಮರೆತು ಹೇಳಿದನು.

ಅಯ್ಯೋ ಪಾಪ ! ಶಂತನು ಚಕ್ರವರ್ತಿಗೆ ಪರೀಕ್ಷೆಯು ಬಹುಕಠಿನವಾದುದು ಆತನು ತಂದೆಯ ಅಜ್ಞೆಯನ್ನು ಮರೆತುಹೋದನು." ಮಹಾರಾಜನೆ ! ನೀವು ಹೇಳುವಂತೆ ಈ ಮಗನನ್ನು ಕೊಲ್ಲುವುದಿಲ್ಲ. ಅಲ್ಲದೆ ನಾನು ಇನ್ನುಮೇಲೆ ನಿನ್ನೊಡನೆ ಇರಲೊಲ್ಲೆನು. ಮೊದಲು ನಾನು ಹೇಳಿದ್ದ ಕರಾರಿನಂತೆ ಹೊರಟು ಹೋಗುವೆನು. ನಾನು ಜಹ್ನುಋಷಿಯ ಪುತ್ರಿಯಾದ ಗಂಗೆಯು " ಎಂದು ಗಂಗಾದೇವಿಯು ಹೇಳಿ, ಪುನಃ ಹೀಗೆ ಹೇಳತೊಡಗಿದಳು.

" ಪೂರ್ವಕಾಲದಲ್ಲಿ ಅಷ್ಟವಸುಗಳುಸೇರಿ ಒಬ್ಬ ಮಹರ್ಷಿಯ ನಂದಿನಿಯೆಂಬ ಕಾಮಧೇನುವನ್ನುಕದ್ದರು. ಅದರಲ್ಲಿ ದ್ಯೋ ವೆಂಬುವನು ಸಾಕ್ಷಾತ್ ಕಳ್ಳನು. ಅದರಿಂದಲೇ ಸಿಟ್ಟುಗೊಂಡ ಆ ಮುನಿಯು ಆ ಎಂಟುಮಂದಿ ವಸುಗಳನ್ನುನೋಡಿ 'ನೀವುಮಾಡಿದ ತಪ್ಪಿಗಾಗಿ ನೀವು ಭೂಲೋಕದಲ್ಲಿ ಮನುಷ್ಯರಾಗಿ ಜನಿಸಿರಿ! ' ಎಂದು ಶಪಿಸಲು ಆ ವಸುಗಳು ಅತ್ಯಂತವಿನಯದೊಡನೆ ಕೂಡಿ ಶಾಪ ನಿವೃತ್ತಿಯಾಗುವಂತೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿದರು. ಆತನು ಕರುಣಿಸಿ ನೀವು ಹುಟ್ಟಿದಕೂಡಲೆ ನದಿಯಪ್ರವಾಹದಲ್ಲಿ ಹಾಕಲ್ಪಟ್ಟು ಸಾಯುವಿರಿ, ದ್ಯೋವೆಂಬುವನು ನಮ್ಮ ಹಸುವನ್ನು ಸಾಕ್ಷಾತ್ತಾಗಿ ಕಳುವು ಮಾಡಿದುದರಿಂದ ಅನೇಕಕಾಲ ಭೂಮಿಯಲ್ಲಿರತಕ್ಕವನೆಂದು ಹೇಳಿಕಳುಹಿಸಲು ಆ ವಸುಗಳು ನನ್ನ ಬಳಿಗೆಬಂದು ತಮ್ಮ ಶಾಪದಸಂಗತಿಯನ್ನು ತಿಳಿಸಿ, 'ತಾಯೀ! ನೀನು ಮನುಷ್ಯ ಸ್ತ್ರೀಯಾಗಿಹುಟ್ಟಿದಾಗ ನಿನ್ನಗರ್ಭದಲ್ಲಿ ನಾವು ಹುಟ್ಟುವಹಾಗೆ ಅನುಗ್ರಹಮಾಡು. ಹಾಗೆ ಹುಟ್ಟಿದಕೂಡಲೆ ನಮ್ಮನ್ನು ನೀರಿನಲ್ಲಿ ಹಾಕಿ ನಮಗೆ ಮನುಷ್ಯಶರೀರದಲ್ಲಿದ್ದು ಅನುಭವಿಸಬೇಕಾದ ಕಷ್ಟಗಳನ್ನು ತಪ್ಪಿಸು,' ಎಂದು ಪ್ರಾರ್ಥಿಸಲು ನಾನು ಅವರ ಇಷ್ಟಾನುಸಾರ ಅವರನ್ನು ಶಾಪದಿಂದ ಬಿಡುಗಡೆಮಾಡಿದೆನು. ಆದುದರಿಂದ ಎಲೈ ರಾಜಶ್ರೇಷ್ಠನೇ, ಆ ಋಷಿಯಶಾಪದಂತೆ ದ್ಯೋ ವೆಂಬ ಎಂಟನೆಯ ವಸುವು ಈಗ ಜನಿಸಿರುವನು. ಈತನು ಕೆಲವುಕಾಲ ಈ ಲೋಕದಲ್ಲಿರತಕ್ಕವನು" ಎಂದು ಹೇಳಿ ಆ ಬಾಲಕನನ್ನು ಕರೆದುಕೊಂಡು ಆ ದೇವಿಯು ಅದೃಶ್ಯಳಾದಳು. ಆ ಬಾಲಕನು ದೇವವ್ರತನೆಂಬ ಹೆಸರಿನಿಂದ ಪ್ರಸಿದ್ಧನಾದನು.

ಲೋಕದಲ್ಲಿ ಜನಗಳು ಸಾವಿಗೆ ಬಹಳ ಭಯಪಡುವರು. ಆದರ ತತ್ವ ವನ್ನು ಚೆನ್ನಾಗಿ ವಿಚಾರಮಾಡಿದರೆ ಈ ಭಯಪಡತಕ್ಕದ್ದು ತಪ್ಪೆಂದು ಗೊತ್ತಾಗುವುದು. ದೇವತೆಗಳಲ್ಲೊಬ್ಬನು ಭೂಮಿಯಲ್ಲಿ ಹುಟ್ಟಿದುದಾದರೆ ಸೆರೆಮನೆಗೆ ಬಂದಂತೆ ಪರಿತಪಿಸುತ್ತಾ ತನ್ನನ್ನು ಕಾರಾಗೃಹದಿಂದ ಬಿಡಿಸುವ ಮರಣವು ಯಾವಾಗ ಬಂದೀತೋ ಎಂದು ಚಿಂತಿಸುತ್ತಿರುವನು. ನಾವಾದರೋ ಒಂದು ಮಗುವು ಜನಿಸಿದರೆ ಸಂತೋಷಪಡುವೆವು. ಒಬ್ಬನು ಮೃತಪಟ್ಟರೆ ವ್ಯಸನ ಪಡುವೆವು. ಇದು ಒಬ್ಬ ಸ್ನೇಹಿತನನ್ನು ಸೆರೆಯಲ್ಲಿಟ್ಟಾಗ ಆನಂದಪಡುತ್ತಾ ಆತನು ಬಿಡುಗಡೆ ಹೊಂದಿದಾಗ ದುಃಖಪಡುವಂತೆ ಆಯಿತು. ಪ್ರತಿಮನುಷ್ಯನು ಸಾಯುವಾಗಲೂ ಗಂಗೆಯು ವಸುಗಳನ್ನು ಬಿಡಿಸಿದ ರೀತಿಯಲ್ಲಿ ಒಬ್ಬ ದೇವತೆಯು ಆ ಜೀವನನ್ನು ಸೆರೆಯಿಂದ ಬಿಡಿಸಿ ದೇವರು ನಮಗೆ ಸಹಾಯಮಾಡುತ್ತಾರೆಂತಲೂ ಅವರ ಉಪಕಾರ ಸ್ವರೂಪವನ್ನು ತಿಳಿಯದೇ ನಾವು ನಮಗೆ ಕಷ್ಟಬಂತೆಂದು ವ್ಯಸನಪಡುತ್ತೇವೆಂತಲೂ ತಿಳಿಯಬೇಕು. ಈ ಚರಿತ್ರೆಯಲ್ಲಿ ದೇವತೆಗಳು ಮಾಡುವ ಕೆಲಸಗಳನ್ನು ವಿಚಾರಮಾಡುವೆವಾದರೆ ಅಜ್ಞಾನದಿಂದ ನಮಗೆ ವ್ಯಸನಕರಗಳಾಗಿ ತೋರುವವುಗಳಲ್ಲೆಲ್ಲಾ ದೇವತೆಗಳು ತೋರ್ಪಡಿಸುವ ಪ್ರೇಮವೂ ಕಾರುಣ್ಯವೂ ನಮಗೆ ವ್ಯಕ್ತವಾಗುವುದು.

ಗಂಗಾದೇವಿಯು ತನ್ನ ಸುತನೊಡನೆ ತೆರಳಿ ಆತನಿಗೆ ಬಾಲ್ಯವು ಕಳೆದು ವಯಸ್ಸು ಬರಲು ಧನುರ್ವಿದ್ಯೆ, ಬಾಣಪ್ರಯೋಗೋಪಸಂಹಾರಾದಿ ಚಾತುರ್ಯಗಳನ್ನು ಕಲಿಸಿ ಮಿಕ್ಕ ಐಹಿಕಾಮುಷ್ಮಿಕ ವಿದ್ಯೆಗಳಲ್ಲೆಲ್ಲಾ ಪ್ರವೀಣನನ್ನಾಗಿ ಮಾಡಿ ಆತನ ತಂದೆಯಬಳಿಗೆ ಕರೆತಂದು ಒಪ್ಪಿಸಿದಳು. ಆ ದೇವವ್ರತನ ಪರಾಕ್ರಮವೂ ಸ್ಥೈರ್ಯವೂ ಅತ್ಯದ್ಭುತವಾದುವು. ಆತನಿಗಿದ್ದ ಪಿತೃಭಕ್ತಿಯು ಪರಾಕ್ರಮ, ಜ್ಞಾನಗಳಿಗೆ ತಕ್ಕಂತೆ ಇತ್ತು. ಆತನ ಪಿತೃಭಕ್ತಿ ಗೌರವವು ಅವನ ಈ ಮುಂದಿನ ಕಾರ್ಯದಿಂದ ಪ್ರಪಂಚದಲ್ಲಿ ಎಲ್ಲರಿಗೂ ವ್ಯಕ್ತಗೊಂಡಿತು. ಶಂತನು ಚಕ್ರವರ್ತಿಯು ಒಂದುದಿನ ಯಮುನಾ ತೀರದಲ್ಲಿ ಸಂಚರಿಸುತ್ತಾ ಒಬ್ಬ ತರುಣೀಮಣಿಯನ್ನು ನೋಡಿ ಆಕೆಯನ್ನು ಭಾರ್ಯೆಯನ್ನಾಗಿಮಾಡಿಕೊಳ್ಳಲಪೇಕ್ಷಿಸಿ ಆಕೆಯು ಸೂತಪುತ್ರಿಯೆಂದು ತಿಳಿದು ಆಕೆಯನ್ನು ತಾನು ಪಾಣಿಗ್ರಹಣಮಾಡಬೇಕೆಂದು ಆಕೆಯ ತಂದೆಯನ್ನು ಬೇಡಲು, ಆತನು ಈ ಕನ್ನೆಯ ಗರ್ಭದಲ್ಲಿ ಜನಿ

ಸಿದ ಪುತ್ರನನ್ನು ಯುವರಾಜನನ್ನಾಗಿ ಮಾಡುವುದಾಗಿ ಮಾತುಕೊಡುವೆಯಾದರೆ ಈಕೆಯನ್ನು ಕೊಟ್ಟು ವಿವಾಹ ಮಾಡುವೆನೆಂದನು. ಶಂತನನು ಭೀಷ್ಮನನ್ನು ಜ್ಞಾಪಿಸಿಕೊಂಡು ಈರೀತಿ ಭಾಷೆಕೊಡಲಾರದೆ ವ್ಯಸನಪಡುತ್ತಾ ಮನೆಯನ್ನು ಸೇರಿದನು. ದೇವವ್ರತನು ವಿನಯದೊಡನೆ, ತಂದೆಯೇ! ನಿನ್ನ ವ್ಯಥೆಗೆ ಕಾರಣ ವೇನೆಂದು ಅನೇಕ ವಿಧಗಳಿಂದ ಪ್ರಾರ್ಥಿಸಿದರೂ ಶಂತನನು ಆ ವೃತ್ತಾಂತವನ್ನು ತಿಳಿಸಲಿಲ್ಲ. ಆಗ ದೇವವ್ರತನು ತಂದೆಯ ವ್ಯಸನಕ್ಕೆ ಕಾರಣವನ್ನು ತಿಳಿಯಲ ಪೇಕ್ಷಿಸಿ ಒಬ್ಬ ವೃದ್ಧನಾದ ಮಂತ್ರಿಯ ಸಹಾಯವನ್ನು ಬೇಡಿದನು. ಮಂತ್ರಿ ಯು ಮತ್ಸ್ಯಪುತ್ರಿಯ ಈ ಸಮಾಚಾರವನ್ನು ತಿಳಿದು ದೇವವ್ರತನಿಗೆ ಹೇಳಲಾಗಿ ಅವನು ತಕ್ಕ ರಾಜಮರ್ಯಾದೆಯೊಡನೆ ಸೂತನ ಮನೆಗೆ ಹೋಗಿ ನಿನ್ನ ಪುತ್ರಿಯ ನ್ನು ನನ್ನ ತಂದೆಗೆ ವಿವಾಹಮಾಡೆಂದು ಕೇಳಿಕೊಂಡನು. ಅದಕ್ಕೆ ಅವನು "ರಾಜನಿಗೆ ಒಬ್ಬ ಪುತ್ರನಿದಾನೆ. ನನ್ನ ಮಗಳಾದ ಸತ್ಯವತಿಯನ್ನು ರಾಜನಿಗೆ ಮದುವೆ ಮಾಡಿದರೆ ಅವಳ ಮಗನಿಗೆ ರಾಜ್ಯಾಧಿಕಾರ ಬರುವುದಿಲ್ಲ. ಆದುದ ರಿಂದ ನನ್ನಮಗಳನ್ನು ಕೊಡಲೊಲ್ಲೆನು" ಎಂದು ಹೇಳಿದನು. ಅದನ್ನು ಕೇಳಿ ದೇ ವವ್ರತನು ತನ್ನ ಜತೆಯಲ್ಲಿ ಬಂದಿದ್ದ ವೀರರನ್ನು ಕುರಿತು ಹೀಗೆ ಹೇಳಿದನು:— ನನ್ನ ಪ್ರತಿಜ್ಞೆಯನ್ನು ಲಾಲಿಸಿರಿ. ಈ ಸೂತನ ಕೋರಿಕೆಗಳನ್ನು ನಾನು ನೆರವೇ ರಿಸುವೆನು. ಈ ಕನ್ನಿಕೆಗೆ ಹುಟ್ಟುವ ಕುಮಾರನೇ ನಮ್ಮೆಲ್ಲರಿಗೂ ರಾಜನಾಗಿರು ವನು'' ಎಂಬದಾಗಿ ಶಪಥವನ್ನು ಮಾಡಿದವನಾಗಿ ತಂದೆಯ ಕೋರಿಕೆಯನ್ನು ನೆರವೇರಿಸುವುದಕ್ಕಾಗಿ ರಾಜ್ಯಾಧಿಪತ್ಯವನ್ನೇ ಬಿಟ್ಟನು. ಆದಾಗ್ಯೂ ಸೂತನು ತೃಪ್ತಿಪಡದೇ "ನೀನೇನೊ ರಾಜ್ಯಾಧಿಪತ್ಯವನ್ನು ಬಿಟ್ಟೆ. ಆದರೆ ನಿನ್ನ ಮ ಕ್ಕಳು ರಾಜ್ಯಕ್ಕೆ ಹೋರಾಡಬಹುದಲ್ಲಾ'' ಎಂದು ಆಕ್ಷೇಪಿಸಲು ದೇವವ್ರ ತನು ಅಲ್ಲಿದ್ದವರೆಲ್ಲರೂ ಕೇಳುವಂತೆ ಹೀಗೆ ಹೇಳಿದನು. "ನನ್ನ ಹಕ್ಕನ್ನು ನಾನು ಮುಂಚೆ ತ್ಯಜಿಸಿದುದಾಯಿತು, ನನ್ನ ಮಕ್ಕಳ ವಿಚಾರವನ್ನು ಈಗಲೇ ವಿಚಾರಮಾಡುತ್ತೇನೆ ಅಯ್ಯಾ ಸೂತನೇ! ಇಂದು ಮೊದಲು ನಾನು ಬ್ರಹ್ಮಚರ್ಯ ವನ್ನವಲಂಬಿಸಿರುವೆನು. ನಾನು ಅಪುತ್ರವಂತನಾಗಿ ಸತ್ತರೂ ಶಾಶ್ವತ ಸುಖದಾ ಯಕವಾದ ಸ್ವರ್ಗವನ್ನು ನಾನು ಪಡೆಯಬಲ್ಲೆನು.'' ಆತನಮೇಲೆ ಪುಷ್ಪವೃಷ್ಟಿ ಯಾಯಿತು. ಇವನ ಇಷ್ಟು ಪಿತೃಭಕ್ತಿಯ ಅತಿಶಯವನ್ನು ನೋಡಿ ಘೋರ

ವಾದ ಪ್ರತಿಜ್ಞೆಯನ್ನು ಮಾಡಿದುದಕ್ಕಾಗಿ ಇವನು 'ಭೀಷ್ಮನು' ಎಂದು ಆಕಾಶ ವಾಣಿಯು ನುಡಿಯಿತು. [ಘೋರ,ಭೀಷ್ಮ ಎಂದರೆ ಭಯಂಕರವೆಂದರ್ಥ] ತಂದೆಗೆ ಹಿತವನ್ನು ಮಾಡಲೋಸುಗ ಲೋಕದಲ್ಲಿ ಜನರಿಗೆ ಅತ್ಯಂತ ಇಷ್ಟವಾದ ವಿವಾಹವ ನ್ನು ಕೂಡ ಬಿಟ್ಟಕಾರಣ ಈತನಿಗೆ ಭೀಷ್ಮನೆಂಬ ಹೆಸರು ನಿಜವಾಗಿ ಒಪ್ಪುವುದು.

ಹೀಗೆ ಭೀಷ್ಮನು ಪ್ರತಿಜ್ಞೆಮಾಡಿದವನಾಗಿ ಆ ತರುಣಿಯನ್ನು ನೋಡಿ 'ತಾಯೆ! ರಥವನ್ನು ಹತ್ತು. ನಾವು ಊರಿಗೆ ಹೋಗೋಣ' ಎಂದು ಹೇಳಿ ಆಕೆ ಯನ್ನು ಕರೆದುಕೊಂಡು ಒಂದು ತಂದೆಗೆ ಸಮರ್ಪಿಸಲು, ಆತನು ಬಹಳವಾಗಿ ಆನಂದಪಟ್ಟು ಮಗನನ್ನು ನೋಡಿ ' ನೀನು ಕೋರಿದಾಗ ನಿನಗೆ ಮರಣವು ಬರ ಬೇಕೇ ಹೊರತು ಅದುವರೆಗೂ ಮರಣವು ನಿನ್ನನ್ನು ಸಮೀಪಿಸಲಾರದು. ನಿನ್ನ ಅಪ್ಪಣೆಯನ್ನು ಪಡೆದೇ ನಿನ್ನಲ್ಲಿಗೆ ಬರುವುದು' ಎಂಬದಾಗಿ ವರವನ್ನುಕೊಟ್ಟನು.

ಶಂತನನಿಗೆ ಚಿತ್ರಾಂಗದ ವಿಚಿತ್ರವೀರ್ಯರೆಂಬ ಇಬ್ಬರುಮಕ್ಕಳು ಜನಿಸಿದರು. ಕೆಲವುಕಾಲದಲ್ಲಿ ಆತನು ಪರಲೋಕವನ್ನು ಹೊಂದಲು ಭೀಷ್ಮನು ದೊಡ್ಡವನಾದ ಚಿತ್ರಾಂಗದನನ್ನು ರಾಜ್ಯದಲ್ಲಿ ಪಟ್ಟಾಭಿಷಕ್ತನನ್ನಾಗಿ ಮಾಡಿದನು. ಕೆಲವು ಕಾಲದಲ್ಲೇ ಚಿತ್ರಾಂಗದನು ಯುದ್ಧದಲ್ಲಿ ಮಡಿಯಲು ವಿಚಿತ್ರವೀರ್ಯನು ರಾಜ್ಯಾ ಭಿಷಿಕ್ತನಾದನು. ಭೀಷ್ಮನು ಅವನಿಗೆ ವಿವಾಹಮಾಡಲುದ್ಯುಕ್ತನಾದನು. ಆ ಕಾಲದಲ್ಲಿ ದೊರೆಗಳು ಸ್ವಯಂವರದಲ್ಲಿ ರಾಜಪುತ್ರಿಯರನ್ನು ವಿವಾಹಕ್ಕಾಗಿ ಪಡೆ ಯುತ್ತಿದ್ದರು. ಅನೇಕ ರಾಜಕುಮಾರರು ಒಂದುಕಡೆ ಸೇರಿರಲು ಹೆಚ್ಚು ಪರಾ ಕ್ರಮವನ್ನು ತೋರಿಸಿ ಇತರರನ್ನು ಜಯಿಸಿದವನನ್ನು ರಾಜಕುಮಾರಿಯು ವರಿಸಿ ಆತನ ಕೊರಳಲ್ಲಿ ಮಾಲೆಯನ್ನು ಹಾಕುತ್ತಿದ್ದಳು. ಅನಂತರದಲ್ಲಿ ಅವರಿಗೆ ಶಾ ಸ್ತ್ರೋಕ್ತವಿಧಿಯಿಂದ ವಿವಾಹವು ನಡೆಯುತ್ತಿದ್ದಿತು. ಇದೇ ಸ್ವಯಂವರವೆನ್ನಿಸ ಲ್ಪಡುವುದು. ವಿಚಿತ್ರವೀರ್ಯನು ಪ್ರಾಪ್ತವಯಸ್ಕನಲ್ಲದುದರಿಂದ ಪರಾಕ್ರಮಪ್ರದ ರ್ಶನಕಾರ್ಯಗಳಲ್ಲಿ ಉದ್ಯುಕ್ತನಾಗಲು ಅಸಮರ್ಥನಾಗಿದ್ದನು. ಆದುದರಿಂದ ತಾಯಿಯ ಅಪ್ಪಣೆಯಂತೆ ರಾಜ್ಯಭಾರವನ್ನು ನಡೆಸುತಿದ್ದ ಭೀಷ್ಮನು ಆತನಿಗೆ ಕನ್ಯೆಯನ್ನು ತರಲು ಹೊರಟನು. ಕಾಶಿಯಲ್ಲಿ ನಡೆಯುತಿದ್ದ ಸ್ವಯಂವರಕ್ಕೆ ಹೋಗಿ ಅಲ್ಲಿ ನೆರದಿದ್ದ ಮೂವರು ಕನ್ಯೆಯರನ್ನು ಬಲಾತ್ಕಾರದಿಂದ ತನ್ನ ರಥ ದಲ್ಲಿ ಕೂಡಿಸಿಕೊಂಡು ಅಲ್ಲಿ ಸೇರಿದ್ದ ದೊರೆಗಳನ್ನು ಕುರಿತು 'ನಾನು ಈ ಕನ್ಯೆ

ಯರನ್ನು ಕರೆದುಕೊಂಡುಹೋಗುವೆನು. ನೀವು ಯಾರಾದರೂ ಆಕ್ಷೇಪಿಸುವು ದಾದರೆ ನನ್ನೊಡನೆ ಯುದ್ಧಮಾಡಿ ಗೆದ್ದು ಇವರನ್ನು ಕರೆದುಕೊಂಡುಹೋಗಬ ಹುದು ಎಂದು ಹೇಳಿದನು. ಅಲ್ಲಿನ ರಾಜಕುಮಾರರು ಭೀಷ್ಮನಮೇಲೆ ಯುದ್ಧ ಸನ್ನದ್ಧರಾಗಿ ಅನೇಕ ಬಾಣಪ್ರಯೋಗಮಾಡಲು ಭೀಷ್ಮನು ಒಬ್ಬನೇ ಆದರೂ ಅವರನ್ನು ಅನಾಯಾಸವಾಗಿ ಗೆದ್ದು ಆ ಕನ್ಯೆಯರನ್ನು ತನ್ನ ಪುತ್ರಿಯರಂತೆಯೂ ಅಕ್ಕತಂಗಿಯರಂತೆಯೂ ಸೊಸೆಯರಂತೆಯೂ ಲಾಲಿಸುತ್ತಾ ಕರೆದುಕೊಂಡು ಹೊರಟು ತನ್ನ ಪಟ್ಟಣವನ್ನು ಸೇರಿ ವಿಚಿತ್ರವೀರ್ಯನಿಗೆ ಅವರನ್ನು ವಿವಾಹಮಾಡ ಲುದ್ಯುಕ್ತನಾದನು. ಅವರಲ್ಲಿ ದೊಡ್ಡವಳಾದ ಅಂಬೆಯೆಂಬುವಳು ಭೀಷ್ಮನನ್ನು ನೋಡಿ 'ಅಯ್ಯಾ! ನನ್ನ ಮನಸ್ಸಿನಲ್ಲಿ ಮೊದಲೇ ಮತ್ತೊಬ್ಬ ದೊರೆಯನ್ನು ಪತಿ ಯಾಗಿ ವರಿಸಿರುವೆನು' ಎಂದು ವಿಜ್ಞಾಪಿಸಲು ಆತನು ಆಕೆಯ ಅಭಿಮತವನ್ನು ನೆರವೇರಿಸುವ ಉದ್ದೇಶದಿಂದ ಅಪ್ಪಣೆ ಕೊಟ್ಟು ಅವಳನ್ನು ಬಿಟ್ಟು ಕಳುಹಿಸಿ ದನು. ಆಕೆಯ ತಂಗಿಯಾದ ಅಂಬಿಕೆ ಅಂಬಾಲಿಕೆಯರನ್ನು ತಮ್ಮನಿಗೆ ಮದುವೆ ಮಾಡಿದನು. ಹೀಗೆ ಕೆಲವುಕಾಲ ಕಳೆಯುವಲ್ಲಿ ಆತನು ಮಕ್ಕಳಿಲ್ಲದವನಾಗಿ ಮೃತಿ ಹೊಂದಲು ಆಮಹಾ ಭಾರತವಂಶಕ್ಕೇ ಕೊನೆಯುಂಟಾಗುವ ಸಂಭವ ಒದಗಿತು.

ಆಗ ಸತ್ಯವತಿಯು ಹೆಚ್ಚಾಗಿ ವಿಷಾದವನ್ನು ಹೊಂದಿ ಭೀಷ್ಮನನ್ನು ನೋಡಿ "ನೀನು ರಾಜ್ಯವನ್ನು ವಹಿಸಿ ಈ ಕನ್ನಿಕೆಯರಿಬ್ಬರನ್ನೂ ಪರಿಗ್ರಹಿಸಿ ಇವರಲ್ಲಿ ಪುತ್ರರನ್ನು ಪಡೆದು ವಂಶವನ್ನುದ್ಧರಿಸು'' ಎಂದು ಅಪ್ಪಣೆಮಾಡಲು ಮಿತ್ರರೂ ಬಂಧುಗಳೂ ನಿಮ್ಮ ತಾಯಿಯ ಕೋರಿಕೆಯನ್ನು ತಪ್ಪದೇ ನಡೆಯಿಸುವುದು ಉತ್ತಮವೆಂದು ಆತನಿಗೆ ಹೇಳಿದರು. ಹೀಗೆ ಪುನಃ ರಾಜ್ಯವೂ ಕಾಮಸುಖ ಗಳೂ ತನ್ನನ್ನು ಸೇರುವ ಸಂದರ್ಭಬರಲು ಶಂತನು ಪುತ್ರನು ತಾನು ಮಾಡಿದ್ದ ಪ್ರತಿಜ್ಞೆಗೆ ವಿರೋಧವಾಗಿ ನಡೆಯಲಿಷ್ಟಪಡಲಿಲ್ಲ. ತನ್ನ ಶಪಥವನ್ನು ಬಿಟ್ಟರೆ ಅವೆಲ್ಲವೂ ಅವನಿಗೆ ಒರುತ್ತಿದ್ದವಾದರೂ ಆತನಿಗೆ ಸತ್ಯಕ್ಕಿಂತ ದೊಡ್ಡದಾದ ಧರ್ಮ ವ್ಯಾವುದೂ ಇರಲಿಲ್ಲವು. ಆತನು ತಾಯಿಗೆ ಹೇಳಿದ ಉತ್ತರವನ್ನು ನೀವು ಓದಿ ದಲ್ಲಿ ಪೂರ್ವದಲ್ಲಿ ನಮ್ಮದೇಶದಲ್ಲಿ ಎಂತಹ ಮಹಾಪುರುಷರಿದ್ದು ದೇಶಕ್ಕೆ ಕೀರ್ತಿ ಯನ್ನು ತಂದರೋ ಅದನ್ನು ತಿಳಿಯಬಹುದು.

ಭೀಷ್ಮನು ಹೇಳಿದ್ದೇನಂದರೆ:—ತಾಯೆ! ನೀನು ಹೇಳಿದುದು ನಿಜವಾಗಿ ಯೂ ಧರ್ಮವೆಂದು ನಾನು ತಿಳಿದಿರುವೆನು: ಆದರೂ ನನಗೆ ಸಂತಾನವುಂಟಾಗ ದಿರುವುದಕ್ಕಾಗಿ ನಾನು ಮಾಡಿದ ಪ್ರತಿಜ್ಞೆಯು ನಿನಗೆ ಗೊತ್ತೇ ಇರುವುದಲ್ಲವೇ? ನಿಮ್ಮ ತಂದೆಯು ನಿನ್ನನ್ನು ಕೊಡುವಾಗ ನಡೆದ ಸಂಗತಿಯನ್ನೆಲ್ಲಾ ನೀನು ತಿಳಿದಿರುವೆ ಯಲ್ಲವೇ? ಮಾತೆಯೇ, ಇನ್ನೂ ಹೇಳುವೆನು ಕೇಳು. ತ್ರಿಲೋಕಾಧಿಪತ್ಯವ ನ್ನಾದರೂ ಅದಕ್ಕೆ ಮೀರಿದ ಐಶ್ವರ್ಯವನ್ನಾದರೂ ತಿರಸ್ಕರಿಸುವೆನಲ್ಲದೆ ಸತ್ಯ ವನ್ನು ಬಿಡಲೊಲ್ಲೆನು. ಪೃಥ್ವಿಯು ಗಂಧಗುಣವನ್ನೂ ಜಲವು ರಸವನ್ನೂ ತೇಜಸ್ಸು ರೂಪವನ್ನೂ ವಾಯುವು ಸ್ಪರ್ಶಗುಣವನ್ನೂ ಅಂತರಿಕ್ಷವು ಶಬ್ದಗುಣವನ್ನೂ ಸೂರ್ಯನು ತೇಜಸ್ಸನ್ನೂ ಅಗ್ನಿಯು ಬಿಸಿಯನ್ನೂ ಚಂದ್ರನು ಶೈತ್ಯವನ್ನೂ ಇಂ ದ್ರನು ಪರಾಕ್ರಮವನ್ನೂ ಧರ್ಮದೇವತೆಯು ಧರ್ಮವನ್ನೂ ಬಿಟ್ಟಾಗ್ಯೂ ನಾನು ಧರ್ಮವನ್ನು ಬಿಡುವುದಿಲ್ಲವು.—ಎಂದು ಹೇಳಿದನು. ಭೀಷ್ಮನ ಮಾತನ್ನು ಕೇಳಿದ ಕಮಲನೇತ್ರೆಯಾದ ಸತ್ಯವತಿಯು ಕಣ್ಣೀರುಸುರಿಸುತ್ತಾ ಪುನಃ ಎಷ್ಟುವಿಧಗ ಳಿಂದ ಬೇಡಿದರೂ ಆತನು ಒಪ್ಪದೇ ಹೀಗೆ ಹೇಳಿದನು—"ತಾಯೆ! ಧರ್ಮದಿಂದ ನನ್ನ ಮನಸ್ಸನ್ನು ಎಳೆಯಬೇಡ. ಆಡಿದಮಾತನ್ನು ತಪ್ಪುವಿಕೆಯು ಕ್ಷತ್ರಿಯನಿಗೆ ಬಹುನಿಂದ್ಯವಾದುದೆಂದು ಶಾಸ್ತ್ರಗಳು ಹೇಳುತ್ತವೆ. ಶಂತನು ವಂಶವು ನಾಶವಾಗ ದಿರುವುದಕ್ಕಾಗಿ ಕ್ಷತ್ರಿಯಧರ್ಮಕ್ಕನುಗುಣವಾದ ಉಪಾಯವನ್ನು ಹೇಳುವೆನು. ಅದನ್ನು ತಿಳಿದು ವಿದ್ವಾಂಸರಾದ ಪುರೋಹಿತರೊಡನೆಯೂ ಆಪದ್ಧರ್ಮವನ್ನು ತಿಳಿದವರೊಡನೆಯೂ ಆಲೋಚಿಸಿ ಲೋಕಮರ್ಯಾದೆಯನ್ನು ತಿಳಿದು ಕರ್ತವ್ಯ ವನ್ನು ನಿರ್ಣಯಿಸತಕ್ಕವಳಾಗು. ಯಾರಾದರೂ ಒಬ್ಬ ಮಹರ್ಷಿಯ ದೆಸೆಯಿಂದ ಈ ಸ್ತ್ರೀಯರಲ್ಲಿ ವಿಚಿತ್ರವೀರ್ಯನಿಗೆ ಸಂತಾನವುಂಟಾಗುವಂತೆ ಮಾಡು." ಎಂದು ಹೇಳಿದ ಮಾತನ್ನು ಕೇಳಿ ಸತ್ಯವತಿಯು ಮಗನನ್ನು ಕುರಿತು ಈರೀತಿ ಹೇಳಿದಳು. "ನನಗೆ ಪರಾಶರಮುನೀಶ್ವರನದೆಸೆಯಿಂದವೊದಲು ಒಬ್ಬಮಹರ್ಷಿಯುಹುಟ್ಟಿದನು.. ಅವನು ಪೂರ್ವಜನ್ಮದಲ್ಲಿ ಮಹಾ ತಪಸ್ವಿಯಾಗಿದ್ದುದರಿಂದ ಹುಟ್ಟಿದಕೂಡಲೆ ತಂದೆ ಯೊಡನೆ ತಪಸ್ಸುಮಾಡುವುದಕ್ಕಾಗಿ ಹೊರಟುಹೋದನು. ಭೀಷ್ಮನೆ! ನೀನು ಸಮ್ಮ ತಿಸುವುದಾದರೆ ಆತನನ್ನು ಸ್ಮರಿಸುವೆನು." ಎಂದು ಆತನ ಸಮ್ಮತಿಯಿಂದ ಮಗ ನನ್ನು ಸ್ಮರಣೆಮಾಡಿದಮಾತ್ರದಿಂದಲೇ ಕೃಷ್ಣದ್ವೈಪಾಯನನು ತಾಯಿಯ ಸಮಾ ಪಕ್ಕೆ ಬರಲು ಆತನಿಗೆ ಸತ್ಯವತಿಯು ವೃತ್ತಾಂತವನ್ನೆಲ್ಲಾ ತಿಳಿಸಿ ಸಂತಾನವನ್ನು

ಟುಮಾಡೆಂದು ಪ್ರಾರ್ಥಿಸಿದಳು ಆ ಋಷಿಶ್ರೇಷ್ಠನು ಆ ಮಾತಿಗೆ ಸಮ್ಮತಿಸಿದವನಾಗಿ ನಿನ್ನ ಸೊಸೆಯರನ್ನು ಒಂದು ಸಂವತ್ಸರದವರೆಗೆ ನಾನು ಹೇಳಿದ ವ್ರತವನ್ನಾಚರಿಸುವಂತೆ ಕಳುಹಿಸೆಂದು ಹೇಳಲು ತಾಯಿಯು ಅದುವರೆಗೂ ರಾಜ್ಯವು ಅನಾಯಕವಾಗುವುದರಿಂದ ಜಾಗ್ರತೆಯಾಗಿ ಪುತ್ರೋತ್ಪಾದನೆಯನ್ನು ಮಾಡೆಂದು ಹೇಳಿದಳು. ಅದಕ್ಕೆ ಆತನು ಒಪ್ಪಿದವನಾಗಿ ಸ್ತ್ರೀಯರು ನನ್ನ ರೂಪವನ್ನು ನೋಡಿ ಭಯಪಡದಿರಬೇಕೆಂದು ಹೇಳಲು ತಾಯಿಯು ಸೊಸೆಯರನ್ನು ಕರೆದು ಸಮ್ಮತಿಪಡಿಸಿದಳು. ಆದರೂ ಅಂಬಿಕೆಯು ತನ್ನಬಳಿಗೆ ಮುನಿನಾಥನು ಬಂದಾಗ ಆತನ ಕಪ್ಪಾದ ಶರೀರವನ್ನೂ ಕಪಿಲವರ್ಣದ ಜಟಾಸಮೂಹವನ್ನೂ ತೇಜೋಯುಕ್ತಗಳಾದ ಕಣ್ಣುಗಳನ್ನೂ ದೊಡ್ಡದಾದ ಗಡ್ಡವನ್ನೂ ನೋಡಿ ಭಯಪಟ್ಟು ಆತನು ಹೊರಟುಹೋಗುವವರೆಗೂ ಕಣ್ಣುಗಳನ್ನು ಮುಚ್ಚಿಕೊಂಡಿದ್ದುಬಿಟ್ಟಳು. ಆಕೆಗೆ ಪೂರ್ವಾರ್ಜಿತಕರ್ಮಕ್ಕನುಸಾರವಾಗಿ ಕುರುಡನಾದ ಪುತ್ರನು ಹುಟ್ಟಬೇಕಾಗಿದ್ದುದರಿಂದ ಆ ಮುನಿವರನು ಆಕೆಯ ಗರ್ಭದಲ್ಲಿ ಹುಟ್ಟುವವನು ಕುರುಡನಾಗುವನೆಂದು ಹೇಳಿದನು. ಆತನೇ ಧೃತರಾಷ್ಟ್ರನು. ಆತನು ಕುರುವಂಶದಲ್ಲಿ ಜನಿಸಿದ ಅಂಧನಾದ ದೊರೆಯು. ಅಂಬಾಲಿಕೆಯು ಆ ಮುನಿಯನ್ನು ನೋಡಿ ಭಯಪಟ್ಟುದರಿಂದ ಮುಖವು ವಿವರ್ಣವಾಗಲು ಆಕೆಯ ಮಗನು ಬಿಳುಪಾದ ಶರೀರವುಳ್ಳವನಾಗಿ ಪಾಂಡುವೆನಿಸಿಕೊಂಡನು. ಆತನ ಮಕ್ಕಳೇ ಮಹಾ ಭಾರತ ಯುದ್ಧದಲ್ಲಿ ಜಯಶೀಲರಾದ ಪಾಂಡವರು. ಇವರಿಬ್ಬರನ್ನೂ ನೋಡಿ ಸತ್ಯವತಿಯು ಪುನಃ ಒಬ್ಬ ಮಗನನ್ನು ಉತ್ಪಾದನೆಮಾಡುವುದಕ್ಕಾಗಿ ಆ ಮುನಿವರನನ್ನು ಪ್ರಾರ್ಥಿಸಿಕೊಂಡಳಾದರೂ ಅಂಬಿಕೆಯು ಅತ್ತೆಯ ಮಾತುಗಳನ್ನು ಉಪೇಕ್ಷಿಸಿ ತಾನು ಆತನ ಬಳಿಗೆ ಹೋಗಲೊಲ್ಲದೆ ಶೂದ್ರಸ್ತ್ರೀಯಾದ ತನ್ನ ದಾಸಿಯನ್ನು ಕಳುಹಿಸಿದಳು. ಆಕೆಯು ಆ ಮುನೀಂದ್ರನ ಮಹಿಮೆಯನ್ನು ತಿಳಿದವಳಾಗಿ ಆತನ ವಿಕಾರರೂಪಕ್ಕೆ ಭಯಪಡದೇ ವಿನಯದಿಂದಲೂ ಪ್ರೀತಿಯಿಂದಲೂ ಕೂಡಿರಲು ಆಕೆಗೆ ಸುಪುತ್ರನಾಗುವಂತೆ ಆತನು ಅನುಗ್ರಹಿಸಲು ಧರ್ಮದೇವತೆಯು ಆಕೆಗೆ ಮಗನಾಗಿ ಹುಟ್ಟಿ ವಿದುರನೆಂದು ಪ್ರಸಿದ್ಧನಾದನು. ಹೀಗೆ ಧೃತರಾಷ್ಟ್ರನೂ ಪಾಂಡುವೂ ವಿದುರನೂ ಅಣ್ಣತಮ್ಮಂದಿರಾಗಿ ಹುಟ್ಟಿದರೂ ಇಬ್ಬರ ಮಕ್ಕಳೂ ಯುದ್ಧದಲ್ಲಿ ಎರಡುಪಕ್ಷದವರಾಗಿ ಕಾದಿದರು. ವಿದುರನು ಧೃತರಾಷ್ಟ್ರನಿಗೆ ಹಿತವನ್ನು ಮಾಡುತ್ತಾ ಇದ್ದುಕೊಂಡು ಮಂತ್ರಿತ್ವವನ್ನು ವಹಿಸಿದ್ದನು.

ಈ ಮೂವರು ಬಾಲಕರನ್ನೂ ಭೀಷ್ಮನು ತನ್ನ ಮಕ್ಕಳಂತೆ ಪ್ರೀತಿಯಿಂದ ಕಾಪಾಡುತ್ತಾ ಅವರಿಗೆ ಉಪನಯನಾದಿ ಸಂಸ್ಕಾರಗಳನ್ನು ಮಾಡಿಸಿ ವಿದ್ಯಾಭ್ಯಾಸಮಾಡಿಸಲು ಅವರು ವಯೋವಂತರಾಗಿ, ವೇದಾಧ್ಯಯನವನ್ನು ಮಾಡಿ, ಶರೀರಕ್ಕೆ ಶಕ್ತಿಯನ್ನುಂಟುಮಾಡುವ ವ್ಯಾಯಾಮಾದಿ ವಿದ್ಯೆಗಳನ್ನು ಕಲಿತು ಧನುರ್ವಿದ್ಯೆಯ ಮರ್ಮವನ್ನು ತಿಳಿದು ಅಶ್ವಾರೋಹಣ, ಗಜಶಿಕ್ಷೆ, ಗದಾಯುದ್ಧ, ಕತ್ತಿಯಸಾಮು ಮೊದಲಾದವುಗಳಲ್ಲಿ ನೈಪುಣ್ಯಹೊಂದಿ ನೀತಿಶಾಸ್ತ್ರವನ್ನು ಅಭ್ಯಾಸಮಾಡಿ ಇತಿಹಾಸ ಪುರಾಣಾದಿಗಳನ್ನೂ ಮತ್ತು ಅನೇಕವಿದ್ಯೆಗಳನ್ನೂ ಕಲಿತು ವೇದವೇದಾಂತಗಳ ತತ್ವಗಳಲ್ಲಿ ಶ್ರೇಷ್ಠರೆನಿಸಿ ಸಕಲವಿದ್ಯೆಗಳಲ್ಲಿಯೂ ಪೂರ್ಣತೆಯನ್ನು ಹೊಂದಿದರು. ಆ ಕಾಲದ ಬಾಲಕರಿಗೆ ವ್ಯಾಯಾಮವಿದ್ಯೆಗಳೊಡನೆ ನೀತಿಶಾಸ್ತ್ರವನ್ನೂ ಮತವಿಷಯಗಳನ್ನೂ ಕಲಿಸುತ್ತಿದ್ದರೆಂದು ನಾವು ತಿಳಿಯಬಹುದಲ್ಲವೆ? ಧೃತರಾಷ್ಟ್ರನು ಅಂಧನಾಗಿದ್ದುದರಿಂದ ಆತನ ತಮ್ಮನಾದ ಪಾಂಡುವೇ ದೊರೆಯಾದನು ಭೀಷ್ಮನು ಸುಬಲನೆಂಬ ದೊರೆಯಮಗಳಾದ ಗಾಂಧಾರಿಯನ್ನು ಧೃತರಾಷ್ಟ್ರನಿಗೆ ಮದುವೆಮಾಡಿದನು. ಕುರುವಂಶಕ್ಕೇ ಕೇಡುತಂದ ಶಕುನಿಯು ಇವಳ ಅಣ್ಣನು. ಈ ಗಾಂಧಾರಿಯನ್ನು ಕುರಿತು ಒಂದು ಮನೋಹರವಾದ ಕಥೆಯುಂಟು. ಏನಂದರೆ ತನ್ನ ಪತಿಯು ಅಂಧನಾದುದರಿಂದ ಆತನಿಗೆ ಇಲ್ಲದ ಭೋಗಗಳನ್ನು ತಾನು ತ್ಯಜಿಸುದಕ್ಕೂ ತನ್ನ ಗಂಡನ ಕಷ್ಟವನ್ನು ತಾನೂ ಅನುಭವಿಸುವುದಕ್ಕೂ ಯಾವಾಗಲೂ ಕಣ್ಣನ್ನು ಬಟ್ಟೆಯಿಂದ ಕಟ್ಟು ಕಟ್ಟಿಕೊಂಡಿದ್ದಳು. ನಮ್ಮ ದೇಶದ ಸ್ತ್ರೀಯರು ಹೆಚ್ಚು ಪತಿಭಕ್ತಿಯುಳ್ಳವರಾಗಿರುವರಲ್ಲವೆ?

ಯಾದವರಿಗೆ ಅಧಿಪತಿಯಾದ ಒಬ್ಬ ಶೂರನ ಮಗಳೂ ಶ್ರೀಕೃಷ್ಣನ ತಂದೆಯಾದ ವಸುದೇವನ ತಂಗಿಯೂ ಆದ ಪೃಥೆ ಎಂಬ ರಮಣಿಯನ್ನು ಭೀಷ್ಮನು ಪಾಂಡುರಾಜನಿಗೆ ಮದುವೆಮಾಡಬೇಕೆಂದು ಅಪೇಕ್ಷಿಸಿದನು. ಆ ಕನ್ಯೆಯು ಸ್ವಯಂವರದಲ್ಲಿ ಪಾಂಡುರಾಜನನ್ನು ಪತಿಯನ್ನಾಗಿ ವರಿಸಿ ಭೀಷ್ಮನ ಇಷ್ಟವನ್ನು ಪೂರ್ತಿಮಾಡಿದಳು. ಆ ಸುಂದರಿಯು ಕುಂತಿಭೋಜನ ಮನೆಯಲ್ಲಿ ಬೆಳೆದವಳಾದುದರಿಂದ ಕುಂತಿಯೆಂದೂ ಹೆಸರಾಯಿತು ಪುನಃ ಭೀಷ್ಮನು ಮದ್ರದೇಶಾಧಿಪತಿಯಾದ ಶಲ್ಯನ ತಂಗಿಯಾದ ಮಾದ್ರಿಯೆಂಬಾಕೆಯನ್ನೂ ಪಾಂಡುರಾಜನಿಗೆ ಎರಡನೆಯ

ಭಾರ್ಯೆಯನ್ನಾಗಿ ವಿವಾಹ ಮಾಡಿಸಿದನು. ಅನಂತರ ಒಂದು ತಿಂಗಳು ಕಳೆದ ಮೇಲೆ ಪಾಂಡುರಾಜನು ಪಟ್ಟಣವನ್ನು ಬಿಟ್ಟುಹೊರಟು ಅನೇಕ ರಾಜರುಗಳನ್ನು ಗೆದ್ದು ಅವರುಗಳಿಂದ ಅಪರಿಮಿತವಾದ ಹಣವನ್ನೂ ಅನೇಕ ಕರಿತುರಗಾದಿಗಳನ್ನೂ ತೆಗೆದುಕೊಂಡು ಹಸ್ತಿನಾಪುರಕ್ಕೆ ಬಂದನು. ಕೂಡಲೇ ಬೇಟೆಗಾಗಿ ಅರಣ್ಯಕ್ಕೆ ತನ್ನ ಪತ್ನಿಯರ ಸಮೇತ ಹೊರಟು ಅಲ್ಲಿ ಕೆಲವು ದಿನಗಳಿದ್ದನು. ಒಂದು ದಿನ ಪಾಂಡುರಾಜನು ಅರಣ್ಯದಲ್ಲಿ ಹೊರಟು ಮೃಗಗಳನ್ನು ಬೇಟೆಯಾಡುತ್ತಾ ಒಬ್ಬ ಋಷಿಯೂ ಆತನ ಪತ್ನಿಯೂ ಜಿಂಕೆಗಳವೇಷವನ್ನು ಧರಿಸಿದವರಾಗಿ ಸೇರಿ ಕ್ರೀಡಿಸುತ್ತಿರುವ ಸಮಯದಲ್ಲಿ ಆ ಜಿಂಕೆಯಮೇಲೆ ಆತನು ಬಾಣವನ್ನು ಹೊಡೆದುಕೊಂದನು. ಆ ಮೃಗವು ಏಟುತಿಂದು ಆತನನ್ನು ನೋಡಿ ಕಾಮಸುಖವನ್ನನುಭವಿಸುವ ಕಾಲದಲ್ಲಿ ನೀನು ಅಕಾರಣವಾಗಿ ನನ್ನನ್ನು ಕೊಂದೆಯಾದುದರಿಂದ ಇದಕ್ಕೆ ತಕ್ಕಫಲವನ್ನು ನೀನು ಅನುಭವಿಸಬೇಕು. ಅಂದರೆ ನೀನೂ ಕಾಮಸುಖವನ್ನನುಭವಿಸಲುದ್ಯುಕ್ತನಾದಾಗ ಸಾಯುವಿ ಎಂದು ಶಪಿಸಿ ಪ್ರಾಣಬಿಟ್ಟಿತು. ಅದನ್ನು ಕೇಳಿ ಆ ದೊರೆಯು ತನಗೆ ಸಂತಾನವುಂಟಾಗುವುದಿಲ್ಲವೆಂದು ಬಹಳವಾಗಿವ್ಯಥೆಪಟ್ಟು ತನ್ನ ಧನವನ್ನೆಲ್ಲಾ ಇತರರಿಗೆ ದಾನಮಾಡಿ ಯತಿಯಾಗಿ ತಪಸ್ಸು ಮಾಡಲು ಅರಣ್ಯವನ್ನುಸೇರಿದನು. ಆತನಪತ್ನಿಯರಾದ ಕುಂತಿಯೂ ಮಾದ್ರಿಯೂ ಆತನ ಹಿಂದೆಯೇ ಹೋದರು.

ಕೆಲವು ಕಾಲಾನಂತರದಲ್ಲಿ ಪಾಂಡುರಾಜನು ಮಕ್ಕಳನ್ನು ಪಡೆಯಲಪೇಕ್ಷೆಯುಳ್ಳವನಾಗಿ ಕುಂತಿಗೆ ತನ್ನ ಮನೋರಥವನ್ನು ತಿಳಿಸಲು ಅದಕ್ಕುಪಾಯಾಂತರವನ್ನು ಕುಂತಿಯು ಈರೀತಿ ಹೇಳಿದಳು. “ಬಾಲ್ಯದಲ್ಲಿ ದೂರ್ವಾಸನೆಂಬ ಋಷಿಗೆ ಪರಿಚರ್ಯೆಮಾಡಿದೆನು. ಆತನನುಗ್ರಹದಿಂದ ಒಂದುಮಂತ್ರವು ನನಗೆ ಉಪದೇಶವಾಗಿದೆ. ಆ ಮಂತ್ರವನ್ನು ಜಪಿಸಿ ಯಾವ ದೇವತೆಯನ್ನು ಆರಾಧಿಸುವೆನೋ ಆ ದೇವತೆಯು ಸಂತಾನವುಂಟಾಗುವಂತೆ ಅನುಗ್ರಹಿಸುವುದಾಗಿ ನನಗೆ ವರವಾಗಿದೆ.” ಎಂದು ತಿಳಿಸಿ ಆ ಮಂತ್ರದಿಂದ ಸಂತಾನವನ್ನು ಪಡೆಯಬಹುದೇ ? ಎಂದು ಪತಿಯ ಅಪ್ಪಣೆಯನ್ನು ಕೇಳಿದಳು. ಆತನು ಹಾಗೇ ಆಗಲೆಂದು ಅಪ್ಪಣೆ ಮಾಡಿದನು. ಕುಂತಿಯು ಆತನ ಅನುಮತಿಯಿಂದ ಧರ್ಮದೇವತೆಯನ್ನಾರಾಧಿಸಿ ಮಂತ್ರವನ್ನು ಜಪಿಸಲು ಆತನ ಅನುಗ್ರಹದಿಂದ ಆಕೆಯಲ್ಲಿ ಯುಧಿಷ್ಠಿರನು

ಜನಿಸಿದನು. ಹಾಗೆಯೇ ಕುಂತಿಯು ಮಹಾಬಲನಾದ ವಾಯುದೇವರನ್ನಾರಾಧಿಸಿ ಭೀಮನೆಂಬಮಗನನ್ನೂ ದೇವೇಂದ್ರನನ್ನಾರಾಧಿಸಿ ಅರ್ಜುನನೆಂಬ ಮಗನನ್ನೂ ಪಡೆದಳು. ಅನಂತರದಲ್ಲಿ ಪಾಂಡುರಾಜನು ಕುಂತೀದೇವಿಯಿಂದ ಮಾದ್ರಿಗೆ ಆ ಮಂತ್ರವನ್ನು ಉಪದೇಶಮಾಡಿಸಲು ಆಕೆಯು ಅಶ್ವಿನೀದೇವತೆಗಳನ್ನು ಆರಾಧಿಸಿ ಅವರ ಅನುಗ್ರಹದಿಂದ ನಕುಲಸಹದೇವರೆಂಬ ಇಬ್ಬರು ಅವಳಿಮಕ್ಕಳನ್ನು ಪಡೆದಳು. ಆ ಐದುಮಂದಿಯೂ ಪಾಂಡುವಿನ ಮಕ್ಕಳಾದುದರಿಂದ ಅವರಿಗೆ ಪಾಂಡವರೆಂಬ ಹೆಸರಾಯಿತು. ನಾವು ಪೀಠಿಕೆಯಲ್ಲಿ ಓದಿದ ರೀತಿಯಲ್ಲಿ ಇವರಲ್ಲಿ ನಾಲ್ವರು ಮೊದಲು ಇಂದ್ರಪದವಿಯಲ್ಲಿದ್ದ ದೇವತೆಗಳ ಅಂಶದಿಂದ ಹುಟ್ಟಿದವರು. ಮಹರ್ಷಿಯಾದ ನರನು ದೇವೇಂದ್ರನಮಗನಾಗಿ ಅರ್ಜುನನೆಂಬ ಹೆಸರಿನಿಂದ ಹುಟ್ಟಿದನು.

ಅನಂತರದಲ್ಲಿ ಒಂದುದಿನ ಪಾಂಡುರಾಜನು ಋಷಿಯಶಾಪವನ್ನು ಮರೆತು ಮಾದ್ರಿಯು ಎಷ್ಟುತಡೆದರೂ ನಿಲ್ಲದೆ ಆಕೆಯೊಡನೆ ಕಾಮಸುಖವನ್ನನುಭವಿಸಿದವನಾಗಿ ಮೃತನಾದನು. ಮಾದ್ರಿಯು ಆತನನ್ನು ತಬ್ಬಿಕೊಂಡು ಅಳಲಾರಂಭಿಸಲು ಕುಂತಿಯು ಅದನ್ನು ಕೇಳಿ ಓಡಿಬಂದು ಆ ವೃತ್ತಾಂತವನ್ನು ತಿಳಿದು ವಿಶೇಷವಾಗಿ ಶೋಕಿಸುತ್ತಿದ್ದಳು. ಹೀಗೆ ಇಬ್ಬರೂ ಗಂಡನೊಡನೆ ತಾವು ತಾವು ಸಹಗಮನ ಮಾಡುವೆವೆಂದು ವಾದಿಸಿದವರಾಗಿ ಕೊನೆಗೆ ಮಾದ್ರಿಯುದೆಸೆಯಿಂದ ಆತನು ಮಡಿದಕಾರಣ ಮಾದ್ರಿಯು ತನ್ನ ಪುತ್ರರನ್ನು ಕುಂತಿಯವಶಮಾಡಿ ತಾನು ಪತಿಯೊಡನೆ ಸಹಗಮನಮಾಡಿದಳು. ಕುಂತಿಯು ಆ ಕುಮಾರರನ್ನು ತನ್ನ ಕುಮಾರರಂತೆಯೇ ವಿಶ್ವಾಸದಿಂದ ನೋಡಿಕೊಂಡಿದ್ದಳು. ಅನಂತರದಲ್ಲಿ ಕೆಲವರು ಋಷಿಗಳು ಅಲ್ಲಿಗೆಬಂದು ಕುಂತಿಯನ್ನೂ ಆ ಬಾಲಕರನ್ನೂ ಸಹ ಕರೆದುಕೊಂಡು ಹೋಗಿ ಹಸ್ತಿನಾಪಟ್ಟಣದಲ್ಲಿ ಭೀಷ್ಮಧೃತರಾಷ್ಟ್ರರಿಗೆ ಒಪ್ಪಿಸಿದರು. ಅವರು ಪಾಂಡುರಾಜನಿಗೆ ಉತ್ತರ ಕ್ರಿಯಾದಿಗಳನ್ನು ನಡೆಯಿಸಿದರು.

ಇಷ್ಟಕ್ಕೆ ಮೊದಲೇ ಗಾಂಧಾರಿಯು ಒಂದು ವರವನ್ನು ಪಡೆದಿದ್ದಳು. ಅದರ ಪ್ರಭಾವದಿಂದ ಒಂದು ನೂರುಮಂದಿ ಪುತ್ರರನ್ನೂ ಒಬ್ಬ ಮಗಳನ್ನೂ ಪಡೆದಿದ್ದಳು. ಅವರಲ್ಲಿ ದೊಡ್ಡವನಾದ ದುರ್ಯೋಧನನು ಭೀಮನು ಹುಟ್ಟಿದದಿನವೇ ಹುಟ್ಟಿದನು. ಆದರೆ ಆತನು ಹುಟ್ಟಿದಾಗ ಅನೇಕ ದುಶ್ಶಕುನಗಳಾದವು. ಸುಂಟ

ರಗಾಳಿಯು ಬೀಸಿತು; ಉರಿಗಳೆದ್ದವು; ಹದ್ದು ನರಿ ಮೊದಲಾದ ಕೀಳು ಜಂತು ಗಳು ಅರಚಿಕೊಂಡವು. ಜನಗಳು ಧರ್ಮಪರರಾಗಿ ಈಶ್ವರನಕಟ್ಟಲೆಯನ್ನು ವಿಚಾರ ದೇ ನಡೆಯುತ್ತಬಂದರೆ ಪ್ರಕೃತಿಯು ಮನುಷ್ಯ ವರ್ಗಕ್ಕೆ ಹಿತವನ್ನೆಸಗುವುದು. ಮನುಷ್ಯರಿಗೆ ದುಃಖಪ್ರಾಪ್ತಿಯಾಗುವ ಸಮಯಬಂದಾಗ ಅದೂ ಸಹ ದುಃಖಿ ಸುವುದು. ಅದರ ದುಃಖವೇ ಮಹೋತ್ಪಾತಗಳು, ದುಶ್ಶಕುನಗಳು. ಹೀಗೆ ಹುಟ್ಟಿದಮಗುವು ತನ್ನ ಕುಲಕ್ಕೂ ದೇಶಕ್ಕೂ ಹಾನಿಯುಂಟುಮಾಡುವುದಕ್ಕಾಗಿ ಜನಿಸಿತಾದುದರಿಂದ ಪ್ರಕೃತಿಯು ಈತನ ಜನನಕ್ಕಾಗಿ ವ್ಯಸನಪಟ್ಟಿತು ಇದನ್ನು ತಿಳಿದಿದ್ದ ಪ್ರಾಜ್ಞನಾದ ವಿದುರನು ಆ ಮಗುವನ್ನು ತ್ಯಜಿಸೆಂದು ಧೃತರಾಷ್ಟ್ರ ನಿಗೆ ಎಷ್ಟು ಹೇಳಿದರೂ ಆತನು ಪುತ್ರವಾತ್ಸಲ್ಯದಿಂದ ಮಗನನ್ನು ಬಿಡಲೊಲ್ಲದೇ ಹೋದನು. ಆದುದರಿಂದ ಜನಗಳಿಗೂ ದೇಶಕ್ಕೂ ಹಿತವನ್ನು ಮರೆತು ಆತ್ಮಸುಖವ ನ್ನು ಬಯಸಿದವನಾದುದರಿಂದ ಇವನಿಗೆ ತುಂಬಾಕೇಡುಂಟಾಯಿತು. ಇವನು ರಾಜಧರ್ಮವನ್ನು ಅತಿಕ್ರಮಿಸಿದವನಾದನು.

ಪ್ರಪಂಚದಲ್ಲಿನ ಜನಗಳಿಗೆ ಹೆಚ್ಚಾದ ಧರ್ಮಗಳನ್ನು ಆಗ ತಿಳಿಸಬೇಕಾ ದುದು ಆವಶ್ಯಕವಿದ್ದುದರಿಂದ ಆಗ ದೇವತೆಗಳು ನಡೆಸಬೇಕಾಗಿದ್ದ ಕೆಲಸಕ್ಕೆ ಅವರಿಗೆ ಸಹಕಾರಿಯಾಗಿ ದುರ್ಯೋಧನನು ಆ ಕಾಲದಲ್ಲಿ ಹುಟ್ಟಿದನು. ಇವ ನು ಪೂರ್ವಜನ್ಮಗಳಲ್ಲಿ ಮಾಡಿದ ಕೃತ್ಯಗಳಿಂದಲೂ ಸಂಪಾದಿಸಿದ ವಾಸನೆಗ ಳಿಂದಲೂ ಈ ಜನ್ಮದಲ್ಲಿ ಇವನು ನಡೆಸಿದ ಕೃತ್ಯಗಳಿಗೆ ತಕ್ಕ ಸಾಮರ್ಥ್ಯವನ್ನು ಪಡೆದು ಜನಿಸಿದನು.

ಆತನು ಪರಾಕ್ರಮಶಾಲಿಯಾಗಿದ್ದು ಅನೇಕ ವಿಷಯಗಳಲ್ಲಿ ನ್ಯಾಯವ ನ್ನನುಸರಿಸಿ ನಡೆಯುತ್ತಿದ್ದನಾದರೂ ಸ್ವಾರ್ಥಪರತೆಯು ಆತನಿಗೆ ಹೆಚ್ಚಾಗಿಯೇ ಇತ್ತು. ಎಲ್ಲರಿಗಿಂತಲೂ ತಾನು ದೊಡ್ಡರಾಜನಾಗಿರಬೇಕೆಂತಲೂ ತನ್ನ ಇಷ್ಟಾ ನುಸಾರ ಎಲ್ಲವೂ ನಡೆಯಬೇಕೆಂತಲೂ ಆತನು ಇಚ್ಛಿಸುತ್ತಿದ್ದನು. ಯಾರಾದರೂ ತನಗಿಂತ ಶ್ರೇಷ್ಠರಾಗಿದ್ದಲ್ಲಿ ಅಸೂಯೆಪಡುತ್ತಿದ್ದನು. ಇದು ಅವನ ನಾಶಕ್ಕೆ ಕಾರ ಣವಾಯಿತು. ದುರ್ಯೋಧನನು ಯುವರಾಜನಾಗಿದ್ದಾಗ್ಯೂ ಯುಧಿಷ್ಠಿರನು ಆತನಿಗಿಂತಲೂ ದೊಡ್ಡವನಾದುದರಿಂದ ಪ್ರಜಾಪಾಲನೆಗೆ ಹಕ್ಕುದಾರನಾಗಿದ್ದನು. ಇದನ್ನು ನೋಡಿಸಹಿಸದಿದ್ದ ದುರ್ಯೋಧನನಿಗೆ ಕೇಡುಸಂಭವಿಸಿತು.

ಪಾಂಡವರೂ ಧಾರ್ತರಾಷ್ಟ್ರರೂ ಸೇರಿ ಬೆಳೆಯುತ್ತಾ ಬಾಲ್ಯ ಕ್ರೀಡೆಗಳಲ್ಲಿ ಆಸಕ್ತರಾಗಿದ್ದರು. ಮತ್ತು ಹುಡುಗಾಟದಲ್ಲಿ ಭೀಮನು ತನ್ನ ಅತಿಶಯವಾದ ಬಲವನ್ನು ಕೌರವರಮೇಲೆ ಪ್ರಯೋಗಿಸುತ್ತಿದ್ದನಾದುದರಿಂದ ಮುಂದಕ್ಕೆ ಇದು ತೊಂದರೆಗೆ ಕಾರಣವಾಯಿತು. ಭೀಮನು ಕೆಲವುವೇಳೆ ಕೌರವರನ್ನು ಕೆಳಗೆ ತಳ್ಳುವನು; ಹತ್ತು ಮಂದಿಗಳನ್ನು ಒಂದೇಸಲ ಹಿಡಿದು ಅವರನ್ನು ಬಹಳ ಹೊತ್ತು ನೀರಿನಲ್ಲಿ ಮುಳುಗಿಸುವನು. ಹಣ್ಣಿಗಾಗಿ ಅವರು ಮರಗಳನ್ನುಹತ್ತಿದಾಗ ಹಣ್ಣುಗಳಂತೆ ಅವರೂ ನೆಲಕ್ಕೆ ಧೊಪ್ಪನೆ ಬಿದ್ದುರುಳುವಂತೆ ಮರವನ್ನು ತನ್ನ ಬಲದಿಂದ ಅಲ್ಲಾಡಿಸಿ ಬಿಡುವನು. ಹೀಗೆ ದ್ವೇಷಬುದ್ಧಿಯಿಂದಲ್ಲದೇ ಕೇವಲ ಹುಡುಗಾಟ ಬುದ್ಧಿಯಿಂದ ಭೀಮನು ತೊಂದರೆ ಕೊಡುತ್ತಾ ಬಂದುದರಿಂದ ಪರಸ್ಪರ ಅಸಮಾಧಾನವೂ ದ್ವೇಷವೂ ಉಂಟಾದದ್ದು ಏನೂ ಅತಿಶಯವಲ್ಲ. ಬಲಶಾಲಿಗಳಾದ ಬಾಲಕರು ಹಿಂದುಮುಂದು ಆಲೋಚನೆಮಾಡದೆ ಇತರರಮೇಲೆ ತಮ್ಮ ಶಕ್ತಿಯನ್ನು ತೋರಿಸಿ ಅವರನ್ನು ಶತ್ರುಗಳನ್ನಾಗಿ ಮಾಡಿಕೊಳ್ಳುವರು. ಹೀಗೆ ಮಾಡುತ್ತಿದ್ದ ಭೀಮನಲ್ಲ ದುರ್ಯೋಧನನಿಗೆ ಅಸೂಯೆಹುಟ್ಟಿ ಅವನನ್ನು ಕೊಂದು ಬಿಡಲು ನಿಶ್ಚಯಿಸಿದನು. ಇದಕ್ಕಾಗಿ ಗಂಗಾತೀರದಲ್ಲಿ ಅತಿಮನೋಹರವಾದ ಒಂದು ಪ್ರಾಸಾದವನ್ನು ಮಾಡಿಸಿ ಒಂದುದಿನ ಅಲ್ಲಿ ವಸಂತವಿಹಾರವನ್ನು ನಡೆಸಲುದ್ಯುಕ್ತನಾಗಿ ಪಾಂಡವರನ್ನು ಅಲ್ಲಿ ವಸಂತವಿಹಾರಕ್ಕೆ ಬರಮಾಡಿಕೊಂಡನು. ಆಗ ಪಾಂಡವರಲ್ಲಿ ಅತ್ಯಂತ ವಿಶ್ವಾಸವಿರುವನಂತೆ ನಟಿಸುತ್ತಾ ವಿಷವನ್ನು ಬೆರೆಸಿದ ಅನ್ನವನ್ನು ಭೀಮನಿಗೆ ಇಡಿಸಿದನು. ಭೋಜನಾನಂತರ ಅವರೆಲ್ಲರೂ ಜಲಕ್ರೀಡೆಯಾಡಲುದ್ಯುಕ್ತರಾಗಲು ಭೀಮನು ವಿಷದ ಬಲದಿಂದ ನೆಲದಲ್ಲಿಬಿದ್ದು ಮೂರ್ಛಿತನಾದನು. ಉಳಿದವರು ಮಹಡಿಯಮೇಲೆ ಮಲಗಿ ನಿದ್ರಿಸುತ್ತಿದ್ದರು. ದುರ್ಯೋಧನನು, ಭೀಮನು ನಿಶ್ಚಲನಾಗಿ ಬಿದ್ದಿರುವುದನ್ನು ಕಂಡು ಅವನನ್ನು ಬಳ್ಳಿಗಳಿಂದ ಕಟ್ಟಿಸಿ ನೀರಿನಲ್ಲಿ ತಳ್ಳಿಸಿದನು. ಭೀಮನು ನೀರಿನಲ್ಲಿ ಮುಳುಗಿಹೋಗಿ ನಾಗಲೋಕವನ್ನು ಸೇರಿದನು. ಅಲ್ಲಿದ್ದ ಸರ್ಪಗಳು ಆತನನ್ನು ಕಚ್ಚಿ ವಿಷವನ್ನುಸುರಿದವು. ಈ ಸರ್ಪವಿಷದಿಂದ ಮೊದಲು ದುರ್ಯೋಧನನು ಹಾಕಿದ್ದ ಸಸ್ಯವಿಷವು ನಿವಾರಣೆಯಾಗಲು ಭೀಮನು ಸ್ವಸ್ಥತೆಹೊಂದಿದವನಾಗಿ ತನಗೆ ಕಟ್ಟಿದ್ದ ಕಟ್ಟುಗಳನ್ನು ಬಿಡಿಸಿಕೊಂಡವನಾಗಿ ಆ ಸರ್ಪಗಳನ್ನು ಕೊಲ್ಲತೊಡಗಿನು. ಆ ಸರ್ಪಗಳು ಇವನ ಪೆಟ್ಟನ್ನು ತಾಳಲಾರದೆ ತಮ್ಮ ರಾಜನಾದ ವಾಸುಕಿಯನ್ನು ಕುರಿತು ತಮ್ಮನ್ನು

ಕಾಪಾಡಬೇಕೆಂದು ಆತನಲ್ಲಿ ಮೊರೆಯಿಟ್ಟವು. ಅವುಗಳಲ್ಲಿ ಒಂದು ಸರ್ಪವು ಭೀಮನ ತಾಯಿಯ ವಂಶದ ಪಿತೃವರ್ಗಕ್ಕೆ ಸೇರಿದವನಾಗಿದ್ದನು. ಆದುದರಿಂದ ಆತನ ಪ್ರಾರ್ಥನೆಯ ಮೇರೆಗೆ ವಾಸುಕಿಯು ಭೀಮನಿಗೆ ದಿವ್ಯರಸವನ್ನು ಕೊಡಲು ಅದನ್ನು ಪಾನಮಾಡಿದ ಭೀಮನು ಹೆಚ್ಚು ಪುಷ್ಟಿಯಾದ ಶರೀರವುಳ್ಳವನಾದನು.

ಅನಂತರ ಎಂಟುದಿನಗಳಲ್ಲಿ ಇವನು ತನಗಾಗಿ ಚಿಂತಿಸುತ್ತಿದ್ದ ತಾಯಿಯನ್ನು ಮತ್ತು ಅಣ್ಣತಮ್ಮಂದಿರನ್ನು ಪುನಃ ಸೇರಿ ದುರ್ಯೋಧನನ ದುಷ್ಕೃತ್ಯಗಳನ್ನು ಅವರಿಗೆ ತಿಳಿಸಿದನು. ಪುನಃ ದುರ್ಯೋಧನನು ಭೀಮನಿಗೂ ಅವನ ಅಣ್ಣತಮ್ಮಂದರಿಗೂ ಅನೇಕ ಕೇಡುಗಳನ್ನುಂಟುಮಾಡುತಿದ್ದಾಗ್ಯೂ ವಿದುರ ಯುಧಿಷ್ಠಿರರ ಅನುಮತಿಯಿಂದ ಪಾಂಡವರು ದುರ್ಯೋಧನನಮೇಲೆ ದೂರು ಹೇಳಲಿಲ್ಲ. ಹೀಗೆ ಪಾಂಡವರು ಆತನಲ್ಲಿ ಪ್ರೀತಿಯನ್ನು ತೋರಿಸುತ್ತಿದ್ದಾಗ್ಯೂ ಅವರಲ್ಲಿ ಈತನಿಗೆ ಮಾತ್ರ ದ್ವೇಷವು ಹೆಚ್ಚುತ್ತಿತ್ತು.

ಹೀಗೆ ಕೌರವರು ಸೋಮಾರಿತನದಿಂದ ದುಷ್ಕಾರ್ಯಗಳನ್ನು ಮಾಡುತ್ತ ವೃಥಾ ಕಾಲವನ್ನು ಕಳೆಯುತ್ತಿದ್ದರು. ಸೋಮಾರಿಗಳಾದ ಬಾಲಕರಿಗೆ ಅದು ಸಹಜವಾದುದೇ ಅಲ್ಲವೇ? ಧೃತರಾಷ್ಟ್ರನು ಇವರಿಗೆ ಧನುರ್ವಿದ್ಯೆಯನ್ನು ಕಲಿಸಲು ಕೃಪಾಚಾರ್ಯನೆಂಬ ಗುರುವಿನ ವಶಕ್ಕೆ ಇವರನ್ನು ಒಪ್ಪಿಸಿದನು. ಆಗ ಕೃಪಾಚಾರ್ಯನ ಮನೆಯಲ್ಲಿ ಆತನ ಭಾವಮೈದುನನೂ ಭರದ್ವಾಜ ಮಹರ್ಷಿಯ ಪುತ್ರನೂ ಆದ ದ್ರೋಣನೆಂಬ ಬ್ರಾಹ್ಮಣನು ವಾಸಿಸುತ್ತಿದ್ದನು. ಆತನು ತನ್ನ ತಂದೆಯ ಆಶ್ರಮದಲ್ಲಿದ್ದಕಾಲದಲ್ಲಿ ಪೃಷತ್ತೆಂಬ ದೊರೆಯಮಗನಾದ ದ್ರುಪದನೆಂಬುವನು ದ್ರೋಣನಿಗೆ ಮಿತ್ರನಾಗಿದ್ದು ಜತೆಯಲ್ಲಿ ವಿದ್ಯೆಯನ್ನು ಕಲಿಯುತ್ತಿದ್ದನು. ದ್ರೋಣನು ಅಸ್ತ್ರವಿದ್ಯೆಯಲ್ಲಿ ಪ್ರವೀಣನಾಗಿ ಭೃಗುಋಷಿಯ ಮಗನಾದ ಪರಶುರಾಮನಿಂದ ಮಹಾಸ್ತ್ರಗಳ ಪ್ರಯೋಗೋಪಸಂಹಾರಗಳನ್ನೆಲ್ಲಾ ತಿಳಿದವನಾಗಿ ಅಷ್ಟರಲ್ಲಿಯೇ ಬಾಲ್ಯಸ್ನೇಹಿತನಾದ ದ್ರುಪದನು ಪಾಂಚಾಲದೇಶದಲ್ಲಿ ರಾಜನಾಗಿರಲು ಆತನ ಬಳಿಗೆ ಬಂದು ತನ್ನ ಸ್ನೇಹಿತನೆಂಬ ಭಾವದಿಂದ ಆತನಲ್ಲಿ ಸಲಿಗೆಯಿಂದ ಮಾತನಾಡಿದನು. ದ್ರುಪದನಾದರೋ ಧನಪ್ರಭುತ್ವಗಳ ಮದದಿಂದ ಆತನನ್ನು ಧಿಕ್ಕರಿಸಿ ಈರೀತಿ ಹೇಳಿದನು. "ದೊರೆಗಳಿಗೆ ದರಿದ್ರರೊಡನೆ ಸ್ನೇಹ ಸಲ್ಲುವುದೇ? ರಾಜನಲ್ಲದವನು ದೊರೆಗೆ ಎಂದಿಗೂ ಮಿತ್ರನಾಗಲಾರನು." ಎಂದು ದ್ರುಪದನು ಹೇಳಿದ್ದರಿಂದ ಆತನಿಗೆ ಅನಂತರದಲ್ಲಿ ಕಷ್ಟವೊದಗಿತು. ದ್ರೋಣನು ಆಗ ಏನನ್ನೂ ಹೇಳದೆ ಹಸ್ತಿನಾಪುರಕ್ಕೆ ಬಂದು ಕೆಲವು ದಿನಗಳು ಕೃಪಾಚಾರ್ಯನ ಮನೆಯಲ್ಲಿ ವಾಸಿಸಿದನು. ಈತನ ಮಗನಾದ ಅಶ್ವತ್ಥಾಮನು ಕೃಪಾಚಾರ್ಯನಿಗೆ ಸಹಾಯಕನಾಗಿದ್ದು ರಾಜಕುಮಾರರಿಗೆ ವಿದ್ಯೆಯನ್ನು ಕಲಿಸುತ್ತಿದ್ದನು.

ಆ ರಾಜಕುಮಾರರು ಒಂದುದಿನ ಚಂಡಾಡುತ್ತಿರಲು ಆ ಚಂಡು ಒಂದು ಹಾಳು ಬಾವಿಯಲ್ಲಿ ಬಿದ್ದಿತು. ಅದನ್ನು ತೆಗೆದುಕೊಳ್ಳಲಾರದೇ ಅವರು ಆ ಕಡೆ ಹೋಗುತ್ತಿದ್ದ ಒಬ್ಬ ಬ್ರಾಹ್ಮಣನನ್ನು ನೋಡಿ ಅದನ್ನು ತೆಗೆದುಕೊಡೆಂದು ಕೇಳಿಕೊಂಡರು. ಆತನು ತನ್ನ ಉಂಗುರವನ್ನು ಆ ಹಳ್ಳದಲ್ಲಿ ಹಾಕಿ ಒಂದು ಹುಲ್ಲುಕಡ್ಡಿಯನ್ನಭಿಮಂತ್ರಿಸಿ ಪ್ರಯೋಗಿಸಲು ಅದು ಚಂಡನ್ನು ಮೇಲಕ್ಕೆ ತಂದಿತು. ಕೂಡಲೇ ಒಂದು ಬಾಣವನ್ನು ಪ್ರಯೋಗಮಾಡಿ ಅದರೊಡನೆ ಉಂಗುರವನ್ನು ಬರಮಾಡಿಕೊಂಡನು. ಅದಾದಮೇಲೆ ಬಾಲಕರು ತುಂಬಾಆಶ್ಚರ್ಯಪಟ್ಟು ಇವನಿಗೆ ಪ್ರತ್ಯುಪಕಾರಮಾಡಬೇಕೆಂದು ಕುತೂಹಲಯುಕ್ತರಾಗಿರಲು ಅದನ್ನುನೋಡಿ ಈ ವೃತ್ತಾಂತವನ್ನು ಭೀಷ್ಮನಿಗೆ ತಿಳಿಸಿ ಎಂದು ಬ್ರಾಹ್ಮಣನು ಹೇಳಿದನು. ಅದರಂತೆ ಅವರು ಭೀಷ್ಮನಲ್ಲಿ ಈ ವೃತ್ತಾಂತವನ್ನು ಹೇಳಿದರು. ಆತನು ಅವರಿಗೆ ತಕ್ಕ ಆಚಾರ್ಯನನ್ನು ಗೊತ್ತುಮಾಡಬೇಕೆಂದು ಬಹಳದಿನದಿಂದಲೂ ಹುಡುಕುತ್ತಲೇ ಇದ್ದನು. ಈ ವೃತ್ತಾಂತವನ್ನು ಕೇಳಿ ಇವನೇ ದ್ರೋಣನೆಂದು ಊಹಿಸಿ ಆತನ ಸಮೀಪವನ್ನೈದಿ ಆತನನ್ನು ಗೌರವಿಸಿ ತನ್ನ ಮನೆಗೆ ಕರೆತಂದನು. ದ್ರೋಣನು ತನ್ನ ವೃತ್ತಾಂತವನ್ನೆಲ್ಲಾ ಆತನಿಗೆ ತಿಳಿಸಲು ಭೀಷ್ಮನು ತನ್ನ ಮೊಮ್ಮಕ್ಕಳಿಗೆ ಧನುರ್ವಿದ್ಯೆಯನ್ನು ಕಲಿಸುವುದಕ್ಕಾಗಿ ಆತನನ್ನು ತನ್ನಲ್ಲಿಟ್ಟುಕೊಂಡು ಅಂತಹ ಗುರುವು ಸಿಕ್ಕಿದುದಕ್ಕಾಗಿ ಬಹಳವಾಗಿ ಸಂತೋಷಪಟ್ಟನು.

ದ್ರೋಣನು ಆ ರಾಜಕುಮಾರರನ್ನು ನೋಡಿ 'ನನ್ನ ಮನಸ್ಸಿನಲ್ಲೊಂದು ಕೋರಿಕೆಯುಂಟು. ನೀವು ಧನುರ್ವಿದ್ಯೆಯನ್ನು ಕಲಿತಮೇಲೆ ನೆರವೇರಿಸುವಿರಾ' ಎಂದು ಪ್ರಶ್ನೆಮಾಡಲು ಎಲ್ಲರೂ ಏನೊಂದುತ್ತರವನ್ನೂ ಹೇಳದೆ ಸುಮ್ಮನಿದ್ದರು. ಅರ್ಜುನನು ಅದು ಎಂತಹ ಕೆಲಸವಾಗಿದ್ದಾಗ್ಯೂ ನಾನು ಸಾಧಿಸುವೆನೆಂದು ಹೇಳಿದನು. ದ್ರೋಣನಲ್ಲಿ ಶಿಷ್ಯನಾಗಿದ್ದಷ್ಟುದಿನವೂ ಅರ್ಜುನನು ಕೇವಲ ಗುರುಭಕ್ತಿಯುಳ್ಳವನಾಗಿದ್ದುದರಿಂದ ಗುರುವಿನ ಪ್ರೀತಿಗೆ ಪಾತ್ರನಾಗಿದ್ದನು. ಒಂದು ರಾತ್ರಿ ಅರ್ಜುನನು ಊಟಮಾಡುತ್ತಿರುವಕಾಲದಲ್ಲಿ ದೀಪವು ಆರಿಹೋಯಿತು. ಅರ್ಜುನನು ಅಭ್ಯಾಸಬಲದಿಂದ ಮೊದಲಿನಂತೆಯೇ ಊಟಮಾಡುತ್ತಿದ್ದನು. ಅಭ್ಯಾಸಬಲದಿಂದ ಏನನ್ನಾದರೂ ಸಾಧಿಸಬಹುದೆಂದು ಅರ್ಜುನನು ಇದರಿಂದ ತಿಳಿದುಕೊಂಡು ರಾತ್ರಿಯಕಾಲದಲ್ಲಿಯೂ ಧನುರ್ವಿದ್ಯೆಯನ್ನು ಅಭ್ಯಾಸಮಾಡಲುಪಕ್ರ

ಮಿಸಿ ಕತ್ತಲೆಯಲ್ಲಿಯೂ ಬಾಣಪ್ರಯೋಗವಮಾಡುವುದನ್ನು ಕಲಿತನು. ಅರ್ಜುನನ ಶಕ್ತಿಗೆ ಆಚಾರ್ಯನು ಪರಮಾಶ್ಚರ್ಯಭರಿತನಾದನು. ಸಣ್ಣ ವಿಷಯಗಳನ್ನಾದರೂ ನಾವು ಚೆನ್ನಾಗಿ ವಿಚಾರಮಾಡಿ ತಿಳಿದೆವಾದರೆ ಅರ್ಜುನನಂತೆ ನಾವೂ ನಮಗುಪಯುಕ್ತಗಳಾದ ಅಂಶಗಳನ್ನು ಗ್ರಹಿಸಬಹುದು.

ದ್ರೋಣಾಚಾರ್ಯನಲ್ಲಿ ಧನುರ್ವಿದ್ಯೆಯನ್ನು ಕಲಿಯಬೇಕೆಂಬ ಕುತೂಹಲದಿಂದ ಅನೇಕಮಂದಿ ರಾಜಕುಮಾರರು ಬಂದು ಸೇರಿದರು. ನಿಷಾದರೆಂಬ ಕೀಳುಜಾತಿಯವರ ರಾಜನ ಮಗನಾದ ಏಕಲವ್ಯನೆಂಬುವನು ದ್ರೋಣನ ಸಮೀಪಕ್ಕೆ ಬಂದು ತನಗೆ ಧನುರ್ವಿದ್ಯೆಯನ್ನು ಕಲಿಸಬೇಕೆಂದು ಬೇಡಲು ಆಚಾರ್ಯನು ಧನುರ್ವೇದದಲ್ಲಿ ಮಂತ್ರಗಳಜಪವೂ ಮನೋನಿಗ್ರಹವೂ ಮಾಡಬೇಕಾಗಿರುವುದರಿಂದ ಉತ್ತಮವರ್ಣದವರು ಹೊರತು ಉಳಿದವರು ಇದರಲ್ಲಿ ಅನಧಿಕಾರಿಗಳಾದುದರಿಂದ ನಿನಗೆ ಹೇಳಲಾಗುವುದಿಲ್ಲವೆಂದು ಉತ್ತರಕೊಟ್ಟನು. ಏಕಲವ್ಯನು ಇದಕ್ಕಾಗಿ ಸಿಟ್ಟುಗೊಳ್ಳದೆ ಹೆಚ್ಚಾದ ಭಕ್ತಿಯುಳ್ಳವನಾಗಿ ಆತನ ಪಾದಗಳಿಗೆ ನಮಸ್ಕರಿಸಿ ಅರಣ್ಯಕ್ಕೆ ಹೋಗಿ ಮಣ್ಣಿನಲ್ಲ ದ್ರೋಣನ ರೂಪದ ವಿಗ್ರಹವೊಂದನ್ನು ಮಾಡಿಕೊಂಡು ಅದನ್ನೇ ತನ್ನ ಗುರುವನ್ನಾಗಿಭಾವಿಸಿ ಪೂಜಿಸುತ್ತಾ ಅದರ ಎದುರಿಗೆ ಧನುರ್ವಿದ್ಯೆಯನ್ನಭ್ಯಾಸಮಾಡುತಿದ್ದನು. ಈರೀತಿಯಲ್ಲಿ ಇವನು ತನ್ನ ಗುರುಭಕ್ತಿ ಗೌರವಗಳಿಂದಲೂ ಶ್ರದ್ಧೆಯಿಂದಲೂ ಅತಿ ನೈಪುಣ್ಯವನ್ನು ಹೊಂದಿದನು. ಒಂದುದಿನ ರಾಜಕುಮಾರರು ಆ ಅರಣ್ಯಕ್ಕೆ ಬಂದಿದ್ದ ಸಮಯದಲ್ಲಿ ತನ್ನ ಬಾಣಪ್ರಯೋಗಚಾತುರ್ಯವನ್ನು ತೋರಿಸಿದನು. ಅವರು ಅದನ್ನು ನೋಡಿ ಮನಸ್ಸಿನಲ್ಲಿ ಆಶ್ಚರ್ಯಪಡುತ್ತಾ ಆ ವೃತ್ತಾಂತವನ್ನು ಆಚಾರ್ಯನಲ್ಲಿ ಬಿನ್ನವಿಸಲು ಆಚಾರ್ಯನು ಅರ್ಜುನನೊಡನೆ ಅಡವಿಗೆ ಹೊರಟನು. ಆಚಾರ್ಯರ ಆಗಮನವನ್ನು ಕಂಡು ಏಕಲವ್ಯನು ಇದಿರಾಗಿ ಬಂದು ಆತನ ಪಾದಗಳಿಗಭಿವಂದಿಸಿ ವಿನಯದಿಂದ ಕೂಡಿ ನಿಂತಿರಲು, ದ್ರೋಣನು, ನೀನು ನಿಜವಾಗಿ ನನ್ನ ಶಿಷ್ಯನಾಗಿರುವಪಕ್ಷದಲ್ಲಿ ನನಗೆ ಗುರುದಕ್ಷಿಣೆಯನ್ನೊಪ್ಪಿಸೆನಲು ಏಕಲವ್ಯನಿಂತೆಂದನು. ಸ್ವಾಮೀ! ಗುರುವಿಗೆ ಕೊಡಬಾರದಂತಹದೂ ಉಂಟೇ? ನನ್ನಲ್ಲಿರುವ ವಸ್ತುಗಳಲ್ಲಿ ತಮಗೆ ಬೇಕಾದುದನ್ನು ಕೇಳಿ, ಕೊಡುವೆನೆಂದು ಹೇಳಲು ದ್ರೋಣನಿಂತೆಂದನು. ನಾನು ಕೋರಿದುದನ್ನು ನೀನು ಕೊಡುವಿಯಾದರೆ, ನಿನ್ನ

ಬಲಗೈ ಹೆಬ್ಬೆರಳನ್ನು ಕೊಡು; ಇದೇ ನನಗೆ ಬೇಕಾದುದು ಎಂದು ಕೇಳಲು ಸತ್ಯಸಂಧನಾದ ಏಕಲವ್ಯನು ತನ್ನ ಮನಸ್ಸಿನಲ್ಲಿ ಸ್ವಲ್ಪವೂ ಬೇಸರಹೊಂದದೇ ಪ್ರಸನ್ನವದನನಾಗಿ ತನ್ನ ಹೆಬ್ಬೆರಳನ್ನು ಶ್ರಮವಿಲ್ಲದೆನೇ ಕೊಯ್ದು ಗುರುವಿನ ಪಾದಕ್ಕೆ ಅರ್ಪಿಸಿದನು.

ದ್ರೋಣನು ಹೀಗೆ ಕೋರಿದುದು ತಕ್ಕುದಲ್ಲವೆಂದೂ ಕಾಠಿಣ್ಯತೆಯೆಂದೂ ನೀವು ಯೋಚಿಸುವಿರಾದರೂ ಅದರಲ್ಲೊಂದು ವಿಶೇಷಾಂಶವುಂಟು. ಮನುಷ್ಯನು ತನ್ನ ಪೂರ್ವಜನ್ಮದ ಕರ್ಮಕ್ಕನುಸಾರವಾಗಿ ಈಗ ಉತ್ತಮ ಮಧ್ಯಮ ಅಥವಾ ಅಧಮವರ್ಣದವರಲ್ಲಿ ಈ ಜನ್ಮವನ್ನು ಪಡೆಯುವನು. ಹೀಗೆ ಕರ್ಮಕ್ಕನುಸಾರವಾಗಿ ತನಗೆ ಬಂದ ಕಷ್ಟಗಳನ್ನು ಸೈರಿಸಿಕೊಂಡಿರಬೇಕೇ ಹೊರತು ಬಲವಂತದಿಂದ ಅದನ್ನು ತಪ್ಪಿಸಿಕೊಳ್ಳಲು ಯತ್ನಿಸಬಾರದು. ಏಕಲವ್ಯನು ಹಾಗೆಮಾಡದೆ ತನ್ನ ಸ್ಥಿತಿಗೆ ಮೀರಿದ ಫಲಪ್ರಾಪ್ತಿಗೆ ಆಶೆಪಟ್ಟನಾದುದರಿಂದ ಪಾಪಕೃತ್ಯವನ್ನಾಚರಿಸಿದ ಆ ಶರೀರಕ್ಕೆ ತಕ್ಕ ಶಿಕ್ಷೆಯುಂಟಾಯಿತು. ಆದರೂ ಅವನಿಗೆ ಗುರುಭಕ್ತಿಯೂ ಸೈರಣೆಯೂ ಹೆಚ್ಚಾಗಿದ್ದುದರಿಂದ ಈ ಲೋಕದಲ್ಲಿ ಅವನಿಗೆ ವಿಜಯವೂ ಮರಣಾನಂತರ ಉತ್ತಮಲೋಕಪ್ರಾಪ್ತಿಯೂ ಆಗುವುದರಲ್ಲಿ ಯಾವ ಅಡ್ಡಿಯೂ ಇರಲಿಲ್ಲ.

ಒಂದಾನೊಂದು ದಿನ ದ್ರೋಣನು ಶಿಷ್ಯರನ್ನು ಪರೀಕ್ಷಿಸಲೆಣಿಸಿದವನಾಗಿ ಕೃತಕವಾದ ಪಕ್ಷಿಯೊಂದನ್ನು ಒಂದು ಮರಕ್ಕೆ ಕಟ್ಟಿ ಅದರ ಕಣ್ಣಿಗೆ ಗುರಿಯಿಟ್ಟು ಹೊಡೆಯಿರೆಂದು ಶಿಷ್ಯರಿಗೆ ಅಜ್ಞೆಮಾಡಿದನು. ಮೊದಲು ಯುಧಿಷ್ಠಿರನು ಧನುಸ್ಸನ್ನು ಕೈಯಲ್ಲಿ ತೆಗೆದುಕೊಳ್ಳಲು ಆಚಾರ್ಯನು ಆತನನ್ನು ನೋಡಿ ಆ ವೃಕ್ಷವನ್ನೂ ನನ್ನನ್ನೂ ನಿನ್ನ ತಮ್ಮಂದಿರನ್ನೂ ನೋಡಿದೆಯಾ ಎಂದು ಕೇಳಲು ಆತನು ಎಲ್ಲರನ್ನೂ ನೋಡಿದೆನೆಂದನು. ದ್ರೋಣನು, ನೀನು ಆ ಗುರಿಯನ್ನು ಹೊಡೆಯುವುದಕ್ಕೆ ಯೋಗ್ಯನಲ್ಲ ಎಂದು ಹೇಳಿ ಮತ್ತೊಬ್ಬನನ್ನು ಕರೆದನು. ಉಳಿದರಾಜಕುಮಾರರೆಲ್ಲರೂ ಕ್ರಮವಾಗಿ ಬಂದು ಹಾಗೆಯೇ ಹೇಳಿ ಹಿಂದಕ್ಕೆ ಕಳುಹಿಸಲ್ಪಟ್ಟರು. ಗುರುವು ಅರ್ಜುನನನ್ನು ಕರೆದು ಎಲೈರಾಜಪುತ್ರನೇ! ವೃಕ್ಷವನ್ನೂ ನನ್ನನ್ನೂ ನಿನ್ನ ಸಹೋದರರನ್ನೂ ನೋಡಿದೆಯಾ? ಎಂದು ಕೇಳಿದನು. ಆತನು–ನನ್ನ ಕಣ್ಣಿಗೆ ಆ ಪಕ್ಷಿಮಾತ್ರ ಕಾಣುತ್ತಿರುವುದಲ್ಲದೆ ಮರವಾಗಲೀ ನೀವಾಗಲೀ ಕಾಣುತ್ತಿಲ್ಲ

ವೆಂದು ಹೇಳಿದನು. ಆದರೆ ಪಕ್ಷಿಹೇಗಿರುವುದು? ಹೇಳೆನ್ನಲು ಅದಕ್ಕೆ ಅರ್ಜುನನು ‘ಆ ಪಕ್ಷಿಯತಲೆಯು ಮಾತ್ರ ಕಾಣುತ್ತಿರುವುದಲ್ಲದೆ ಅದರ ಶರೀರವೆಲ್ಲವೂ ಕಾಣುತ್ತಿಲ್ಲ’ವೆಂದು ಹೇಳಿದನು. ಅದಕ್ಕೆ ಆಚಾರ್ಯನು ಸಂತೋಷಿಸಿ ‘ಲಕ್ಷ್ಯವನ್ನು ಹೊಡೆ’ ಯೆಂದು ಅಪ್ಪಣೆಮಾಡಿದನು.

ಚಿತ್ತೈಕಾಗ್ರತೆಯು ನಮ್ಮೆಲ್ಲರಿಗೂಅತ್ಯಾವಶ್ಯಕವಾಗಿರಬೇಕಾದ ಗುಣವು. ನಾವು ಒಂದು ಲಕ್ಷ್ಯವನ್ನು ಸಾಧಿಸಲಿಚ್ಛಿಸಿ ಅನೇಕ ಪದಾರ್ಥಗಳಲ್ಲಿ ದೃಷ್ಟಿಯನ್ನುಳ್ಳವರಾದರೆ ಮನಸ್ಸು ನಿಲುಕಡೆ ಹೊಂದದು. ಆದುದರಿಂದ ನಾವು ಮಾಡಲು ಪಕ್ರಮಿಸಿದ ಕಾರ್ಯದಲ್ಲಿ ನಮ್ಮ ಮನಸ್ಸೆಲ್ಲವನ್ನೂ ನಿಲ್ಲಿಸಬೇಕು. ಗಣಿತಶಾಸ್ತ್ರವನ್ನಭ್ಯಾಸಮಾಡುವ ಸಮಯದಲ್ಲಿ ನಿಮ್ಮಮನೆಯ ಹೊರಗಿರುವ ಪದಾರ್ಥಗಳ ಮೇಲೆಯೂ ನಿಮ್ಮ ಪಕ್ಕಗಳಲ್ಲಿರುವ ಬಾಲಕರು ಮಾಡುವ ಕೆಲಸಗಳ ಮೇಲೆಯೂ ದೃಷ್ಟಿಯನ್ನು ಹೋಗಲೀಸದೆ ನಿಮ್ಮ ಉಪಾಧ್ಯಾಯರು ಕಪ್ಪುಹಲಗೆಯಮೇಲೆ ಬರೆಯುತ್ತಿರುವಲೆಕ್ಕದಲ್ಲಿ ನಿಮ್ಮ ಮನಸ್ಸನ್ನು ನಿಲ್ಲಿಸಿ ಮತ್ತೇನನ್ನೂ ನೋಡದೆಇರಿ. ಹೀಗಿಲ್ಲದಿದ್ದರೆ ಪೂರ್ಣಪಾಂಡಿತ್ಯವು ಉಂಟಾಗಲಾರದು.

ಆ ರಾಜಕುಮಾರರು ಧನುರ್ವಿದ್ಯಾಪ್ರವೀಣರಾದ ನಂತರದಲ್ಲಿ ಅವರ ವಿದ್ಯಾಕೌಶಲವನ್ನು ಎಲ್ಲರಿಗೂ ತೋರ್ಪಡಿಸಲಿಚ್ಛಿಸಿದ ದ್ರೋಣನು ಒಂದುಪ್ರದರ್ಶನವನ್ನೇರ್ಪಡಿಸಿದನು. ರಾಜಶ್ರೇಷ್ಠರೂ ಪುರಜನರೂ ರಂಗಸ್ಥಳದಲ್ಲಿ ಸೇರಿದರು. ಅರ್ಜುನನು, ಲಕ್ಷ್ಯಕ್ಕಾಗಿ ನಿರ್ಮಿಸಿದ, ಓಡುತ್ತಿರುವ ಕಬ್ಬಿಣದ ಹಂದಿಯ ಬಾಯೊಳಕ್ಕೆ ಐದುಬಾಣಗಳನ್ನು ಒಂದೇಸಲ ಹೊಡೆದು ಎಲ್ಲರಿಗಿಂತಲೂ ಹೆಚ್ಚಾದಶಕ್ತಿಯನ್ನೂ ಚಾತುರ್ಯವನ್ನೂ ತೋರ್ಪಡಿಸಿ ನೋಡುವವರಿಗೆ ಆಶ್ಚರ್ಯವನ್ನುಂಟುಮಾಡಿದನು. ಹೀಗೆ ಅರ್ಜುನನು ತನ್ನ ಪರಾಕ್ರಮವನ್ನು ತೋರ್ಪಡಿಸುತ್ತಿರಲು ಕರ್ಣನೆಂಬ ಯೋಧನು ರಂಗಸ್ಥಳವನ್ನು ಪ್ರವೇಶಿಸಿದನು. ಆತನು ದ್ರೋಣನಶಿಷ್ಯರಲ್ಲೊಬ್ಬನಾಗಿದ್ದು ಅರ್ಜುನನೊಡನೆ ಯಾವಾಗಲೂ ಪಂಥವನ್ನು ಮಾಡುತ್ತಿದ್ದನು. ಹೀಗೆ ಅರ್ಜುನನಿಗೆ ಸಮನಾದ ಚಾತುರ್ಯಗಳನ್ನು ಇವನು ತೋರ್ಪಡಿಸುತ್ತಿರಲು ಇವರಿಬ್ಬರೂ ಸಮಾನರೆಂದು ಒಂದು ಯುದ್ಧವನ್ನೇರ್ಪಡಿಸಿದರು. ಆಗ ಕೃಪಾಚಾರ್ಯನು ವಿಧಿವಿಹಿತವಾಗಿದ್ದುದರಿಂದ ಅರ್ಜುನನ ಕುಲಗೋತ್ರಗಳನ್ನು ಹೊಗಳಿಸಿ ಕರ್ಣನನ್ನು ನೋಡಿ ನೀನೂ ಅದರಂತೆ ತಿಳಿಸೆನ್ನಲು ಕರ್ಣನು ವಿವರ್ಣವದನನಾ

ದನು. ದುರ್ಯೋಧನನು ಜಾಗ್ರತೆಯಿಂದ ಅವನಬಳಿಗೆಬಂದು ಕೃಪಾಚಾರ್ಯನನ್ನು ಕುರಿತು ಹೀಗೆಂದನು. ಅರ್ಜುನನೊಡನೆ ಯುದ್ಧಮಾಡಬೇಕಾದವರಿಗೆ ರಾಜ್ಯಾಧಿಪತ್ಯವೇ ಇರಬೇಕೆಂದು ಹೇಳುವಿರಾದರೆ ಈಗಲೇ ನಾನು ಕರ್ಣನಿಗೆ ರಾಜ್ಯಾಧಿಪತ್ಯವನ್ನು ಕೊಡುವೆನೆಂದು ಹೇಳಿ ಆತನನ್ನು ಅಂಗರಾಜ್ಯಕ್ಕೆ ರಾಜನನ್ನಾಗಿ ಮಾಡಿದನು. ಕರ್ಣನು ದುರ್ಯೋಧನನು ಮಾಡಿದ ಉಪಕಾರಕ್ಕೆ ಮೆಚ್ಚಿ ಆತನೊಡನೆ ಕೇವಲ ಸ್ನೇಹದಿಂದಿದ್ದನು. ಅಷ್ಟರಲ್ಲಿ ವೃದ್ಧನಾದ ಸೂತನೊಬ್ಬನು ರಂಗಸ್ಥಳಕ್ಕೆ ಬರಲು ಕರ್ಣನು ಎದುರಾಗಿಹೋಗಿ ಆತನ ಪಾದಗಳಿಗೆ ನಮಸ್ಕರಿಸಲು ಆ ಸೂತನು ಕರ್ಣನನ್ನು ಪುತ್ರನೇ! ಎಂದು ಸಂಬೋಧಿಸಿ ಪ್ರೇಮದೊಡನೆ ಮಾತನಾಡಿಸಿದನು. ಇದನ್ನು ನೋಡಿ ಭೀಮನು ಕೋಪದಿಂದ ಕೂಡಿದವನಾಗಿ ಥಟ್ಟನೆದ್ದು ಕರ್ಣನನ್ನು ನೋಡಿ, ಎಲೋ ಸೂತಪುತ್ರನೇ! ನೀನು ರಾಜಪುತ್ರನಾದ ಅರ್ಜುನನೊಡನೆ ದ್ವಂದ್ವಯುದ್ಧ ಮಾಡಲು ಯೋಗ್ಯನೇ? ಎಂದು ಪರಿಹಾಸಮಾಡಲು ದುರ್ಯೋಧನನು ಅದನ್ನುಕೇಳಿ ಕ್ರೋಧಾತಿಶಯದಿಂದ ಎದ್ದು ಕ್ರೂರವಾಗಿ ಮಾತನಾಡತೊಡಗಿದನು. ಅಷ್ಟರಲ್ಲಿ ಸೂರ್ಯನು ಅಸ್ತಪರ್ವತವನ್ನು ಸೇರಲು ಜನಗಳು ಆದಿನದ ವಿನೋದಗಳನ್ನು ನಿಲ್ಲಿಸಿ ಸರ್ವರೂ ತಮ್ಮ ತಮ್ಮ ಮನೆಗಳನ್ನು ಸೇರಿದರು. ಕರ್ಣಾರ್ಜುನರಲ್ಲಿ ಪರಾಕ್ರಮಶಾಲಿಯಿಂಥವನೆಂಬುದು ಆದಿನ ನಿಶ್ಚಿತವಾಗಲಿಲ್ಲ. ಪುನಃ ಯಾವಾಗಲೂ ನಿರ್ಣಯವಾಗಲಿಲ್ಲ.

ಅನಂತರದಲ್ಲಿ ದ್ರೋಣನು ಶಿಷ್ಯರನ್ನು ಕರೆದು ಹೀಗೆಂದನು. "ನಾನು ನಿಮಗೆ ಧನುರ್ವಿದ್ಯೆಯನ್ನುಪದೇಶಿಸಿದೆನು. ನೀವು ಗುರುದಕ್ಷಿಣೆಯನ್ನು ಕೊಡುವ ಸಮಯವು ಈಗ ಒದಗಿರುವುದು. ಆದುದರಿಂದ ನೀವು ಪಾಂಚಾಲದೇಶವನ್ನಾಳುವ ದ್ರುಪದ ರಾಜನೊಡನೆ ಯುದ್ಧಮಾಡಿ ಅವನನ್ನು ಹಿಡಿದು ಕಟ್ಟಿತಂದು ನನ್ನ ಮುಂದೆ ಇರಿಸಿರಿ. ಇದೇ ನನಗೆ ಬೇಕಾದ ಗುರುದಕ್ಷಿಣೆಯು" ಎಂದು ಹೇಳಲು ಕೌರವಪಾಂಡವರು ಅತಿ ರಭಸದಿಂದ ಹೊರಟು ದ್ರುಪದನಿಗಿದುರಾಗಿ ಯುದ್ಧಮಾಡಲು ಆತನು ತನ್ನ ಬಾಹುಬಲದಿಂದ ಕೌರವರನ್ನು ಸೋಲಿಸಿ ಅಟ್ಟಿದನು. ಅರ್ಜನನು ಸಹೋದರರೊಡನೆ ಕೂಡಿ ದ್ರುಪದನೊಡನೆ ಯುದ್ಧಮಾಡಿ ಆತನನ್ನು ಕಟ್ಟಿತಂದು ಆಚಾರ್ಯನ ಸಮೀಪದಲ್ಲಿರಿಸಲು ದ್ರೋಣನು ಆತನನ್ನು ನೋಡಿ ಕಠಿಣವಾಗಿ ಮಾತನ್ನಾಡದೇ ಕಿರುನಗೆಯಿಂದ ಕೂಡಿ ಮೃದುಭಾಷೆ

ಯಿಂದಿಂತೆಂದನು. 'ನಿನ್ನ ಪ್ರಾಣಗಳು ಈಗ ನನ್ನ ಕೈಯಲ್ಲಿವೆ. ಆದರೂ ನಾನು ನಿನಗೆ ಕೆಟ್ಟುದನ್ನು ಮಾಡುವುದಿಲ್ಲ. ಇನ್ನುಮೇಲಾದರೂ ನಮ್ಮಿಬ್ಬರಿಗೂ ಸ್ನೇಹ ವುಂಟೇ? ನಾನು ಬ್ರಾಹ್ಮಣನಾಗಿ ದಯಾಳುವಾದುದರಿಂದ ನಿನಗೆ ಪ್ರಾಣಭಯ ಬೇಡ. ಎಲೈರಾಜಶ್ರೇಷ್ಠನೇ! ನಾವಿಬ್ಬರೂ ಮೊದಲು ನಮ್ಮ ಗುರುಗಳ ಆಶ್ರಮದಲ್ಲಿ ಬಾಲ್ಯದಲ್ಲಿ ಕೂಡಿಯಾಡುತ್ತಾ ಬೆಳೆಯುತ್ತಿದ್ದುದರಿಂದ ನನಗೆ ಯೌವನ ಬಂದಮೇಲೆಯೂ ನಿನ್ನಲ್ಲಿ ವಿಶ್ವಾಸವು ಹೆಚ್ಚಾಗಿಯೇ ಇತ್ತು. ಆದುದರಿಂದ ಈಗಲೂ ನನ್ನೊಡನೆ ಸ್ನೇಹಕ್ಕೊಡಂಬಡುವನಾಗು. ರಾಜ್ಯವಿಲ್ಲದವನಿಗೆ ದೊರೆಯೊಡನೆ ಸ್ನೇಹವು ಸಲ್ಲದೆಂದು ನೀನು ಹೇಳಿರುವೆಯಾದುದರಿಂದ ನಿನ್ನ ರಾಜ್ಯದಲ್ಲಿ ಅರ್ಧವನ್ನು ನಾನಿಟ್ಟುಕೊಂಡು ಇನ್ನರ್ಧವನ್ನು ನಿನಗೆ ಕೊಟ್ಟಿರುವೆನು ತೆಗೆದುಕೊಳ್ಳುವನಾಗು. ಗಂಗಾನದಿಯ ದಕ್ಷಿಣಭಾಗವನ್ನೆಲ್ಲಾ ನೀನೂ ಅದಕ್ಕುತ್ತರ ಭಾಗವನ್ನು ನಾನೂ ಪಾಲಿಸುವ. ಇನ್ನುಮೇಲಾದರೂ ನನ್ನೊಡನೆ ಸ್ನೇಹಕ್ಕೆ ಸಮ್ಮತಿಸುವವನಾಗೈ' ಎಂದು ಪರಿಹಾಸಮಾಡಿ ದ್ರುಪದನನ್ನು ಬಿಟ್ಟುಕಳುಹಿಸಿದನು.

ಈ ರೀತಿ ದ್ರೋಣನು ತನಗೆ ಆವನೆಸಗಿದ ಅವಮಾನಕ್ಕೆ ಪ್ರತಿಯಾಗಿ ಅವಮಾನವನ್ನು ಮಾಡದೆ ತನ್ನ ಉದಾರಭಾವವನ್ನು ವ್ಯಕ್ತಪಡಿಸಿದನು.

## 3 ನೆಯ ಅಧ್ಯಾಯ

### ಪಾಂಡವರ ಗಂಡಾಂತರಗಳೂ, ವಿಜಯೋತ್ಸವಗಳೂ.

ಹೀಗೆ ಬಾಲ್ಯವು ಕಳೆದನಂತರ ಆ ರಾಜಕುಮಾರರು ಪರಾಕ್ರಮಶಾಲಿಗಳಾಗಿ ಮೆರೆಯುತ್ತಿರಲು ಧೃತರಾಷ್ಟ್ರನು ಅವರಲ್ಲಿ ದೊಡ್ಡವನಾದ ಯುಧಿಷ್ಠಿರನ ಧೈರ್ಯಸ್ಥೈರ್ಯಗಳನ್ನೂ ಕ್ಷಮೆಯನ್ನೂ ಶಾಂತಿಯನ್ನೂ ಸತ್ಯವನ್ನೂ ಸೇವಕರಲ್ಲಿ ಆತನಿಗಿದ್ದ ವಿಶ್ವಾಸವನ್ನೂ ನೋಡಿ ಆತನಿಗೆ ಯುವರಾಜಪಟ್ಟವನ್ನು ಕಟ್ಟಿದನು. ಯುಧಿಷ್ಠಿರನು ಸ್ವಲ್ಪಕಾಲದಲ್ಲಿಯೇ ತನ್ನ ಸೌಶೀಲ್ಯದಲ್ಲಿಯೂ ಸದ್ವರ್ತನೆಯಲ್ಲಿಯೂ ಕಾರ್ಯದಕ್ಷತೆಯಲ್ಲಿಯೂ ಪಾಂಡುರಾಜನನ್ನು ಮೀರಿಸಿದನು. ಆತನ ತಮ್ಮಂದಿರು ಪರರಾಜರನ್ನು ಗೆದ್ದು ರಾಜ್ಯವನ್ನು ವಿಸ್ತಾರಪಡಿಸುತ್ತ ಬಂದರು. ಅವರ ಜಯಾತಿಶಯಗಳನ್ನು ನೋಡುತ್ತಿದ್ದ ಧೃತರಾಷ್ಟ್ರನ ಹೃದಯ

ದಲ್ಲಿ ವ್ಯಥೆಯುಂಟಾಗಿ ಆತನ ನಿದ್ರೆಯನ್ನು ಹೋಗಲಾಡಿಸತೊಡಗಿತು. ಪಾಂಡವರು ವಿಶೇಷವಾಗಿ ದ್ರವ್ಯಸಂಪಾದನೆ ಮಾಡುವುದು, ಪ್ರಜೆಗಳು ಅವರಲ್ಲಿ ಅನುರಕ್ತರಾಗಿದ್ದು ಅವರನ್ನು ಹೊಗಳುವುದು, ಯುಧಿಷ್ಠಿರನಲ್ಲಿ ಆತನ ತಮ್ಮಂದಿರು ಅತ್ಯಂತ ವಿಧೇಯರಾಗಿದ್ದುಕೊಂಡು ಆತನ ಮಾತನ್ನು ಸ್ವಲ್ಪವೂ ವಿಾರದಿರುವುದು, ಇವಗಳನ್ನೆಲ್ಲಾ ನೋಡುತ್ತಿದ್ದ ಧೃತರಾಷ್ಟ್ರನು ತಾನೂ ತನ್ನ ಪುತ್ರರೂ ಅವರಿಗೆ ಕಡಿಮೆಯಾದೆವಲ್ಲಾ ಎಂದು ಚಿಂತಿಸುತ್ತಿದ್ದನು. ಅವರಲ್ಲಿ ಇವನಿಗೆ ವಿಶ್ವಾಸವು ಹೋಗಿ ಅಸೂಯೆ ಹುಟ್ಟಿತು. ಒಂದು ಸಮಯದಲ್ಲಿ ಆತನು ಕಣಿಕನೆಂಬೊಬ್ಬ ಮಂತ್ರಿಯನ್ನು ಕರೆಸಿ, ಇದಕ್ಕೆ ಏನುಮಾಡಬೇಕೆಂದು ಕೇಳಲಾಗಿ ಅವನು ಈ ಮುಂದಿನ ಕಥೆಯಿಂದ ಉತ್ತರವನ್ನು ತಿಳಿಸಿದನು. ಪೂರ್ವಕಾಲದಲ್ಲಿ ಒಂದಾನೊಂದುಕಾಡಿನಲ್ಲಿ ಹುಲಿ, ತೋಳ, ಮುಂಗಿಸಿ, ಇಲಿ ಎಂಬ ನಾಲ್ವರು ಮಿತ್ರರೊಡನೆ ಕೂಡಿ ಒಂದು ನರಿಯು ವಾಸಮಾಡುತ್ತಿತ್ತು. ಅವೆಲ್ಲವೂ ಒಂದು ದಿನ ಜಿಂಕೆಯೊಂದನ್ನು ಹಿಡಿಯಲಿಚ್ಛಿಸಿ ಅದು ನಿದ್ರಿಸುತ್ತಿರುವಾಗ ಇಲಿಯು ಅದರ ಕಾಲನ್ನು ಕಚ್ಚಬೇಕೆಂತಲೂ, ಅದು ಓಡಿಹೋಗಲಾರದೆ ಆಯಾಸದಿಂದ ಬಿದ್ದಿರುವಲ್ಲಿ ಹುಲಿಯು ಅದನ್ನು ಕೊಲ್ಲಬೇಕೆಂತಲೂ ಗೊತ್ತುಮಾಡಿಕೊಂಡು, ಹಾಗೆಯೆ ಅದನ್ನು ಕೊಂದವು. ಅನಂತರದಲ್ಲಿ ನರಿಯು ತನ್ನ ಸ್ನೇಹಿತರನ್ನು ಕುರಿತು ನಾನು ಇದನ್ನು ಕಾದುಕೊಂಡಿರುವೆನು. ನೀವು ಸ್ನಾನವನ್ನು ಮಾಡಿ ಶುಚಿಭೂತರಾಗಿ ಬನ್ನಿರೆಂದು ಸ್ನೇಹಿತರನ್ನೆಲ್ಲಾ ಕಳುಹಿಸಿತು. ಅನಂತರ ಹುಲಿಯು ಮುಂದಾಗಿ ಬರಲು ಅದನ್ನು ನೋಡಿ ನರಿಯು ಅಣ್ಣಾ! ಇಷ್ಟಕ್ಕೆ ಮೊದಲೇ ಇಲಿಯು ಇಲ್ಲಿಗೆ ಬಂದು ಅಯ್ಯೋ! ನಾನು ಜಿಂಕೆಯ ಕಾಲನ್ನು ಕಚ್ಚಿದ್ದರಿಂದಲ್ಲವೇ ಈಗ ಆಹಾರವು ದೊರಕಿತು, ಎಂದು ಜಂಭಮಾಡಿತು; ಎಂಬದಾಗಿ ಹೇಳಲು ಹುಲಿಯು ಗರ್ವದಿಂದ ಈ ಅವಮಾನದ ತಿಂಡಿಯನ್ನು ತಿನ್ನಲೊಲ್ಲೆನು; ಎಲ್ಲಿಯಾದರೂ ಹೋಗಿ ನನಗೆ ಬೇಕಾದ ತಿಂಡಿಯನ್ನು ಸಂಪಾದಿಸಿಕೊಳ್ಳುವೆನೆಂದು ಹೊರಟುಹೋಯಿತು. ಕೂಡಲೆ ಇಲಿಯು ಬರಲು ನರಿಯು ಅದನ್ನು ನೋಡಿ ಮುಂಗಿಸಿಯು ನಿನ್ನನ್ನು ತಿನ್ನಬೇಕೆಂದು ಕಾದಿದೆ. ಸಂಗತಿಯನ್ನು ತಿಳಿಸಿದ್ದೇನೆ; ಎಂದು ಹೆದರಿಸಲು ಅದು ಭಯಪಟ್ಟು ಓಡಿಹೋಯಿತು. ಅನಂತರ ತೋಳವು ಬರಲು ಹುಲಿಯು ನಿನ್ನಮೇಲೆ ಬಹು ಕೋಪವಾಗಿರುವುದೆಂದು ನರಿಯು ಹೇಳಿದ್ದರಿಂದ ಅದೂ ಭಯಪಟ್ಟು ಓಡಿಹೋಯಿತು. ಅನಂತರ

ಮುಂಗಿಸಿಯು ಬರಲು ಉಳಿದ ಮೂವರೂ ನನ್ನೊಡನೆ ಹೋರಿ ಸೋತು ಓಡಿ ಹೋದರು. ನೀನು ಶಕ್ತಿಯುಳ್ಳದ್ದಾದರೆ ನನ್ನೊಡನೆ ಯುದ್ಧಮಾಡು, ಎಂದು ಹೇಳಲು ಅದೂ ಭಯಪಟ್ಟು ಓಡಿತು. ನರಿಯು ಎಲ್ಲವನ್ನೂ ಈರೀತಿಯಲ್ಲಿ ಓಡಿಸಿ ಆ ಜಿಂಕೆಯ ಮಾಂಸವನ್ನೆಲ್ಲಾ ತಾನೊಂದೇ ಮನದಣಿಯೆ ತಿಂದಿತು. ಹೀಗೆ ರಾಜರುಗಳು ಕಪಟೋಪಾಯಗಳಿಂದ ತಮ್ಮ ಶತ್ರುಗಳನ್ನೊಬ್ಬೊಬ್ಬರನ್ನಾಗಿ ಗೆಲ್ಲಬಹುದೆಂಬದಾಗಿ ಕಣಿಕನು ಹೇಳಿದನು.

ಪ್ರಜೆಗಳು ಯುಧಿಷ್ಠಿರನನ್ನು ಹೊಗಳುತ್ತಾ ಆತನೇ ತಮ್ಮ ರಾಜನಾಗಿರಬೇಕೆಂದು ಕೋರುತ್ತಿರಲು ದುರ್ಯೋಧನನು ವಿಷಣ್ಣಚಿತ್ತನಾಗಿ ತನ್ನ ಮನೋವ್ಯಥೆಯನ್ನು ಧೃತರಾಷ್ಟ್ರನೊಡನೆ ತಿಳಿಸಿ ಇಂತೆಂದನು. "ತಂದೆಯೇ ನೀನು ಇನ್ನಾದರೂ ತಕ್ಕ ಉಪಾಯವನ್ನು ಮಾಡದಿದ್ದಲ್ಲಿ ರಾಜ್ಯವು ಪಾಂಡವರ ಕೈಸೇರುವುದೇ ನಿಶ್ಚಯವು. ಆದುದರಿಂದ ಯಾವುದಾದರೊಂದುಪಾಯವನ್ನು ಹುಡುಕಿ ಪಾಂಡವರನ್ನು ವಾರಣಾವತಕ್ಕೆ ಕಳುಹಿಸು. ರಾಜ್ಯವು ನನ್ನಲ್ಲಿ ಸ್ಥಿರವಾದ ಮೇಲೆ ಕುಂತಿಯೂ ಪಾಂಡವರೂ ಅಲ್ಲಿಂದ ಪುನಃ ಬರಲಿ," ಎಂದು ಪ್ರಾರ್ಥಿಸಲು ; ಆ ಕುರಡ ದೊರೆಯು ಪಾಂಡವರಲ್ಲಿ ಯಾವ ತಪ್ಪನ್ನೂ ಕಾಣದಿದ್ದುದರಿಂದ ಅವರುಗಳನ್ನು ಅತ್ಯಂತ ಪ್ರೀತಿಯಿಂದ ಕಾಣುವವನಂತೆ ನಟಿಸುತ್ತಾ ಬಂದು ಒಂದು ದಿನ ಅವರನ್ನು ಕರೆಸಿ ವಾರಣಾವತದಲ್ಲಿ ಪರಮೇಶ್ವರನ ಮಹೋತ್ಸವವು ನಡೆಯುವುದು. ಅದನ್ನು ನೋಡುವಿರಾದರೆ ನೀವುಗಳು ಅಲ್ಲಿಗೆ ಹೋಗಲು ಸಮ್ಮತಿಸಿರುವೆನೆಂದು ಹೇಳಲು; ಅವರು ಅಲ್ಲಿಗೆ ಹೋಗಲು ಇಷ್ಟವಿಲ್ಲದವರಾಗಿದ್ದರೂ ತಂದೆಯ ಅಪ್ಪಣೆಯನ್ನು ನೆರವೇರಿಸುವ ಉದ್ದೇಶದಿಂದ ಅಲ್ಲಿಗೆ ಹೊರಟರು. ದುಷ್ಟಾತ್ಮನಾದ ದುರ್ಯೋಧನನು ಕರ್ಣಶಕುನಿ ದುಶ್ಶಾಸನರೊಡನೆ ಒಳಗೊಳಗೇ ಯೋಚಿಸಿ ಒಂದು ಘೋರಕೃತ್ಯವನ್ನು ಮಾಡಲೆಣಿಸಿದವನಾಗಿ ಪುರೋಚನನೆಂಬುವನನ್ನು ಕರೆಯಿಸಿ ನೀನು ವಾರಣಾವತಕ್ಕೆಹೋಗಿ ಸಜ್ಜರಸ,ಅರಗುಮುಂತಾದ ಅಗ್ನಿದೀಪಕವಸ್ತುಗಳಿಂದ ಮನೋಹರವಾದ ಒಂದು ಅರಮನೆಯನ್ನು ನಿರ್ಮಿಸಿ ಪಾಂಡವರನ್ನು ಆ ಮನೆಯಲ್ಲಿ ನಿಲ್ಲಿಸಿ ಅವರು ಎಚ್ಚರಿಕೆ ತಪ್ಪಿರುವ ಸಮಯದಲ್ಲಿ ಆ ಮನೆಗೆ ಬೆಂಕಿಯನ್ನು ಹತ್ತಿಸಿ ಅವರನ್ನು ನಾಶಪಡಿಸಿ ಬರುವುದೆಂದು ಅವನಿಗೆ ಬೇಕಾದಷ್ಟು ದ್ರವ್ಯವನ್ನು ಲಂಚವಾಗಿ ಕೊಟ್ಟು ಕಳುಹಿಸಿದನು.

ಪಾಂಡವರು ವಾರಣಾವತಕ್ಕೆ ಹೊರಡಲು ಸನ್ನದ್ಧರಾಗಿ ಹಸ್ತಿನಾಪಟ್ಟಣ ವನ್ನು ಬಿಟ್ಟು ಹೊರಡುವಸಮಯದಲ್ಲಿ ಪುರಜನರು ಅಲ್ಲಿ ನೆರೆದವರಾಗಿ "ಧೃತ ರಾಷ್ಟ್ರನು ನಿಮ್ಮನ್ನು ಏಕೆ ಅಲ್ಲಿಗೆ ಕಳುಹಿಸುವನೋ" ಎಂದು ಪ್ರಲಾಪಿಸಲು, ಯುಧಿಷ್ಠಿರನು ಅವರುಗಳನ್ನು ಕುರಿತು ಇಂತೆಂದನು. "ನಮ್ಮೊಡೆಯನು ತಂದೆ ಯಂತೆಯೂ ಗುರುವಿನಂತೆಯೂ ಪೂಜಾರ್ಹನಾದುದರಿಂದ ಅವನ ಅಪ್ಪಣೆಯನ್ನು ಪ್ರೀತಿಯಿಂದ ನಡೆಸುವುದೇ ಪ್ರಜೆಗಳ ಪರಮಧರ್ಮವು. ಹೀಗಿರುವುದರಿಂದ ನೀವುಗಳು ಮನೆಯನ್ನು ಸೇರಿ ಸುಖದಿಂದಿರಿ" ಎಂದು ಹೇಳಿ ಕಳುಹಿಸಿದನು. ಅವರು ಖಿನ್ನಮಾನಸರಾಗಿ ಮನೆಗಳನ್ನು ಸೇರಿದರು. ಆ ಸಮಯದಲ್ಲಿ ವಿದುರನು ಇತರರು ತಿಳಿಯದಿರುವಂತೆ ಮ್ಲೇಚ್ಛಭಾಷೆಯಿಂದ ಈ ರೀತಿ ಹೇಳಿದನು. "ಶಬ್ದಾಣ ದಿಂದ ಮಾಡದಿರುವ ಆಯುಧಗಳಿಂದ ನಿಮಗೆ ಕೇಡುಂಟಾಗದಂತೆ ಜೋಪಾನ ದಿಂದಿರಬೇಕು; ಮನುಷ್ಯನು ತನ್ನ ಮನೆಗೆ ನರಿಯ ಬಿಲಗಳಂತೆ ಅನೇಕಮಾರ್ಗಗ ಳನ್ನು ಕಲ್ಪಿಸಿಕೊಂಡಿದ್ದರೆ ಅಗ್ನಿಬಾಧೆಯಿಂದ ತಪ್ಪಿಸಿಕೊಳ್ಳಬಹುದು. ಅರಣ್ಯದಲ್ಲಿ ಸಂಚಾರಮಾಡೋಣದರಿಂದ ಅರಣ್ಯಮಾರ್ಗವನ್ನು ತಿಳಿದುಕೊಳ್ಳಬಹುದು." ಯುಧಿಷ್ಠಿರನು ಅವನ ಅರ್ಥವನ್ನು ಗ್ರಹಿಸಿ ತಮ್ಮಂದಿರೊಡನೆಯೂ ತಾಯಿಯೊಡನೆಯೂ ಹೊರಟು ವಾರಣಾವತವನ್ನು ಸೇರಿ ಪುರೋಚನನಿಂದ ಸನ್ಮಾನಿಸಲ್ಪಟ್ಟು ಅವನಿಂದ ನಿರ್ಮಿತವಾದ ಅರಗಿನ ಮನೆಯಲ್ಲಿ ವಾಸಮಾಡುತ್ತಾ ಪ್ರತಿದಿನವೂ ಬೇಟೆಯ ನೆವದಿಂದ ಅರಣ್ಯಕ್ಕೆ ಹೋಗುತ್ತಾ ಅಲ್ಲಿನ ಮಾರ್ಗಗಳನ್ನೆಲ್ಲಾ ಅರಿತು ವಿದುರನು ಕಳುಹಿಸಿದ ಒಬ್ಬ ಮನುಷ್ಯನಿಂದ ತಾವು ನಿದ್ದೆಮಾಡುವ ಮನೆಯಿಂದ ಅಡವಿಗೆ ಒಂದು ಸುರಂಗಮಾರ್ಗವನ್ನು ಮಾಡಿಸಿ ಹಗಲುರಾತ್ರಿಯಲ್ಲೂ ಬಹು ಎಚ್ಚರಿಕೆ ಯಿಂದಿರುತ್ತಿದ್ದನು.

ಹೀಗೆ ಒಂದು ಸಂವತ್ಸರಕಾಲ ಪಾಂಡವರು ಅಲ್ಲಿ ವಾಸಿಸುತ್ತಿರಲು ಪುರೋ ಚನನು ಆ ಮನೆಗೆ ಬೆಂಕಿಹಾಕಿ ಅವರನ್ನು ಕೊಲ್ಲಲು ಕಾಲವೊದಗಿದೆ ಯೆಂದು ಯೋಚಿಸಿದನು. ಆದರೆ ಭೀಮಸೇನನು ಅವನಿಗಿಂತಲೂ ಮುಂದಾಗಿಯೇ ಕಾರ್ಯ ವನ್ನು ನೆರವೇರಿಸಿದನು. ಒಂದುದಿನರಾತ್ರಿ ಕುಂತಿಯು ಬ್ರಾಹ್ಮಣರನೇಕರನ್ನು ಭೋಜನಮಾಡಿಸಲು ಅವರು ಕೂಡಲೆ ತಮ್ಮತಮ್ಮ ಮನೆಗಳನ್ನು ಸೇರಿದರು. ಒಬ್ಬ ಬೇಡಿತಿಯು ತನ್ನ ಐವರು ಪುತ್ರರೊಡನೆ ಬಂದು ಊಟಮಾಡಿ ಮದ್ಯಪಾನದಿಂದ ಜ್ಞಾನವಿಲ್ಲದೆ ಎಲ್ಲರೂ ಅಲ್ಲಿಯೇ ಮಲಗಿದ್ದರು. ಭೀಮನು ಇವರಿದ್ದುದನ್ನು ತಿಳಿ

ಯಿದೇ ಪುರೋಚನನನೊಬ್ಬನೇ ಅಲ್ಲಿರುವುದನ್ನು ತಿಳಿದು ಆ ಮನೆಗೆ ಸುತ್ತುಮು ತ್ತಲೂ ಬೆಂಕಿಯನ್ನು ಹತ್ತಿಸಿ ತನ್ನತಾಯಿ ಅಣ್ಣತಮ್ಮಂದಿರೊಡನೆ ಸುರಂಗ ಮಾರ್ಗದಿಂದ ಜಾಗ್ರತೆಯಾಗಿ ಅರಣ್ಯವನ್ನು ಸೇರಿದನು.

ಅಲ್ಲಿ ವಿದುರನಿಂದ ಕಳುಹಲ್ಪಟ್ಟ ಒಬ್ಬ ಮನುಷ್ಯನು ಅವರನ್ನು ಗಂಗಾನ ದಿಯನ್ನು ದಾಟಿಸಲು ಅವರು ದಕ್ಷಿಣದಿಕ್ಕಿನಲ್ಲಿ ಕಾಡಿನಲ್ಲಿ ಪ್ರಯಾಣಮಾಡಿದರು. ಇತ್ತ ವಾರಣಾವತದಲ್ಲಿ ಅರಗಿನ ಮನೆಯು ಸುಟ್ಟು ಉರಿಯುತ್ತಿದ್ದದನ್ನು ಪುರಜ ನರು ಕಂಡು ಓಡಿಬಂದು ಪುರೋಚನನೂ ಒಬ್ಬ ಸ್ತ್ರೀಯೂ ಇನ್ನೈವರು ಮನು ಷ್ಯರೂ ಸುಟ್ಟುಬಿದ್ದಿರಲು ಆ ಐದುಮಂದಿಯೂ ಆ ಸ್ತ್ರೀಯೂ ಪಾಂಡವರು ಕುಂತಿಯಾಗಿರಬೇಕೆಂದು ಅತ್ಯಂತ ವ್ಯಸನಪಟ್ಟು ಆ ಶರೀರಗಳನ್ನು ತೆಗೆಯಿಸಿ ಕೊಂಡು ಧೃತರಾಷ್ಟ್ರನ ಬಳಿಗೆ ಹೋಗಿ ಆ ವೃತ್ತಾಂತವನ್ನು ಬಿನ್ನವಿಸಲು ಅತ ನೂ ಪಟ್ಟಣಿಗರೂ ಆ ಕಳೇಬರಗಳನ್ನು ನೋಡಿ ಬಹಳವಾಗಿ ಪ್ರಲಾಪಿಸಿದರು. ವಿದುರನು ನಿಶ್ಚಯವನ್ನು ತಿಳಿದವನಾಗಿದ್ದುದರಿಂದ ಬಹಳವಾಗಿ ದುಃಖಿಸದೇ ಇದ್ದನು.

ಪಾಂಡವರು ಈಗ ವೇಷವನ್ನುಧರಿಸಿ ಈರೀತಿಯಲ್ಲಿ ಘೋರವಾದ ಅಡವಿ ಗಳಲ್ಲಿ ತಿರುಗುತ್ತಾ ಮೊದಲು ಯಾವಾಗಲೂ ಗಾಳಿಮಳೆಗಳನ್ನೇ ಅರಿಯದಿದ್ದ ತಮ್ಮತಾಯಿಯು ವ್ಯಥೆಪಡುತ್ತಾ ನೆಲದಮೇಲೆ ಕೂಡ್ರುತ್ತಾ ಮಲಗುತ್ತಾ ತಲ್ಲ ಣಗೊಂಡಿರುವುದನ್ನು ನೋಡಿ ಬಹಳವಾಗಿ ವ್ಯಸನಹೊಂದಿದರು. ಅವರು ನಡೆಯ ಯಲಾರದಿರುವಾಗ ಭೀಮನು ಅವರೆಲ್ಲರನ್ನೂ ತನ್ನ ಭುಜದಮೇಲೆ ಹೊತ್ತು ಕೊಂಡು ತಿರುಗುತ್ತಾ ಅವರುಗಳು ನಿದ್ದೆಮಾಡುವ ಸಮಯಗಳಲ್ಲಿ ತಾನು ಎಚ್ಚ ರಿಕೆಯಾಗಿದ್ದುಕೊಂಡು ಅವರಿಗೆ ಏನೊಂದು ಬಾಧೆಯೂ ಸಂಭವಿಸದಿರುವಂತೆ ನೋಡಿಕೊಳ್ಳುತ್ತಿದ್ದನು. ಹೀಗಿರಲು ಒಂದುರಾತ್ರಿ ಹಿಡಿಂಬನೆಂಬ ರಾಕ್ಷಸನು ಮನುಷ್ಯರವಾಸನೆಯನ್ನು ತಿಳಿದು ಹಿಡಿಂಬಿಯೆಂಬ ತನ್ನ ತಂಗಿಯನ್ನು ಕರೆದು ಆ ಮನುಷ್ಯರನ್ನುಕೊಂದು ಅವರ ಮಾಂಸವನ್ನು ತಂದು ನನಗೆ ಅಡಿಗೆಮಾಡಿಡು ಎಂದು ಹೇಳಿ ಕಳುಹಿಸಲು ಅವಳು ಅದರಂತೆ ಅವರಿದ್ದ ಸ್ಥಳಕ್ಕೆ ಬಂದು ನಿದ್ರಿಸುತ್ತಿ ರುವ ತಾಯಿಯನ್ನೂ ಸಹೋದರರನ್ನೂ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಾ ಕುಳಿತಿದ್ದ ಭೀಮನ ರೂಪಲಾವಣ್ಯವನ್ನು ನೋಡಿ ಮೋಹಿತಳಾಗಿ ತನ್ನನ್ನು ವರಿಸ ಬೇಕೆಂದು ಭೀಮನನ್ನು ಪ್ರಾರ್ಥಿಸಿದಳು. ಹಿಡಿಂಬನು ತನ್ನ ತಂಗಿಯು ಜಾಗ್ರತೆ

ಯಾಗಿ ಬಾರದಿದ್ದುದರಿಂದ ಸಿಟ್ಟುಗೊಂಡು ಕೆಂಪಾದ ಕಣ್ಣುಗಳುಳ್ಳವನಾಗಿ ಅಲ್ಲಿಗೆ ಬಂದು ಇಗೊ! ಈಗಲೇ ಇವರೊಡನೆ ನಿನ್ನನ್ನೂ ಕೊಂದುಬಿಡುವೆನೆಂದು ಗರ್ಜಿಸಲು, ಭೀಮನು ನಿಲ್ಲು, ನಿಲ್ಲು, ಇವರೆಲ್ಲಾ ಸುಖನಿದ್ರೆಯಿಂದಿರುವರು. ಗಟ್ಟಿಯಾಗಿ ಕೂಗಿ ಇವರ ನಿದ್ದೆಯನ್ನು ಕೆಡಿಸಬೇಡವೆಂದು ಹೇಳಿ ಯುದ್ಧಸನ್ನದ್ಧನಾಗಲು ಹಿಡಿಂಬನು ಅವನಮೇಲೆ ಬಿದ್ದನು. ಭೀಮನು ಅವರಿಗೆ ನಿದ್ರಾಭಂಗವುಂಟಾಗದಿರುವಂತೆ ದೂರವಾಗಿ ಅವನನ್ನು ಎಳೆದುಕೊಂಡುಹೋಗಿ ಅವನೊಡನೆ ದ್ವಂದ್ವ ಯುದ್ಧಮಾಡತೊಡಗಿದನು. ಆಗ ಅವರು ಅತ್ಯಂತ ಕೋಪಾವಿಷ್ಟರಾಗಿ ದೊಡ್ಡದೊಡ್ಡ ಮರಗಳನ್ನೂ ಬಂಡೆಗಳನ್ನೂ ಕಿತ್ತುಕೊಂಡು ಒಬ್ಬರಮೇಲೊಬ್ಬರು ಹಾಕುತ್ತಾ ಭೂಮಿಯಮೇಲೆ ಬೀಳುತ್ತಾ ಏಳುತ್ತಾ ಗರ್ಜಿಸುತ್ತಾ ಘೋರವಾಗಿ ಯುದ್ಧಮಾಡುತ್ತಿರಲು ಪಾಂಡವರು ಎಚ್ಚರಗೊಂಡರು. ಆಗ ಅರ್ಜುನನು ಅವರ ಬಳಿಗೆ ಹೋಗಿ ಭೀಮನನ್ನು ನೋಡಿ ಅಣ್ಣಾ! ಏಕೆ ಸಾವಕಾಶಮಾಡುವಿ? ಈ ದುರಾತ್ಮನನ್ನು ಜಾಗ್ರತೆಯಾಗಿ ನಾಶಮಾಡೆಂದು ಹೇಳಲು, ಭೀಮನು ಹೆಚ್ಚಾದ ಬಲದಿಂದ ಆ ರಾಕ್ಷಸನನ್ನೆತ್ತಿ ಗರಗರನೆ ತಿರುಗಿಸಿ ನೆಲದಮೇಲೆ ಅಪ್ಪಳಿಸಲು ಆ ರಾಕ್ಷಸನ ಬೆನ್ನಿನ ಎಲಬು ಮುರಿದು ಎರಡುತುಂಡಾಗಲು ಸತ್ತುಬಿದ್ದನು. ಈ ರೀತಿಯಲ್ಲಿ ಅನೇಕಯುದ್ಧಗಳನ್ನುಮಾಡಿ ಸತ್ಪುರುಷರನ್ನು ಬಾಧಿಸುತ್ತಿದ್ದ ರಾಕ್ಷಸರನೇಕರನ್ನು ಭೂಮಿಯಮೇಲಿರದಂತೆ ನಾಶಮಾಡುವುದಕ್ಕಾಗಿಯೇ ಭೀಮನು ಅವತಾರಮಾಡಿದ್ದನು. ಲೋಕದಲ್ಲಿ ಬಡವರೂ ಅಶಕ್ತರೂ ಆದ ಸತ್ಪುರುಷರನ್ನು ಬಲಿಷ್ಠರಾದ ದುಷ್ಟರು ತೊಂದರೆಪಡಿಸುವುದಾದರೆ ಅಂತಹಸಮಯದಲ್ಲಿ ಭೀಮನಂತಹ ಬಲಶಾಲಿಯೊಬ್ಬನನ್ನು ದೇವತೆಗಳು ಉತ್ಪನ್ನಮಾಡಿ ಅಂತಹವರನ್ನು ನಾಶಪಡಿಸಿ ಲೋಕಕ್ಕೆ ಶಾಂತಿಯುಂಟಾಗುವಂತೆ ಮಾಡುವರು. ಲೋಕಕಂಟಕರಾದವರನ್ನು ಕೊಲ್ಲುವುದಕ್ಕಾಗಿಯೇ ಭೀಮನಿಗೆ ಇಂತಹ ಬಾಹುಬಲವನ್ನುಂಟುಮಾಡಿದ್ದುದರಿಂದ ಹಾಗೆ ಮಾಡುವುದೇ ಅವನ ಧರ್ಮವು.

ಹಿಡಿಂಬಿಯು ತನ್ನಣ್ಣನು ಮೃತನಾಗಲು ಸುಂದರವಾದ ಮನುಷ್ಯಾಕೃತಿಯನ್ನು ಹೊಂದಿದವಳಾಗಿ ಭೀಮನಿಗೆ ಭಾರ್ಯೆಯಾಗಿ ಅವನ ಉಪಚಾರದಲ್ಲಿರಲು ಅವರಿಗೆ ಘಟೋತ್ಕಚನೆಂಬ ರಾಕ್ಷಸನು ಹುಟ್ಟಿದನು. ಇವನು ಮುಂದೆ ಪಾಂಡವರ ಕೆಲಸಕ್ಕೆ ಸಹಕಾರಿಯಾದನು. ಹೀಗೆ ಪಾಂಡವರು ಅರಣ್ಯದಲ್ಲಿ ವಾಸಿಸುತ್ತಾ

ಕಾಲಕಳೆಯುತ್ತಿರಲು ವ್ಯಾಸಮಹರ್ಷಿಯು ಅವರಬಳಿಗೆ ಬಂದು ಅವರುಗಳನ್ನು ಒಬ್ಬ ಬ್ರಾಹ್ಮಣನ ಮನೆಗೆ ಕರೆದುಕೊಂಡುಹೋಗಿ ಅವರನ್ನು ಅಲ್ಲಿಬಿಟ್ಟು ಪುನಃ ನಾನು ಬರುವವರೆಗೂ ನೀವುಗಳು ಇಲ್ಲಿಯೇ ಇರಬೇಕೆಂದು ಆಜ್ಞೆಮಾಡಿ ಹೊರಟುಹೋದನು. ಅವರುಗಳು ಅದರಂತೆಯೇ ಬ್ರಾಹ್ಮಣವಟುಗಳ ವೇಷವನ್ನು ಧರಿಸಿ ಭಿಕ್ಷಾಚರಣೆಯಿಂದ ಜೀವನಮಾಡುತ್ತಾ ವಾಸಿಸುತ್ತಿದ್ದರು. ಭಿಕ್ಷವನ್ನು ತಂದು ಅವರು ಕುಂತಿಯ ಮುಂದಿಡಲು ಕುಂತಿಯು ಆ ಅನ್ನವನ್ನು ಎರಡುಭಾಗ ಮಾಡಿ ಒಂದು ಭಾಗವನ್ನು ಭೀಮನಿಗೆ ಕೊಟ್ಟು ಉಳಿದುದನ್ನು ಉಳಿದ ಎಲ್ಲರಿಗೂ ಕೊಟ್ಟು ತಾನೂ ತಿನ್ನುತ್ತಿದ್ದಳು. ಒಂದುದಿನ ಭೀಮನವಿನಾ ಉಳಿದವರು ಭಿಕ್ಷಾಟನೆಗೆ ಹೋಗಿರಲು ಆ ಮನೆಯಾತನು ತನ್ನ ಪತ್ನೀಪುತ್ರರೊಡನೆ ಕೂಡಿ "ನಾನಾಗಲೀ ನನ್ನ ಮುದ್ದುಮಗುವಾಗಲೀ ಈ ದಿನ ಸಾಯಬೇಕಾಯಿತಲ್ಲಾ. ವಿಧಿಯೇ!" ಎಂದು ದುಃಖದಿಂದ ಪ್ರಲಾಪಿಸುತ್ತಿರಲು ಕುಂತಿಯು ಅದನ್ನು ಕೇಳಿ ಏತಕ್ಕೆ ಹೀಗೆ ಶೋಕಿಸುತ್ತಿರುವರೆಂದು ಕೇಳಿದಳು. ಅಷ್ಟರಲ್ಲಿ ಆ ಬ್ರಾಹ್ಮಣನ ಹೆಂಡತಿಯು ಪತಿಯನ್ನು ಕುರಿತು ನಾನು ಸಾಯಲು ಸಿದ್ಧಳಾಗಿದೇನೆ. ಅದಕ್ಕೆ ಒಪ್ಪಿ ನನ್ನನ್ನು ಕಳುಹಿಸಿ ನೀವು ಕುಟುಂಬವನ್ನು ರಕ್ಷಿಸಿಕೊಳ್ಳಿರೆಂದು ಹೇಳಿದಳು. ಆಗ ಆ ಬ್ರಾಹ್ಮಣನ ಮಗಳಿಂತೆಂದಳು. 'ನೀವುಗಳು ಮೃತರಾಗುವುದು ಯೋಗ್ಯವಲ್ಲ. ನನ್ನನ್ನು ನೀವು ಪಾಣಿಗ್ರಹಣಕಾಲದಲ್ಲಾದರೂ ಪರರಿಗೆ ಕೊಡಬೇಕಾಗಿದೆಯಲ್ಲವೇ? ಮರಣದೇವತೆಗೆ ಈಗಲೇ ಕೊಟ್ಟುಬಿಡಿ' ಎಂದು ಹೇಳಲು, ಬಾಲಕನಾದ ಮಗನು ಒಂದುಹುಲ್ಲುಕಡ್ಡಿಯನ್ನು ತೆಗೆದುಕೊಂಡು ಇದರಿಂದ ಆ ರಾಕ್ಷಸನನ್ನು ಕೊಂದುಬಿಡುವೆನೆಂದು ಹೇಳಲು ಅವರು ಮಗನ ಆ ಮುದ್ದುಮಾತುಗಳಿಗೆ ಸಂತೋಷಪಟ್ಟರು. ಆಗ ಕುಂತಿಯು ಇದೇನೆಂದು ಆ ಬ್ರಾಹ್ಮಣನನ್ನು ಕೇಳಿದಳು. ಬ್ರಾಹ್ಮಣನು ತಾಯೇ! ಏನೆಂದು ಹೇಳಲಿ! ಒಬ್ಬಾನೊಬ್ಬ ಕ್ರೂರರಾಕ್ಷಸನು ಈ ಪುರಿನವರನ್ನೆಲ್ಲಾ ಕೊಲ್ಲುತ್ತಾ ಹಿಂಸಿಸುತ್ತಿರಲು ಪ್ರತಿದಿನವೂ ಮನೆವರಸೆ ಪ್ರಕಾರ ಒಂದೊಂದು ಮನೆಯವರು ಒಂದು ಬಂಡಿಗೆ ಎರಡು ಕೋಣಗಳನ್ನು ಕಟ್ಟಿ ಅದರ ತುಂಬಾ ಅನ್ನವನ್ನಿಟ್ಟುಕೊಂಡು ಅವನ ಬಳಿಗೆ ಹೊಡೆದುಕೊಂಡುಹೋಗಲು ಆ ಪಾಪಾತ್ಮನು ಆ ಅನ್ನವನ್ನೂ ಕೋಣಗಳನ್ನೂ ಮನುಷ್ಯನನ್ನೂ ಸಹ ತಿಂದುಬಿಟ್ಟು ಇತರರ ಗೋಜಿಗೆ ಹೋಗ

ದಿರುವಂತೆ ಒಪ್ಪಂದವಾಗಿರುವುದು. ಈ ದಿನ ನಮ್ಮ ಮನೆಗೆ ಅಂತಹಸರದಿ ಬಂದಿರುವುದರಿಂದ ನಮ್ಮ ಮನೆಯುವಲ್ಲಿ ಯಾರು ಆ ರಕ್ಕಸನಿಗೆ ಆಹಾರವಾಗಬೇಕೆಂದು ವ್ಯಥೆಯುಂಟಾಗಿದೆಯೆಂದು ಹೇಳಿದನು. ಕುಂತಿಯು ಅಯ್ಯಾ ಬ್ರಾಹ್ಮಣ! ನನಗೆ ಐವರು ಪುತ್ರರಿರುವರು. ಅವರಲ್ಲೊಬ್ಬನನ್ನು ಆ ಅಸುರನಲ್ಲಿಗೆ ಕಳುಹಿಸುವೆನು. ಎಂದು ಹೇಳಲು, ಬ್ರಾಹ್ಮಣನು ಅಮ್ಮಾ! ನನ್ನ ಮನೆಗೆ ಬಂದ ಅತಿಥಿಗಳನ್ನು ಆ ಅಸುರನಿಗೆ ಆಹಾರವಾಗಿಕೊಟ್ಟು ಆ ಪಾಪವನ್ನು ನಾನು ಹೊಂದಲೇ ? ಇದಕ್ಕೆ ನಾನು ಸಮ್ಮತಿಸಲಾರೆನೆಂದು ಹೇಳಿದನು. ಕುಂತಿಯು ಹೀಗೆಂದಳು "ಬ್ರಾಹ್ಮಣರನ್ನು ಎಲ್ಲ ವಿಧಗಳಲ್ಲಿಯೂ ಕಾಪಾಡುವುದೇ ಪರಮಧರ್ಮವು. ನನ್ನ ಮಗನು ಹೆಚ್ಚು ಬಲಶಾಲಿಯು; ಅವನು ಅಪಾಯಕ್ಕೆ ಒಳಗಾಗನು. ಆ ರಾಕ್ಷಸನನ್ನು ಒಂದೇ ನಿಮಿಷದಲ್ಲಿ ನಾಶಮಾಡುವನು." ಎಂದು ಸಮಾಧಾನಪಡಿಸಿ ಆ ಸಂಗತಿಯನ್ನು ಭೀಮನಿಗೆ ತಿಳಿಸಲು ಅವನು ಅತ್ಯುತ್ಸಾಹದೊಡನೆ ಬಕನೆಂಬ ರಾಕ್ಷಸನ ಬಳಿಗೆ ಹೋಗಲು ಸಿದ್ಧನಾದನು. ಇಷ್ಟರಲ್ಲೇ ಯುಧಿಷ್ಠಿರನು ಬಂದು ಆ ವೃತ್ತಾಂತವನ್ನು ಕೇಳಿ ಮನಸ್ಸಿನಲ್ಲಿ ಖೇದಹೊಂದಿ ತಾಯಿಯನ್ನು ಕುರಿತು ತಮ್ಮನನ್ನು ಆ ಖೂಳ ದನುಜನ ಬಳಿಗೆ ಕಳುಹಿಸಲು ನೀನೇಕೆ ಸಮ್ಮತಿಸಿದೆ ಎನ್ನಲು ಕುಂತಿಯು ಇಂತೆಂದಳು. ನಮ್ಮನ್ನು ಆದರಣೆಮಾಡಿ ಉಪಕಾರಮಾಡುವ ಈ ಊರಿನವರನ್ನು ಕಾಪಾಡುವಿಕೆಯು ಪುಣ್ಯಕಾರ್ಯವು. ಆದುದರಿಂದ ಅವಶ್ಯಕವಾಗಿ ಭೀಮನು ಈ ಕೆಲಸವನ್ನು ನೆರವೇರಿಸಬೇಕಾಗಿದೆ. ಇದು ಕ್ಷತ್ರಿಯಧರ್ಮವಲ್ಲವೇ? ಎಂದು ಹೇಳಿ ಧರ್ಮರಾಯನನ್ನೊಡಂಬಡಿಸಿದಳು. ಕೂಡಲೇ ಅನ್ನವನ್ನು ಭರ್ತಿಮಾಡಿ ಕೋಣಗಳನ್ನು ಕಟ್ಟಿ ಬಂಡಿಯನ್ನು ಆ ಮನೆಯವರು ಸಿದ್ಧಮಾಡಿಕೊಡಲು ಭೀಮನು ಅದನ್ನು ಹೊಡೆದುಕೊಂಡು ಅರಣ್ಯಕ್ಕೆ ಹೊರಟು ಹಸಿವಾಗಲು ಒಂದು ಕಡೆ ನಿಂತು ಆ ಅನ್ನವನ್ನು ತಿನ್ನಲುಪಕ್ರಮಿಸಿದನು. ಅದನ್ನು ಕಂಡು ಆ ಬಕನು ಬಂದು ರೋಷದಿಂದ ಅವನ ಬೆನ್ನಿನ ಮೇಲೆ ಸಿಡಿಲಿನ ತೆರದಲ್ಲಿ ಒಂದು ಗುದ್ದನ್ನು ಹಾಕಿದನು. ಆದರಿಂದ ಅವನು ಅತ್ತಿತ್ತ ಕದಲದೇ ಕಿರುನಗೆಯಿಂದ ಕೂಡಿ ಅನ್ನವನ್ನು ತಿನ್ನುತ್ತಿರಲು ಆ ರಾಕ್ಷಸನು ಒಂದು ದೊಡ್ಡಮರವನ್ನು ಮುರಿದುಕೊಂಡು ಭೀಮನನ್ನು ಹೊಡೆಯಲಿಕ್ಕ ಬಂದನು. ವಾಯುಪುತ್ರನು ಅದನ್ನು ಎಡಗೈಯಿಂದ ಹಿಡಿದು ನಿಲ್ಲಿಸಿ ಪುನಃ ಊಟಮಾಡುತ್ತಲೇ ಇದ್ದನು. ಹೀಗೆ ವೃಕೋದರನು ಆ

ಅನ್ನವೆಲ್ಲವನ್ನೂ ತಿಂದು ಕೈಕಾಲುಗಳನ್ನು ತೊಳೆದುಕೊಂಡು ಆ ಮೇಲೆ ಅವನೊಡನೆ ಯುದ್ಧಕ್ಕೆ ನಿಲ್ಲಲು ಅವರಿಬ್ಬರಿಗೂ ಘೋರವಾದ ಯುದ್ಧವು ನಡೆಯಿತು. ಆಗ ಭೀಮನು ಅವನ ಬೆನ್ನನ್ನೂ ಮೊಳಕಾಲುಗಳನ್ನೂ ಮುರಿದು ಅವನ ಬಂಧುಗಳನ್ನು ನೋಡಿ ನೀವುಗಳು ಇನ್ನು ಮೇಲಾದರೂ ಮನುಷ್ಯಮಾಂಸವನ್ನು ತಿನ್ನದಿರಿ ಎಂದು ಹೇಳಿ ಊರಿಗೆ ಬರಲು ಊರಜನಗಳು ತಮ್ಮ ಶತ್ರುವು ನಾಶವಾದುದಕ್ಕಾಗಿ ತುಂಬಾ ಸಂತೋಷವುಳ್ಳವರಾದರು.

ಅನಂತರದಲ್ಲಿ ಒಂದು ದಿನ ಒಬ್ಬಬ್ರಾಹ್ಮಣನು ಪಾಂಡವರಿದ್ದ ಬ್ರಾಹ್ಮಣನ ಮನೆಗೆ ಅತಿಥಿಯಾಗಿ ಬಂದು ಭೋಜನವಾದ ತರುವಾಯ ಅವರಿಗೆ ದ್ರೋಣ ದ್ರುಪದರ ವೃತ್ತಾಂತವನ್ನು ತಿಳಿಸಿ ಇಂತೆಂದನು. ದ್ರೋಣನಿಂದ ಪರಾಜಿತನಾಗಿ ಅತನಿಂದ ಅರ್ಧರಾಜ್ಯವನ್ನು ಹೊಂದಿದ ದ್ರುಪದನು ನಾಚಿಕೆಯನ್ನೂ ಕ್ರೋಧವನ್ನೂ ಹೊಂದಿದವನಾಗಿ ದ್ರೋಣನನ್ನು ಜಯಿಸತಕ್ಕ ಮಗನನ್ನು ಪಡೆಯಲೆಣಿಸಿ ದೊಡ್ಡಯಾಗವನ್ನು ಮಾಡಿ ಅಂತಹ ಮಗನನ್ನು ಪಡೆದನು. ಆ ಯಜ್ಞಕಾಲದಲ್ಲಿ ಪುರೋಹಿತನು ದ್ರುಪದರಾಯನ ರಾಣಿಯನ್ನು ಕರೆದು ಈ ಹವಿಸ್ಸನ್ನು ನೀನು ತಿಂದಲ್ಲಿ ನಿನಗೆ ಒಬ್ಬ ಪುತ್ರನೂ ಪುತ್ರಿಯೂ ಸಹ ಹುಟ್ಟುವರು, ಜಾಗ್ರತೆಯಾಗಿ ತೆಗೆದುಕೊಳ್ಳೆನಲು ಆಕೆಯು ಇದೋ ಬಂದೆನೆಂದು ಒಳಗೆ ಹೋಗಿ ಸ್ವಲ್ಪ ಮಾತನಾಡಿದಳು. ಅತನು ಆ ಹವಿಸ್ಸನ್ನು ಯಜ್ಞೇಶ್ವರನಲ್ಲಿ ಹಾಕಲು ಅದರಿಂದ ಕಿರೀಟ ಕವಚಗಳನ್ನೂ ಧನುರ್ಬಾಣಗಳನ್ನೂ ಧರಿಸಿದ ತೇಜೋವಂತನಾದ ಕುಮಾರನಾವಿರ್ಭವಿಸಲು ಈತನು ದ್ರೋಣನನ್ನು ಕೊಲ್ಲುವುದಕ್ಕಾಗಿ ಹುಟ್ಟಿದವನೆಂದು ಅಕಾಶವಾಣಿಯು ನುಡಿಯಿತು. ಅದನ್ನು ಕೇಳಿ ಜನರು ಆಶ್ಚರ್ಯಪಡುತ್ತಿರಲು ಆ ಅಗ್ನಿಕುಂಡದಿಂದ ನೀಲವಾದ ದೇಹಕಾಂತಿಯುಳ್ಳ ನೀಲವರ್ಣವಾದ ಕುಟಿಲವಾದ ಮುಂಗೂದಲುಗಳುಳ್ಳ ಅತಿಶಯವಾದ ಸೊಬಗಿನಿಂದ ಕೂಡಿರುವ ಕನ್ಯಾಲಾಮವೊಂದು ಹುಟ್ಟಿತು. ‟ ಶಾಮಲವರ್ಣವುಳ್ಳ ಈ ಕನ್ಯಾರತ್ನವು ಎಲ್ಲಾ ಸ್ತ್ರೀಯರಲ್ಲಿಯೂ ಶ್ರೇಷ್ಠಮತಳೆನಿಸಿಕೊಳ್ಳುವಳು. ಈಕೆಯ ನಿಮಿತ್ತದಿಂದ ಅನೇಕಮಂದಿ ರಾಜರು ಹತರಾಗುವರು.'' ಎಂದು ಪುನಃ ಅಶರೀರವಾಣಿಯು ಕೇಳಿಸಿತು. ಆ ಕುಮಾರನೇ ಕುರುಕ್ಷೇತ್ರದಲ್ಲಿ ಪಾಂಡವರಿಗೆ ಸೇನಾಪತಿಯಾದ ಧೃಷ್ಟದ್ಯುಮ್ನನು. ಆ ಕನ್ಯೆಯೇ ಪಾಂಡವರ ಧರ್ಮಪತ್ನಿಯಾದ ಕೃಷ್ಣೆ

ಯೆಂಬ ಸುಂದರಿಯು. ದ್ರೋಣನು ಆ ಸಮಾಚಾರವನ್ನು ಕೇಳಿ ಮುಂದೆ ನಡೆಯತಕ್ಕದ್ದನ್ನು ತಿಳಿದಿದ್ದರೂ ತಾನು ದ್ರುಪದನ ಅರ್ಧರಾಜ್ಯವನ್ನು ತೆಗೆದುಕೊಂಡುದಕ್ಕೆ ಬದಲಾಗಿ ಆ ರಾಜಕುಮಾರನಿಗೆ ಅಸ್ತ್ರವಿದ್ಯೆಯನ್ನು ಕಲಿಸಿದನು.

ಆ ಕೂಡಲೆ ಪಾಂಡವರ ಒಳಿಗೆ ವ್ಯಾಸಋಷಿಯು ಬಂದು ಪಾಂಚಾಲದೇಶಾಧಿಪತಿಯಾದ ದ್ರುಪದನ ಪಟ್ಟಣಕ್ಕೆ ಹೋಗಿರೆಂದು ಆಜ್ಞಾಪಿಸಿ ಮತ್ತಿಂತೆಂದನು. ದ್ರುಪದನ ಕುವರಿಯಾದ ಕೃಷ್ಣೆಯು ಪೂರ್ವಜನ್ಮದಲ್ಲಿ ಈಶ್ವರನನ್ನು ಕುರಿತು ಐದಾವೃತ್ತಿ ತನಗೆ ಪತಿಯನ್ನು ಕೊಡಬೇಕೆಂದು ಬೇಡಿಕೊಂಡಳು. ಆ ದೇವನು ಆಕೆಗೆ ಮುಂದಿನ ಜನ್ಮದಲ್ಲಿ ಐವರು ಪತಿಗಳಾಗುವರೆಂದು ಅನುಗ್ರಹಿಸಿದನು. ಆ ಸುಂದರಿಯು ನಿಮಗೆ ಧರ್ಮಪತ್ನಿಯಾಗುವುದಕ್ಕಾಗಿ ಹುಟ್ಟಿರುವಳು. ನೀವು ಅಲ್ಲಿಗೆ ಹೋಗಿರೆಂದು ಹೇಳಿ ಅಂತರ್ಧಾನನಾದನು. ಪಾಂಡವರು ಅಲ್ಲಿಗೆ ಹೊರಟು ಮಾರ್ಗದಲ್ಲಿ ಒಬ್ಬ ಗಂಧರ್ವನ ಉಪದೇಶದಿಂದ ಧೌಮ್ಯನೆಂಬ ಬ್ರಾಹ್ಮಣಶ್ರೇಷ್ಠನನ್ನು ತಮ್ಮ ಪುರೋಹಿತನನ್ನಾಗಿ ಮಾಡಿಕೊಂಡು ಆತನೊಡನೆ ದ್ರೌಪದೀಸ್ವಯಂವರಸ್ಥಳಕ್ಕೆ ಹೋಗುತ್ತಿದ್ದ ಇನ್ನೂ ಕೆಲವು ಬ್ರಾಹ್ಮಣರೊಡನೆ ಕೂಡಿ ತಾವೂ ಬ್ರಾಹ್ಮಣವೇಷವನ್ನು ಧರಿಸಿ ಭಿಕ್ಷದಿಂದ ಶರೀರ ಪೋಷಣೆಮಾಡಿಕೊಳ್ಳುತ್ತಾ ಪಾಂಚಾಲದೇಶವನ್ನು ಸೇರಿದರು.

ಯಜ್ಞಸೇನನೆಂಬ ಹೆಸರುಳ್ಳ ದ್ರುಪದನು ತನ್ನ ಮಗಳಿಗೆ ಅರ್ಜುನನೇ ಪತಿಯಾಗಬೇಕೆಂದು ಅನೇಕ ಕಾಲದಿಂದ ಮನಸ್ಸಿನಲ್ಲಿ ಅಪೇಕ್ಷಿಸುತ್ತಿದ್ದು ಅವನಿಗೆ ಧನುರ್ವಿದ್ಯೆಯಲ್ಲಿದ್ದ ನೈಪುಣ್ಯವನ್ನು ತಿಳಿದಿದ್ದುದರಿಂದ ಇತರರಿಗೆ ಸಾಧ್ಯವಾಗದಂತಹ ಒಂದು ಕಾರ್ಮುಕವನ್ನುಮಾಡಿಸಿ ಅಂತರಿಕ್ಷದಲ್ಲಿ ಎತ್ತರವಾಗಿ ಒಂದು ಮತ್ಸ್ಯಯಂತ್ರವನ್ನೇರ್ಪಡಿಸಿ ಆ ಬಿಲ್ಲನ್ನೇರಿಸಿ ಕೆಳಗೆ ನೀರಿನಲ್ಲಿ ಅದರ ಪ್ರತಿಬಿಂಬವನ್ನು ನೋಡುತ್ತಾ ಲಕ್ಷ್ಯವನ್ನು ಹೊಡೆದ ಶೂರನಿಗೆ ತನ್ನ ಪುತ್ರಿಯನ್ನು ಕೊಟ್ಟು ವಿವಾಹಮಾಡುವುದಾಗಿ ಎಲ್ಲಾ ದೇಶಗಳಲ್ಲಿಯೂ ಸಾರಿಸಿದನು. ಆದುದರಿಂದ ಆ ಸಮಯದಲ್ಲಿ ಅಲ್ಲಿಗೆ ಅನೇಕ ರಾಜಕುಮಾರರು ತಮ್ಮ ನೈಪುಣ್ಯ (ವಿದ್ಯಾಕೌಶಲ್ಯ) ವನ್ನು ತೋರಿಸುದಕ್ಕಾಗಿ ಬಂದು ಸೇರಿದರು. ಆಗ ತಮ್ಮ ಅಣ್ಣನಾದ ಬಲರಾಮನೊಡನೆ ಶ್ರೀಕೃಷ್ಣನು ಅಲ್ಲಿನ ವಿವಾಹ ವಿನೋದಗಳನ್ನು ನೋಡುವ ಉದ್ದಿಶ್ಯ ಬಂದು ಪೂರ್ವಸ್ನೇಹಿತನಾದ ನರನನ್ನು ಈ ಜನ್ಮದಲ್ಲಿ ಮೊದಲುಸಾರಿ ನೋಡಿದುದರಿಂದಲೂ ಪಾಂಡವರನ್ನೆಲ್ಲಾ ನೋಡಿದುದರಿಂದಲೂ ಬಹುವಾಗಿ ಆನಂದಿಸಿದರು.

ಅನಂತರದಲ್ಲಿ ಆರಾಜರುಗಳು ಒಬ್ಬೊಬ್ಬರಾಗಿ ಬಂದು ಆ ಬಿಲ್ಲಿಗೆ ಹೆದೆಯನ್ನೇರಿಸಲಾರದವರಾಗಿ ತಲೆಯನ್ನು ಬಾಗಿಸಿಕೊಂಡು ಹೊರಟು ಹೋಗುತ್ತಿರಲು ಕೃಷ್ಣೆಯು ತನಗೆ ಯಾರು ಪತಿಯಾಗುವರೋ ಎಂದು ವಿಕಸಿತನಯನಕಮಲೆಯಾಗಿ ನೋಡುತ್ತಿದ್ದಳು. ಆ ರಾಜಕುಮಾರರಲ್ಲಿ ಒಬ್ಬನಾದರೂ ಆ ಬಿಲ್ಲನ್ನೆತ್ತಲಾರದಿರಲು ಕರ್ಣನು ನೋಡಿ ಥಟ್ಟನೆದ್ದು ಆ ಬಿಲ್ಲನ್ನು ಕೈಯಲ್ಲಿ ತೆಗೆದುಕೊಂಡು ಸುಲಭವಾಗಿ ಬಗ್ಗಿಸಿ ಹೆದೆಯೇರಿಸಿ ಬಾಣಗಳನ್ನು ತೊಡುತ್ತಿರಲು ಅದನ್ನು ನೋಡಿದ ಪಾಂಡವರು ತಮಗೆ ದ್ರೌಪದಿಯ ಮೇಲಣ ಆಶೆಯಿನ್ನೇಕೆಂದು ವ್ಯಸನಪಡುತ್ತಿದ್ದರು. ಅಷ್ಟರಲ್ಲಿ ದ್ರೌಪದಿಯು ನಾನು ಸೂತನನ್ನು ವರಿಸಲೊಲ್ಲೆನೆಂದು ಹೇಳಲು ಕರ್ಣನು ಧನುಸ್ಸನ್ನಿಟ್ಟು ಹೊರಟು ಹೋದನು.

ಆಗ ಬ್ರಾಹ್ಮಣವೇಷಧಾರಿಯಾಗಿದ್ದ ಅರ್ಜುನನು ಯುವಕನಾಗಿದ್ದು ಅವಯವಸೌಷ್ಠವದಿಂದ ಮೆರೆಯುತ್ತಾ ಅಲ್ಲಿಗೆ ಬಂದು ಸುಲಭವಾಗಿ ಬಿಲ್ಲನ್ನೆತ್ತಿ ಅದರಲ್ಲಿ ಐದು ಬಾಣಗಳನ್ನು ಸೇರಿಸಿ ಗುರಿಯಿಟ್ಟು ಹೊಡೆದು ಆ ಲಕ್ಷ್ಯವನ್ನುರುಳಿಸಿದನು. ದೇವತೆಗಳು ಅವನ ಮೇಲೆ ಪುಷ್ಪವೃಷ್ಟಿಯನ್ನು ಕರೆದರು. ಗೀತವಾದ್ಯಗಳು ಮೊಳಗಿದವು. ದ್ರೌಪದಿಯು ದಿವ್ಯವಸ್ತ್ರಾಲಂಕೃತಳಾಗಿ ಬಂಗಾರದ ಬಟ್ಟಲಿನಲ್ಲಿ ಉದಕವನ್ನೂ, ಪುಷ್ಪಮಾಲಿಕೆಯನ್ನೂ ತೆಗೆದುಕೊಂಡು ಉಲ್ಲಾಸದಿಂದ ಅರ್ಜುನನ ಬಳಿಗೆ ಬಂದು ಕಿರುನಗೆಯಿಂದ ಕೂಡಿ ಧವಳವಸ್ತ್ರವನ್ನೂ ಪುಷ್ಪಮಾಲಿಕೆಯನ್ನೂ ಆತನ ಕಂಠದಲ್ಲಿ ಹಾಕಿ ಆತನನ್ನು ಪತಿಯನ್ನಾಗಿ ವರಿಸಿದಳು. ಅನಂತರದಲ್ಲಿ ಅರ್ಜುನನು ಆ ಸ್ಥಳದಿಂದ ಹೊರಡಲು ಪರಾಕ್ರಮದಿಂದ ತನ್ನನ್ನು ಹೊಂದಿದ್ದ ಆತನೊಡನೆ ಪರಮಾನುರಾಗದಿಂದ ಮೆಚ್ಚಿವರಿಸಿದ್ದ ಆಕೆಯೂ ಹೊರಟಳು. ಆ ಸಮಯದಲ್ಲಿ ಇತರ ರಾಜಕುಮಾರರು ಕ್ಷತ್ರಿಯಕುಲದಲ್ಲಿ ಹುಟ್ಟಿದ ಈ ಕನ್ನಿಕೆಯನ್ನು ಬ್ರಾಹ್ಮಣನಿಗೆ ಕೊಡಬಹುದೇ ಎಂದು ಗರ್ಜಿಸಿ ಆ ಸ್ತ್ರೀಯನ್ನು ತಾವು ಹೊಂದಬೇಕೆಂಬ ಆಶೆಯಿಂದ ಅರ್ಜುನನಿಂದ ಬಲಾತ್ಕಾರವಾಗಿ ಆಕೆಯನ್ನು ಅಪಹರಿಸಲು ಪ್ರಯತ್ನ ಪಟ್ಟರು. ಅರ್ಜುನನು ಆ ಮಹಾಧನುಸ್ಸನ್ನೇ ತೆಗೆದುಕೊಂಡನು. ಭೀಮನು ತನ್ನ ಸಮೀಪದಲ್ಲಿದ್ದ ಒಂದು ಮರವನ್ನು ಕಿತ್ತುಕೊಂಡನು. ಹೀಗೆ ಅವರಿಬ್ಬರೂ ತಮಗಿದಿರಾದ ರಾಜರ ಮೇಲೆ ಬಿದ್ದು ಯುದ್ಧಮಾಡಿದರು. ಕರ್ಣ ಶಲ್ಯ ದುರ್ಯೋಧನರು ಬ್ರಾಹ್ಮಣವೇಷದಿಂದಿದ್ದ ಅವರಿಬ್ಬರೂ ತಮ್ಮೊಡನೆಯುದ್ಧಮಾಡುತ್ತಿದ್ದುದನ್ನು ನೋಡಿವಿಸ್ಮಿತಚಿತ್ತರಾದರು.

ಅನಂತರದಲ್ಲಿ ಶ್ರೀಕೃಷ್ಣನು ಆ ರಾಜರುಗಳನ್ನು ನೋಡಿ ಈ ಬ್ರಾಹ್ಮಣನು ತನ್ನ ಪರಾ ಕ್ರಮದಿಂದ ಎಲ್ಲರನ್ನು ಗೆದ್ದು ಧರ್ಮದಿಂದ ಕೃಷ್ಣೆಯನ್ನು ಪರಿಗ್ರಹಿಸಿರುವನಾ ದುದರಿಂದ ನೀವೇಕೆ ಈತನೊಡನೆ ಹೋರಾಡುವಿರಿ ಎಂದು ನಿವಾರಿಸಲು ಅವರು ಸುಮ್ಮನಾದರು. ಅರ್ಜುನನು ಸಹೋದರರೊಡನೆ ಕೂಡಿ ತಾಯಿಯ ಸಮೀಪ ವನ್ನು ಹೊಂದಿ ಸಂತೋಷದಿಂದ ಅಮ್ಮಾ ! ಭಿಕ್ಷವನ್ನು ತಂದಿರುವೆನೆನ್ನಲು ಕುಂ ತಿಯು ಎಂದಿನಂತೆಯೇ ಎಂದು ತಿಳಿದು ನೀವೆಲ್ಲರೂ ಸಮವಾಗಿ ತೆಗೆದುಕೊಳ್ಳಿ ರೆಂದು ಹೇಳಿದಳು. ಕೂಡಲೆ ದ್ರೌಪದಿಯನ್ನು ನೋಡಿ ಇದೇನು ನಾನು ತಪ್ಪಾಗಿ ಹೇಳಿದೆನೆಂದು ತರ್ಕಿಸುತ್ತಿದ್ದಳು. ಯುಧಿಷ್ಠಿರನು ಅದಕ್ಕೆ ಮೊದಲೇ ಬಂದಿದ್ದು ದರಿಂದ ಆತನನ್ನು ಕುರಿತು ಕುಂತಿಯು ನನ್ನಮಾತು ಅಸತ್ಯವಾಗದಿರುವಂತೆಯೂ ದ್ರೌಪದಿಗೆ ಪಾಪ ವುಂಟಾಗದಿರುವಂತೆಯೂ ಈ ವಿಷಯವನ್ನು ತೀರ್ಮಾನಿಸೆಂದು ಕೇಳಿದಳು. ಆತನು ಈ ಕನ್ಯೆಯನ್ನು ಅರ್ಜುನನು ಸಂಪಾದಿಸಿ ತಂದಿರುವನಾದುದ ರಿಂದ ಆತನೇ ಈ ಕನ್ಯೆಯನ್ನು ಪಾಣಿಗ್ರಹಣಮಾಡಬೇಕೆಂದು ಹೇಳಿದನು. ಆ ಮಾತಿಗೆ ಅರ್ಜುನನು ತನ್ನ ಅಣ್ಣಂದಿರಿಬ್ಬರಿಗೆ ಮುಂಚೆಯೇ ತಾನು ವಿವಾಹವಮಾ ಡಿಕೊಳ್ಳತಕ್ಕುದು ಅಯುಕ್ತವೆಂದು ಹೇಳಿದನು. ಅಷ್ಟರಲ್ಲಿ ದ್ರೌಪದಿಯು ನಿಮ್ಮ ಐವರಿಗೂ ಧರ್ಮಪತ್ನಿಯೆಂಬದಾಗಿ ವ್ಯಾಸಋಷಿಯು ಹೇಳಿದ್ದ ಮಾತು ಧರ್ಮ ರಾಯನಿಗೆ ಸ್ಮೃತಿಗೆ ಬಂತು. ದ್ರೌಪದಿಯನ್ನು ನಾವೈದು ಮಂದಿಯೂ ಪಾ ಣಿಗ್ರಹಣಮಾಡೋಣವೆಂದು ಹೇಳಿದನು. ಅಷ್ಟರಲ್ಲಿಯೇ ಶ್ರೀಕೃಷ್ಣನು ಅವ ರನ್ನು ನೋಡುವ ಉದ್ದಿಶ್ಯ ಅಲ್ಲಿಗೆ ಬಂದು ತನಗಿಂತಲೂ ದೊಡ್ಡವನಾದ ಯುಧಿ ಷ್ಠಿರನನ್ನು ನಮಸ್ಕರಿಸಿ ತಾನು ಶ್ರೀಕೃಷ್ಣನೆಂಬುದನ್ನು ಅವರಿಗೆ ತಿಳಿಸಲು ಅವರೊ ಬ್ಬೊಬ್ಬರೂ ಆತನನ್ನು ಅತ್ಯಂತ ವಿಶ್ವಾಸದಿಂದ ಸಂಭಾವಿಸಿದರು. ತಾನು ಅಲ್ಲಿ ಬಹ ಳಹೊತ್ತು ಇದ್ದುದಾದರೆ ಪಾಂಡವರನ್ನು ಇತರರು ತಿಳಿದುಕೊಳ್ಳುವರೆಂದು ಶ್ರೀ ಕೃಷ್ಣನು ಜಾಗ್ರತೆಯಲ್ಲೇ ಅಲ್ಲಿಂದ ತೆರಳಿದನು. ಅನಂತರದಲ್ಲಿ ಪಾಂಡವರು ಆರೋಗಣೆಯನ್ನು ತೀರಿಸಿಕೊಂಡು ಸಾಲಾಗಿ ಮಲಗಿಕೊಂಡರು. ಅವರ ತಲೆ ಯಕಡೆಯಲ್ಲಿ ತಾಯಿಯೂ ಪಾದದ ಬಳಿಯಲ್ಲಿ ದ್ರೌಪದಿಯೂ ಮಲಗಿಕೊಂಡು ರು. ನಿದ್ರೆ ಹತ್ತುವವರಿಗೂ ಅವರು ವೀರಶ್ರೇಷ್ಠರಿಗುಚಿತವಾದ ತೆರದಲ್ಲಿ ಶಸ್ತ್ರಾ ಸ್ತ್ರಗಳ ವಿಷಯವಾಗಿಯೂ ಯುದ್ಧಪ್ರಕಾರಗಳ ವಿಷಯದಲ್ಲಿಯೂ ಮಾತುಗಳ

ನ್ನಾಡುತ್ತಿದ್ದರು. ಆ ಸಮಯದಲ್ಲಿ ದ್ರೌಪದಿಯ ಅಣ್ಣನು ತನ್ನ ತಂಗಿಯ ಗತಿಯೇನಾಯಿತೋ ಎಂಬುದನ್ನು ತಿಳಿಯಬೇಕೆಂದು ಅವರಿಗೆ ತಿಳಿಯಪಡಿಸದಂತೆಯೇ ಅವರಿದ್ದ ಮನೆಯನ್ನು ಹೊಕ್ಕು ಅವರು ಆಡಿಕೊಳ್ಳುತ್ತಿದ್ದ ಮಾತುಗಳನು ಹೊಂಚಿಕೇಳಿ ಜಾಗ್ರತೆಯಾಗಿ ತಂದೆಯಬಳಿಯನ್ನೈದಿ ಇಂತೆಂದನು—'ತಂದೆಯೇ! ಅವರು ಬ್ರಾಹ್ಮಣ ವೈಶ್ಯಶೂದ್ರರಲ್ಲ. ಶೂರರಿಗುಚಿತವಾದ ಮಾತುಗಳನ್ನು ಆಡುತ್ತಿದ್ದುದರಿಂದ ಅವರು ಪಾಂಡುಪುತ್ರರೆಂದು ತಿಳಿಯುವೆನು.'

ಈರೀತಿ ಹೇಳಿದ ಮಾತನ್ನು ಕೇಳಿ ದ್ರುಪದನು ತನ್ನ ಪುರೋಹಿತನನ್ನು ಕರೆಯಿಸಿ ಅವರುಗಳ ಗುರುತನ್ನು ತಿಳಿದು ಬರುವುದೆಂದು ಕಳುಹಿಸಲು ಆತನು ಬಂದು ಯುಧಿಷ್ಠಿರನನ್ನು ಕುರಿತು ನಿಮ್ಮ ಕುಲಗೋತ್ರಗಳನ್ನು ದ್ರುಪದ ಮಹಾರಾಜನು ತಿಳಿಯಲಿಚ್ಛಿಸುವನೆಂದು ಕೇಳಲು ಆತನು ಅಯ್ಯಾ! ದ್ರೌಪದಿಯು ಧರ್ಮದಿಂದಲೇ ಸಾಧಿಸಲ್ಪಟ್ಟಿರುವಳು. ದ್ರುಪದನು ಸಾರಿಸಿದ ತೆರದಲ್ಲಿ ನಡೆಯಿಸಿ ಪರಾಕ್ರಮವನ್ನು ತೋರಿಸಿದ ಶೂರನು ಆತನ ಮಗಳನ್ನು ಗೆದ್ದುಕೊಂಡು ಬರಲು ಆತನು ಚಿಂತಿಸಲೇಕೆಂದು ಹೇಳಿ ಆತನನ್ನು ಕಳುಹಿಸಿದನು. ಆಗ ದ್ರುಪದನು ಅವರುಗಳಿಗೆ ಸಂಭ್ರಮದಿಂದ ಔತಣವನ್ನು ಮಾಡಿಸಿ ಸಕಲ ವರ್ಣದವರಿಗೂ ಬೇಕಾದವಸ್ತುಗಳನ್ನು ಸಿದ್ಧಪಡಿಸಿ ಪಾಂಡವರನ್ನು ಕರೆಸಿದನು. ಅವರು ಭೋಜನವಾದ ತರುವಾಯ ಸಂತೋಷದಿಂದ ಆಯುಧಶಾಲೆಯನ್ನು ನೋಡಲುದ್ಯುಕ್ತರಾಗಲು ಅವರು ಕ್ಷತ್ರಿಯರೆಂದು ದ್ರುಪದನು ನಿಶ್ಚಯಮಾಡಿಕೊಂಡು ನೀವುಗಳು ಯಾರೆಂಬುದನ್ನು ತಿಳಿಸಬೇಕೆಂದು ಪ್ರಶ್ನೆಮಾಡಲು ಯುಧಿಷ್ಠಿರನು ತಾವು ಪಾಂಡವರೆಂಬ ಸಂಗತಿಯನ್ನು ತಿಳಿಯಪಡಿಸಿ ಅರಗಿನ ಮನೆಯಿಂದ ತಪ್ಪಿಸಿಕೊಂಡು ಬಂದ ಸಂಗತಿಯನ್ನೂ ಅನಂತರದಲ್ಲಿ ನಡೆದ ಸಮಾಚಾರಗಳನ್ನೂ ಕ್ರಮವಾಗಿ ತಿಳಿಸಲು ಆತನು ಆನಂದಭರಿತನಾದನು.

ಕೂಡಲೇ ದ್ರೌಪದಿಯ ವಿವಾಹವನ್ನು ಕುರಿತು ಮಾತನಾಡುತ್ತಾ ನಿಮ್ಮಲ್ಲೊಬ್ಬರು ಪಾಣಿಗ್ರಹಣ ಮಾಡಬಹುದೆಂದು ಹೇಳಲು ಧರ್ಮರಾಯನು ಆತನನ್ನು ಕುರಿತು ನಮಗಾಗಿ ಸಿಕ್ಕಿದ ಒಡವೆಯನ್ನು ನಾವೆಲ್ಲರೂ ತೆಗೆದುಕೊಳ್ಳುವೆವು. ದ್ರೌಪದಿಯು ನಿಮ್ಮೈವರಿಗೆ ಪತ್ನಿಯಾಗಿರಲೆಂದು ನಮ್ಮ ತಾಯಿಯ ಅಪ್ಪಣೆಯಾಗಿರುವುದು, ಎಂದುಹೇಳಲು ದ್ರುಪದನಿಂತೆಂದನು. ಓಹೋ! ಒಬ್ಬ ಕನ್ಯೆಗೆ ಐದುಮಂದಿ ಪತಿಗಳಿರಬಹುದೇ? ಕುಂತೀಪುತ್ರನೇ, ನೀನು ಧರ್ಮಪರನು. ನೀತಿ

ಶಾಸ್ತ್ರವನ್ನು ತಿಳಿದವನು. ಇಂಥವನೇ ಲೋಕಸಂಪ್ರದಾಯಕ್ಕೂ ವೇದಗಳಿಗೂ ವಿರುದ್ಧವಾದ ಪಾಪಕೃತ್ಯವನ್ನಾಚರಿಸಬಹುದೇ ? ಎಂದು ಹೇಳಿದ ದ್ರುಪದನ ಮಾತಿಗೆ ಯುಧಿಷ್ಠಿರನು "ನನ್ನ ಮಾತೆಂದಿಗೂ ಅಸತ್ಯವಾಗಲಾರದು. ನನ್ನ ಹೃದಯವು ಯಾವಾಗಲೂ ಅಧರ್ಮಕ್ಕೆ ಸ್ಥಳಕೊಡದು. ನಮ್ಮ ತಾಯಿಯ ಆಜ್ಞೆಯಿಂತಹುದು. ನನ್ನ ಅಂತಃಕರಣವು ಅದಕ್ಕೆ ಒಪ್ಪುವುದು'' ಎಂದು ಹೇಳಿದನು. ದ್ರುಪದನು ಅದಕ್ಕೆ ಒಡಂಬಡದೆ ಪುನಃ ಇದೇ ವಿಚಾರವನ್ನು ಕುರಿತು ಚರ್ಚಿಸುತ್ತಲಿದ್ದನು. ಅಷ್ಟರಲ್ಲಿಯೇ ಅಲ್ಲಿಗೆ ವ್ಯಾಸಮಹರ್ಷಿಯು ಬಂದನು. ಆಗ ದ್ರುಪದನು ಆ ಸಂಗತಿಯನ್ನು ಆತನಲ್ಲಿ ಬಿನ್ನವಿಸಿ ಈ ವಿಷಯವನ್ನು ತೀರ್ಮಾನಿಸಬೇಕೆಂದು ಬೇಡಿಕೊಳ್ಳಲು ಆತನು ದ್ರುಪದನನ್ನುಬಳಿಗೆ ಕರೆದು ಹೀಗೆಂದು ಹೇಳಿದನು. "ಆಪಾಂಡವರಲ್ಲಿ ನಾಲ್ವರು ಪೂರ್ವದಲ್ಲಿ ಇಂದ್ರ ಪದವಿಯಲ್ಲಿದ್ದವರು ಮತ್ತೊಬ್ಬನು ಈಗಿರುವ ಇಂದ್ರನ ಕುಮಾರನು. ಅವರಿಗೆ ಧರ್ಮಪತ್ನಿಯಾಗಲೋಸುಗ ಶ್ರೀದೇವಿಯು ಕೃಷ್ಣೆಯಾಗಿ ಅವತರಿಸಿರುವಳು. ಆ ದೇವಿಯು ಪೂರ್ವದಲ್ಲಿ ಮಹೇಶ್ವರನನ್ನು ಕುರಿತು ತನಗೆ ಪತಿಯನ್ನು ಕೊಡೆಂದು ಐದುಬಾರಿ ಕೇಳಿದುದರಿಂದ ಮಹಾದೇವನು ನಿನಗೆ ಐವರು ಪತಿಗಳಾಗುವರೆಂದು ಅಪ್ಪಣೆಮಾಡಿದನು.' ಎಂದು ಹೇಳಿ ದ್ರುಪದನಿಗೆ ದಿವ್ಯದೃಷ್ಟಿಯನ್ನಿತ್ತು ಈ ಪಾಂಡವರ ಮತ್ತು ದ್ರೌಪದಿಯ ಪೂರ್ವಜನ್ಮದ ವೃತ್ತಾಂತವನ್ನು ತೋರಿಸಿದನು. ಅದನ್ನೆಲ್ಲಾ ನೋಡಿದುದರಿಂದ ದ್ರುಪದನ ಮನಸ್ಸು ಒಡಂಬಟ್ಟಿತು. ಅನಂತರ ದ್ರೌಪದಿಯನ್ನು ಪಾಂಡವರೈವರಿಗೂ ಕೊಟ್ಟು ಆನಂದದೊಡನೆ ವಿವಾಹವನ್ನು ನಡೆಯಿಸಿದನು.

ಅನಂತರದಲ್ಲಿ ಪಾಂಡವರಿಗೆ ಸಕಲ ಸಂಪತ್ತುಗಳೂ ಒದಗಿದವು. ಕಮಲನಾಭನಾದ ಶ್ರೀಕೃಷ್ಣನು ಅವರಿಗೆ ಬೇಕಾದಷ್ಟು ದ್ರವ್ಯಗಳನ್ನು ಕಳುಹಿಸಿದನು. ದುರ್ಯೋಧನನೂ ಅವನ ಸ್ನೇಹಿತರೂ ಪಾಂಡವರು ಅರಗಿನ ಮನೆಯಿಂದ ತಪ್ಪಿಸಿಕೊಂಡರೆಂದು ತಿಳಿದು ತನ್ನ ದುರ್ಮಂತ್ರಿಗಳೊಡನೆ ಕೂಡಿ ಅವರಿಗೆ ಪುನಃ ಹೇಗೆ ಕೇಡುಮಾಡಬಹುದೆಂದು ಎಲ್ಲರೂ ಕಲೆತು ಆಲೋಚಿಸುತ್ತಾ ಬಂದರು. ಪ್ರಬಲರಾಗುವ ಮುಂಚೆಯೇ ಅವರೊಡನೆ ಯುದ್ಧಮಾಡಿ ಜಯಿಸಬೇಕೆಂದು ಕರ್ಣನು ಹೇಳಲು ಭೀಷ್ಮನು ಆ ಮಾತುಗಳನ್ನು ಕೇಳಿ ದುರ್ಯೋಧನನನ್ನು ಕುರಿತು ಹೀಗೆ ಹೇಳಿದನು. ಕುರುಶ್ರೇಷ್ಠನೇ, ಪಾಂಡವರೊಡನೆ ದ್ವೇಷಮಾಡುವುದನ್ನು ನಾನು ಒಪ್ಪುವುದಿಲ್ಲ. ರಾಜ್ಯದಲ್ಲಿ ಅರ್ಧವನ್ನು ಅವರಿಗೆ ಹಂಚಿಕೊಡುವುದು ನನಗೆ ಸಮ

ರ್ಶಕವು. ಆದರಿಂದ ನಿನಗೆ ಕೀರ್ತಿಯುಂಟಾಗುವುದು. ಪಾಂಡವರು ಬದುಕಿರುವುದಕ್ಕಾಗಿ ನಾವು ಬಹಳವಾಗಿ ಸಂತೋಷಪಡಬೇಕಾಗಿದೆ. ಕುಂತಿಯು ಬದುಕಿರುವುದು ನಮ್ಮ ಭಾಗ್ಯವಲ್ಲವೇ ? ಅವರಿಗೆ ಉಂಟಾದ ಆಪತ್ತನ್ನು ಕೇಳಿ ಜನಗಳು ಪುರೋಚನನಿಗಿಂತಲೂ ನೀನು ಹೆಚ್ಚು ದುರಾತ್ಮನೆಂದು ಹೇಳುತ್ತಿರುವರು. ಅಗ್ನಿಬಾಧೆಯಿಂದ ತಪ್ಪಿಸಿಕೊಂಡು ಪಾಂಡವರು ಪ್ರಾಣದಿಂದಿರುವುದರಿಂದ ನಿನ್ನ ಅಪಯಶಸ್ಸು ತೊಲಗಿತು. ಆ ವೀರರು ಬದುಕಿರುವವರೆಗೂ ರಾಜ್ಯದಲ್ಲಿ ಅವರಿಗಿರುವ ಪೈತೃಕವಾದ ಭಾಗವನ್ನು ದೇವೇಂದ್ರನಾದರೂ ತಪ್ಪಿಸಲಾರನು. ಪಾಂಡವರು ಧರ್ಮಪರರಾಗಿ ಒಗ್ಗಟ್ಟಾಗಿ ಇರತಕ್ಕವರು. ರಾಜ್ಯದಲ್ಲಿ ಅವರಿಗೆ ನ್ಯಾಯವಾಗಿ ಸಲ್ಲತಕ್ಕ ಅರ್ಧಪಾಲನ್ನು ಅವರಿಗೆ ಕೊಡದಿರತಕ್ಕದ್ದು ಅನ್ಯಾಯವು ನೀನು ನ್ಯಾಯವನ್ನನುಸರಿಸುವವನಾದರೆ ನನಗೆ ಪ್ರಿಯವನ್ನುಂಟುಮಾಡುವವನಾದರೆ ಸರ್ವರಿಗೂ ಕ್ಷೇಮವನ್ನು ಕೋರುವವನಾದರೆ ಅವರಿಗೆ ಅರ್ಧರಾಜ್ಯವನ್ನು ಕೊಡು ಎಂದು ಹೇಳಿದನು ದ್ರೋಣನೂ ವಿದುರನೂ ಸಹ ಹೀಗೆಯೇ ಹೇಳಿದರು. ಕರ್ಣನುಮಾತ್ರ ಅದನ್ನು ಒಪ್ಪಲಿಲ್ಲ. ಅನಂತರ ಧೃತರಾಷ್ಟ್ರನು ಪಾಂಡವರನ್ನು ಕರೆತರಲು ವಿದುರನನ್ನು ಕಳುಹಿಸಿದನು.

ಪಾಂಡವರು ಪಟ್ಟಣವನ್ನು ಪ್ರವೇಶಿಸಲು ಪುರಜನರೆಲ್ಲರೂ ಅತ್ಯಂತ ಸಂತೋಷಯುಕ್ತರಾದರು. ಪಟ್ಟಣವೆಲ್ಲವೂ ಅಲಂಕೃತವಾಗಿ ಪ್ರಕಾಶಿಸುತ್ತಿತ್ತು. ಧೃತರಾಷ್ಟ್ರನು ಅವರಿಗೆ ಅರ್ಧರಾಜ್ಯವನ್ನು ಕೊಟ್ಟು ಖಾಂಡವಪ್ರಸ್ಥದಲ್ಲಿ ಅವರನ್ನು ವಾಸಿಸುವಂತೆ ಕಳುಹಿಸಿದನು. ಆಗ ಖಾಂಡವಪ್ರಸ್ಥವು ಒಂದು ಗೊಂಡಾರಣ್ಯವಾಗಿದ್ದಿತು. ಅಲ್ಲಿ ಪಾಂಡವರು ವ್ಯಾಸನು ತೋರಿಸಿದ ಒಂದು ಉತ್ತಮ ಪ್ರದೇಶದಲ್ಲಿ ಸುಂದರವಾದ ಪಟ್ಟಣವೊಂದನ್ನು ನಿರ್ಮಿಸಿ ಅಲ್ಲಿ ವಾಸಿಸಿದರು. ಇಂದ್ರನ ಪಟ್ಟಣಕ್ಕೆ ಸಮನಾಗಿದ್ದ ಅದರ ಸೊಬಗನ್ನು ಜನಗಳು ನೋಡಿ ಇಂದ್ರಪ್ರಸ್ಥವೆಂದು ಅದನ್ನು ಕರೆದರು.

ಹೀಗೆ ಪಾಂಡವರು ಸುಖವಾಗಿರುವಲ್ಲಿ ಒಂದುದಿನ ನಾರದಮಹರ್ಷಿಯು ಅವರನ್ನು ನೋಡುವುದಕ್ಕಾಗಿ ಬಂದು ಕುಶಲಪ್ರಶ್ನೆಗಳಾದ ತರುವಾಯ ನಿಮ್ಮೈವರಿಗೆ ಒಬ್ಬಳೇ ಪತ್ನಿಯಾಗಿರುವುದರಿಂದ ಯಾವಾಗಲಾದರೂ ನಿಮಗೆ ತೊಂದರೆಯಾಗಬಹುದು. ಆದುದರಿಂದ ನೀವೈದುಮಂದಿಯೂ ಪತ್ನಿಯೊಡನಿರಲಿಕ್ಕೆ ಕಾಲವನ್ನು ನಿರ್ಣಯಮಾಡಿಕೊಳ್ಳುವುದರಿಂದ ಸುಖಉಂಟೆಂದು ನುಡಿಯಲು ಆ

ಪಾಂಡವರು ತಮ್ಮಲ್ಲೊಬ್ಬರು ಪಾಂಚಾಲಿಯೊಡನಿರುವ ಸಮಯದಲ್ಲಿ ಮತ್ತೊಬ್ಬರು ಅಲ್ಲಿಗೆ ಹೋದುದಾದರೆ ಅಂಥವರು ಹನ್ನೆರಡು ತಿಂಗಳವರಿಗೆ ಅರಣ್ಯವಾಸ ಮಾಡುವುದಾಗಿ ಗೊತ್ತು ಮಾಡಿಕೊಂಡರು.

ಅನಂತರ ಒಂದಾನೊಂದು ರಾತ್ರಿ ಒಬ್ಬಬ್ರಾಹ್ಮಣನು ಪಾಂಡವರ ಬಳಿಗೆ ಬಂದು ಕಳ್ಳರು ನನ್ನ ಪಶುಗಳನ್ನು ಕದ್ದುಕೊಂಡು ಹೋಗುತ್ತಿರುವರು. ಅವುಗಳನ್ನು ನನಗೆ ಕೊಡಿಸಬೇಕೆಂದು ಅತ್ಯಂತ ದೀನನಾಗಿ ಮೊರೆಯಿಡಲು ಅರ್ಜುನನು ಎಲೈ ಬ್ರಾಹ್ಮಣೋತ್ತಮನೇ! ನಾನು ನಿನ್ನ ಪಶುಗಳನ್ನು ತಂದುಕೊಡುವೆನು, ವ್ಯಥೆಪಡಬೇಡವೆಂದು ಆತನನ್ನು ಸಮಾಧಾನಮಾಡಿ ತನ್ನ ಆಯುಧಗಳೆಲ್ಲವೂ ಧರ್ಮರಾಯನು ದ್ರೌಪದೀಸಮೇತನಾಗಿರುವ ಮನೆಯಲ್ಲಿರುವುದನ್ನು ತಿಳಿದು ಮನಸ್ಸಿನಲ್ಲಿ ಹೀಗೆ ಚಿಂತಿಸಿದನು. 'ನಾನು ಈಗ ಏನುಮಾಡಲಿ? ರಾಜ್ಯದಲ್ಲಿನ ಅಧರ್ಮಪರರನ್ನು ಶಿಕ್ಷಿಸದಿದ್ದಲ್ಲಿ ರಾಜರಿಗೆ ಪಾಪವೊದಗುವದಾದಕಾರಣ ನಾನು ಈ ಬಡಬ್ರಾಹ್ಮಣನನ್ನು ಕಾಪಾಡದಿದ್ದಲ್ಲಿ ತಪ್ಪಾಗುವುದು. ಈ ಕೆಲಸಕ್ಕಾಗಿ ಆಯುಧಗಳನ್ನು ತೆಗೆದುಕೊಳ್ಳಲು ಮನೆಯೊಳಕ್ಕೆ ಪ್ರವೇಶಿಸಿದರೆ ಅರಣ್ಯವಾಸಮಾಡಬೇಕಾಗುವುದು. ಆದರೂ ನಾನು ಅರಣ್ಯಕ್ಕೆಹೋಗಿ ಅಲ್ಲಿ ದೇಹತ್ಯಾಗಮಾಡಿದರೂ ಚಿಂತೆಯಿಲ್ಲ. ಶರೀರಕ್ಕಿಂತಲೂ ಧರ್ಮವೇ ಶ್ರೇಷ್ಠವಾದುದು. ಶರೀರನಾಶವಾದ ಮೇಲೂ ಧರ್ಮವು ನಿಂತಿರುವುದು.' ಎಂದು ನಿರ್ಧರಮಾಡಿದವನಾಗಿ ಯುಧಿಷ್ಠಿರನಿದ್ದ ಮನೆಗೆಹೋಗಿ ಆತನಿಗೆ ಆ ವೃತ್ತಾಂತವನ್ನು ತಿಳಿಸಿ ಆಯುಧಗಳನ್ನು ತೆಗೆದುಕೊಂಡು ಕಳ್ಳರನ್ನು ತರುಬಿಕೊಂಡುಹೋಗಿ ಹಿಡಿದು ಬ್ರಾಹ್ಮಣನ ಪಶುಗಳನ್ನು ಆತನಿಗೆ ಕೊಟ್ಟು ಅನಂತರ ಧರ್ಮರಾಜನ ಬಳಿಗೆ ಬಂದು ನಾನು ಅರಣ್ಯವಾಸಮಾಡಿ ವಾಪಸುಬರಲು ಅಪ್ಪಣೆಕೊಡೆಂದು ಕೇಳಲು ಆತನು ವಿಷಾದಪಟ್ಟು ಇಂತೆಂದನು. ವೀರಶ್ರೇಷ್ಠನೇ! ನೀನು ಏನು ಕಾರಣದಿಂದ ನಾನಿದ್ದ ಮನೆಯನ್ನು ಪ್ರವೇಶಿಸಿದೆಯೆಂಬುದನ್ನು ನಾನು ಬಲ್ಲೆನು. ಆದಕ್ಕಾಗಿ ನನ್ನ ಮನಸ್ಸಿನಲ್ಲಿ ಸ್ವಲ್ಪವೂ ಸಂಶಯಪಡಲಾರೆನು. ಆದುದರಿಂದ ನಿನ್ನ ಸಂಕಲ್ಪವನ್ನು ಬಿಡು. ನನ್ನ ಮಾತನ್ನಾಲಿಸು. ನಡೆ, ನಿನ್ನ ಕಾರ್ಯಗಳಲ್ಲಿ ನಿರತನಾಗಿರು. ನಿನ್ನ ಧರ್ಮಕ್ಕೆ ಎಳ್ಳಷ್ಟಾದರೂ ಚ್ಯುತಿಯುಂಟಾಗಿಲ್ಲ. ನೀನು ನನಗೆ ಅಪ್ರಿಯವನ್ನು ಉಂಟುಮಾಡಿದವನಲ್ಲವೆಂದು ಎಷ್ಟುಹೇಳಿದಾಗ್ಯೂ ಅರ್ಜುನನು ಸಮ್ಮತಿಸದೆ, ಹೀಗೆ ಹೇಳಿದನು.

ಧರ್ಮಾಚರಣೆಯಲ್ಲಿ ನೆಪವನ್ನು ಹೇಳಲಾಗದೆಂದು ನಿನ್ನಿಂದಲೇ ನಾನು ತಿಳಿದಿದೇನೆ. ನಾನು ಸತ್ಯವನ್ನು ಮಿಾರಲರಿಯೆನು. ಸತ್ಯವೇ ನನಗೆ ಆಯುಧವು ಎಂದು ಹೇಳಿ ಅರಣ್ಯವನ್ನು ಕುರಿತು ತೆರಳಿದನು. ಸತ್ಯದಲ್ಲಿ ಆದರಣೆಯೇ ಆರ್ಯರಿಗೆ ಪ್ರಧಾನವಾದ ಗುಣವು. ಅದಕ್ಕೆ ದೃಷ್ಟಾಂತವು ಈ ಚರಿತ್ರೆಯಲ್ಲಿ ಪದೇಪದೇ ಬರುತ್ತಿರುವುದು. ಸತ್ಯದಲ್ಲಿ ಪ್ರೀತಿಯೂ ಅಸತ್ಯವನ್ನು ದೂರಮಾಡುವಿಕೆಯೂ ಎಲ್ಲ ವರ್ಣದವರಲ್ಲಿಯೂ ಎಂತಹ ಸ್ಥಿತಿಯಲ್ಲಿರುವವರಲ್ಲಿಯೂ ಸ್ತ್ರೀ ಪುರುಷರೆಲ್ಲರಲ್ಲಿಯೂ ಒಂದೇಸಮನಾಗಿ ಕಾಣಿಸುತ್ತಿರುವುದು. ಆರ್ಯವಂಶದಲ್ಲಿ ಹುಟ್ಟಿದ ಬಾಲಕನು ಅಸತ್ಯವನ್ನು ಹೇಳಿದುದಾದರೆ ತನ್ನ ಹಿರಿಯರನ್ನು ಅವಮಾನ ಪಡಿಸಿದಂತಾಗುವುದು.

ಹೀಗೆ ನಿರ್ದೋಷಿಯಾದ ಅರ್ಜುನನು ಹೊರಟು ಬಹುದೂರ ಕಾಡಿನಲ್ಲಿ ಪ್ರಯಾಣಮಾಡಿ ಒಂದು ಸ್ಥಳದಲ್ಲಿ ಸ್ನಾನಮಾಡಿ ನಿತ್ಯಕರ್ಮಗಳನ್ನನುಷ್ಠಿಸುತ್ತಿರಲು ನಾಗಲೋಕಾಧಿಪತಿಯ ಕುವರಿಯಾದ ಉಲೂಪಿಯೆಂಬ ನಾಗಕನ್ಯೆಯು ಅವನ ನಡುವನ್ನು ಹಿಡಿದುಕೊಂಡು ಪ್ರವಾಹದಲ್ಲಿ ಎಳೆದುಕೊಂಡುಹೋಗಿ ತನ್ನ ಅರಮನೆಯನ್ನು ಸೇರಿದಳು.

ಅರ್ಜುನನು ತಾನು ಮಾಡುತ್ತಿದ್ದ ಆಹ್ನಿಕಕ್ಕೆ ಈ ರೀತಿಯಾದ ವಿಘ್ನವೊದಗಲು ಆ ಪಟ್ಟಣದಲ್ಲಿ ಬೆಂಕಿಯುರಿಯುತ್ತಿದ್ದ ಬಳಿ ಅನುಷ್ಠಾನಗಳನ್ನು ಪೂರ್ತಿಮಾಡಿ ಅನಂತರ ಆಕೆಯನ್ನು ನೋಡಿ ನೀನು ಏನು ಕಾರಣ ನನ್ನನ್ನು ಇಲ್ಲಿಗೆ ಕರತಂದೆಯೆಂದು ಕೇಳಲು, ಉಲೂಪಿಯು ನಿನ್ನಲ್ಲಿ ಅನುರಾಗ ಹೊಂದಿ ನಿನ್ನನ್ನು ಇಲ್ಲಿಗೆ ಕರೆತಂದೆನೆಂದು ಹೇಳಿದಳು. ಅರ್ಜುನನು ಆಕೆಯ ಆಶೆಯನ್ನು ಪೂರ್ತಿಮಾಡಿ ಆದಿನ ಆಕೆಯಬಳಿಯಲ್ಲಿ ವಾಸಿಸಿ ಮರುದಿನ ಉಷಃಕಾಲಕ್ಕೆ ಅಲ್ಲಿಂದ ಹೊರಟು ಸಾಹಸಕಾರ್ಯಗಳನ್ನು ಮಾಡುತ್ತಾ ಅನೇಕ ಪುಣ್ಯತೀರ್ಥಗಳಲ್ಲಿ ಸ್ನಾನಮಾಡುತ್ತಾ ಭಗವಂತನಾದ ಶ್ರೀಕೃಷ್ಣನಿದ್ದ ದೇಶದ ಬಳಿಗೆ ಬರಲು ಆ ದೇವನು ತನ್ನ ಸ್ನೇಹಿತನನ್ನು ನೋಡಲುಬಂದು ಆತನನ್ನು ಕರೆದುಕೊಂಡು ದ್ವಾರಕಿಗೆ ಬಂದು ಅಲ್ಲಿ ಆತನನ್ನು ಸನ್ಮಾನಿಸಿದನು. ಹೀಗೆ ಅಲ್ಲಿ ಕೆಲವು ಕಾಲವಿದ್ದು ಶ್ರೀಕೃಷ್ಣನ ತಂಗಿಯಾದ ಸುಭದ್ರೆಯೆಂಬ ಸುಂದರೀಮಣಿಯನ್ನು ನೋಡಿ ಆಕೆಯನ್ನು ಮೋಹಿಸಲು ಶ್ರೀಕೃಷ್ಣನು ಆತನನ್ನು ನೋಡಿ ಈ ಮಾನಿನೀಮಣಿಯನ್ನು ನಿನ್ನ ಪರಾಕ್ರಮದಿಂದ ಕರೆದುಕೊಂಡುಹೋಗು, ಇದು ಕ್ಷತ್ರಿಯಧರ್ಮವಲ್ಲವೇ ಎಂದು ಬೋಧಿಸಿ

ದನು. ಅರ್ಜುನನು ಈ ವೃತ್ತಾಂತವನ್ನು ಯುಧಿಷ್ಠಿರನಿಗೆ ತಿಳಿಯಪಡಿಸಿ ಆತನ ಸಮ್ಮತಿಪಡೆದು ಸಮಯ ನಿರೀಕ್ಷಿಸುತ್ತಿದ್ದು ಆ ಸ್ತ್ರೀಯು ತನ್ನ ಜತೆಗಾತಿಯ ರೊಡನೆ ಕೂಡಿ ಹೋಗುತ್ತಿರುವಸಮಯದಲ್ಲಿ ಜಾಗ್ರತೆಯಿಂದ ತನ್ನ ರಥದಮೇಲೆ ಕೂಡಿಸಿಕೊಂಡು ಹೊರಟನು. ಯಾದವರು ಮತ್ತು ವಾರ್ಷ್ಣೇಯಯೋಧರು ಇದನ್ನು ತಿಳಿದು ಹೆಚ್ಚಾಗಿಕೋಪಿಸಿ ಅರ್ಜುನನೊಡನೆ ಯುದ್ಧಮಾಡಲು ಹೊರ ಟರು. ಶ್ರೀಕೃಷ್ಣನು ಶಾಂತಿವಚನಗಳಿಂದ ಅವರಿಗೆ ಸಮಾಧಾನಮಾಡಿ ಅರ್ಜುನ ನನ್ನು ಸ್ತೋತ್ರಮಾಡುತ್ತಾ ಹೀಗೆಂದು ಹೇಳಿದನು. ನಮ್ಮ ಸುಭದ್ರೆಗೆ ಅರ್ಜುನ ನಿಗಿಂತ ಶ್ರೇಷ್ಠನಾದ ವರನಿರುವನೇ? ಎಲ್ಲಾ ವಿಧಗಳಲ್ಲಿಯೂ ಆತನು ತಕ್ಕವನು. ಆದುದರಿಂದ ನೀವು ಆತನ ಹಿಂದೆ ಹೊರಟು ಆತನನ್ನು ಸಮಾಧಾನಪಡಿಸಿ ಕರೆದು ಕೊಂಡು ಬನ್ನಿರೆಂದನು. ಅವರು ಆ ಮಾತಿಗೆ ಸಂತೋಷಿಸಿ ಹಾಗೆಯೇ ಮಾಡಿ ದರು. ಇದಾದಮೇಲೆ ಅರ್ಜುನನು ತನ್ನ ಹನ್ನೆರಡುತಿಂಗಳುಗಳವ್ರತ ಮುಗಿಯು ವವರೆಗೂ ದ್ವಾರಕಿಯಲ್ಲೇ ಇದ್ದು ಅನಂತರ ಕೇಶವ ಬಲರಾಮ ಮೊದಲಾದ ಯೋಧಾಗ್ರೇಸರರನೇಕರೊಡನೆ ಇಂದ್ರಪ್ರಸ್ಥ ಪಟ್ಟಣಕ್ಕೆ ಬಂದನು. ಯಾದವ ವೀರರು ಅನೇಕವಾಗಿ ಧನವನ್ನೂ ಗಜಾಶ್ವಾದಿಗಳನ್ನೂ ಅರ್ಜುನನಿಗೆ ಬಳುವಳಿ ಯಾಗಿ ತಂದರು. ಕೆಲವು ಕಾಲದಲ್ಲಿ ಸುಭದ್ರೆಯ ಗರ್ಭದಲ್ಲಿ ಅಭಿಮನ್ಯುವೆಂಬ ಕುಮಾರನು ಜನಿಸಿ ಶ್ರೀಕೃಷ್ಣನಿಗೆ ಹೆಚ್ಚುವಿಶ್ವಾಸ ಪಾತ್ರನಾಗಿ ಪ್ರಕಾಶಿಸಿದನು. ಪೂರ್ವದಲ್ಲಿ ಸೋಮನು ತನ್ನ ಸುತನಾದ ವರ್ಚಸ್ಸೆಂಬುವನನ್ನು ನೋಡಿ ನೀನು ಸ್ವರ್ಗವನ್ನು ಬಿಟ್ಟು ಭೂಮಿಯಲ್ಲಿ ಹದಿನಾರುವರ್ಷಗಳು ವಾಸಿಸುವಹಾಗೆ ಅಪ್ಪ ಣೆಮಾಡಿರುವೆನು. ನೀನು ಅದರಂತೆ ಕುರುಕ್ಷೇತ್ರದಲ್ಲಿ ದೊಡ್ಡಯುದ್ಧವನ್ನುಮಾಡಿ ಅನಂತರ ಇಲ್ಲಿಗೆ ಬರುವುದೆಂದು ಅಪ್ಪಣೆಮಾಡಿ ಕಳುಹಿಸಿದುದರಿಂದ ಆತನು ಅಭಿ ಮನ್ಯುವಾಗಿಹುಟ್ಟಿ ಪರಾಕ್ರಮದಲ್ಲಿ ಎಲ್ಲರಿಗಿಂತಲೂ ಶ್ರೇಷ್ಠನೆನಿಸಿಕೊಂಡು ಅಷ್ಟೇ ಕಾಲ ಭೂಮಿಯಲ್ಲಿದ್ದನು.

ಶ್ರೀಕೃಷ್ಣಾರ್ಜುನರು ಒಂದಾನೊಂದುದಿನ ವನವಿಹಾರವಮಾಡುತ್ತಿದ್ದ ಕಾಲ ದಲ್ಲಿ ಯಜ್ಞೇಶ್ವರನು ವೃದ್ಧಬ್ರಾಹ್ಮಣರೂಪವನ್ನುಧರಿಸಿ ಅವರಸಮೀಪವನ್ನೈದಿ ಇಂತೆಂದನು. '' 'ಖಾಂಡವವೆಂಬ ಅರಣ್ಯವನ್ನು ದಹಿಸಲು ಇಚ್ಛಿಸಿಬಂದಿರುವೆನು. ಇದು ಇಂದ್ರನಿಂದ ರಕ್ಷಿತವಾಗಿದೆ. ಆದುದರಿಂದ ಇದಕ್ಕುಪಾಯವನ್ನು ಕಾಣದೆ ಇದೇನೆ. ಆದಕ್ಕೇನುಮಾಡಬೇಕೆಂದು ' ನಾನು ಬ್ರಹ್ಮನನ್ನು ಕೇಳಲಾಗಿ ಆತನು

'ಪೂರ್ವದಲ್ಲಿ ನರನಾರಾಯಣರಾಗಿದ್ದ ಅರ್ಜುನವಾಸುದೇವರ ಸಹಾಯವನ್ನು ಹೊಂದು' ಎಂಬದಾಗಿ ನನಗೆ ಹೇಳಿರುವನು. ಆದುದರಿಂದ ಸಹಾಯಾರ್ಥವಾಗಿ ನಿಮ್ಮಲ್ಲಿ ಬಂದಿರುವೆನು.'' ಎಂದು ಮೊರೆಯಿಡಲು ಧನಂಜಯನಿಂತೆಂದನು. ನನಗೆ ತಕ್ಕಾದಬಿಲ್ಲೂ ತೂಣೀರವೂ ಇಲ್ಲವು. ನನಗೆ ತಕ್ಕಂತಹ ಕುದುರೆಗಳನ್ನು ಕಟ್ಟಿ ರಥವನ್ನೂ ಕೃಷ್ಣನಿಗೆ ಬೇಕಾದ ಆಯುಧಗಳನ್ನೂ ಕೊಡಬೇಕೆನ್ನಲು ಅಗ್ನಿಯು ಜಲಾಧಿಪತಿಯಾದ ವರುಣನನ್ನು ಧ್ಯಾನಿಸಿದನು. ಕೂಡಲೇ ವರುಣನು ಅಲ್ಲಿಗೆಬರಲು ಅಗ್ನಿಯು ಆತನನ್ನು ಕುರಿತು ಅರ್ಜುನನಿಗೆ ಗಾಂಡೀವವೆಂಬ ಧನುಸ್ಸನ್ನೂ ಅಕ್ಷಯ ತೂಣೀರವನ್ನೂ ಹನುಮದ್ಧ್ವಜಯುಕ್ತವಾದ ಸೋಮನರಥವನ್ನೂ ಕೊಡು. ಶ್ರೀಕೃಷ್ಣನಿಗೆ ಲೋಕವಿಖ್ಯಾತವಾದ ಸುದರ್ಶನಚಕ್ರವನ್ನು ಕೊಡು; ಎಂದು ಹೇಳಲು ವರುಣನು ಆತನ ಕೋರಿಕೆಯಂತೆ ಅವರಿಗೆ ಅವನ್ನು ಕೊಟ್ಟನು. ಅನಂತರ ದಲ್ಲಿ ಅಗ್ನಿಯು ಖಾಂಡವವೆಂಬ ಆರಣ್ಯವನ್ನು ಹೊಕ್ಕು ಸುಡಲುಪಕ್ರಮಿಸಲು ಇಂದ್ರನು ಮೇಘಗಳನ್ನು ಕರೆದು ಮಳೆಸುರಿಸುವಂತೆ ಆಜ್ಞಾಪಿಸಿ ಕಳುಹಿಸಿದನು ಇಂದ್ರಸುತನಾದ ಅರ್ಜುನನು ಬಾಣವರ್ಷಗಳನ್ನು ಕರೆದು ಆ ಮೇಘಗಳನ್ನು ಓಡಿಸಿದನು. ಹೀಗೆ ಅಗ್ನಿದೇವನು ಆ ಅಡವಿಯನ್ನು ಹದಿನೈದು ದಿನಗಳವರಿಗೂ ಸುಡುತ್ತಲೇಇದ್ದನು. ಅದರಲ್ಲಿ ಆರುಪ್ರಾಣಿಗಳುಮಾತ್ರ ತಪ್ಪಿಸಿಕೊಂಡವು. ಹೀಗೆ ತಪ್ಪಿಸಿಕೊಂಡವರಲ್ಲಿ ಅರ್ಜುನನಿಗೆ ಶರಣಾಗತನಾಗಿ ತನ್ನ ಪ್ರಾಣಗಳನ್ನು ಉಳಿಸಿಕೊಂಡ ಮಯನೆಂಬ ರಾಕ್ಷಸನೊಬ್ಬನು.

ಈ ರೀತಿಯಲ್ಲಿ ಖಾಂಡವವನವೆಲ್ಲವೂ ಅಗ್ನಿಯಿಂದ ದಗ್ಧವಾಗಲು, ಇಂದ್ರನು ತನ್ನಪುತ್ರನಾದ ಅರ್ಜುನನ ಪರಾಕ್ರಮವನ್ನೂ ಚಾತುರ್ಯವನ್ನೂ ನೋಡಿ ಸಂತೋಷಿಸಿ ಕೃಷ್ಣಾರ್ಜುನರು ಒಂದೆಡೆ ವಿಶ್ರಾಂತರಾಗಿ ಕುಳಿತಿರಲು ಅವರ ಸಮೀಪವನ್ನು ಹೊಂದಿ ನಿಮಗೆ ಬೇಕಾದ ವರವನ್ನು ಕೊಡುವೆನು, ಕೇಳಿ, ಯೆನ್ನಲು ಅರ್ಜುನನು ನಿನ್ನ ದಿವ್ಯಾಯುಧಗಳನ್ನು ನನಗೆ ಕೊಡಬೇಕೆಂದು ಕೇಳಿದನು. ಇಂದ್ರನು ಭಗವಂತನಾದ ಪರಮೇಶ್ವರನು ನಿನ್ನಲ್ಲಿ ಪ್ರಸನ್ನನಾದಾಗ ನನ್ನ ದಿವ್ಯಾಸ್ತ್ರಗಳೆಲ್ಲವನ್ನೂ ನಿನಗೆ ಕೊಡುವೆನೆಂದನು. ಶ್ರೀಕೃಷ್ಣನು ತನಗೆ ಅರ್ಜುನನೊಡನೆ ಸ್ನೇಹವು ಶಾಶ್ವತವಾಗಿರಬೇಕೆಂದು ವರವನ್ನು ಪಡೆದನು.

ಇಂತು ಭಾರತಕಥಾಸಾರದೊಳ್ ಆದಿಪರ್ವವು ಮುಗಿದುದು.



## ೪ ನೆಯ ಅಧ್ಯಾಯ.

### ಸಭಾಪರ್ವ.

ಮಹಾಭಾರತದಲ್ಲಿ ಎರಡನೆಯದಾದ ಸಭಾಪರ್ವವನ್ನು ಈಗ ನಾವು ಓದಲುಪಕ್ರಮಿಸೋಣ. ಇದರಲ್ಲಿ ಪ್ರಸಿದ್ಧವಾದ ಮೂರುಸಭೆಗಳ ವೃತ್ತಾಂತಗಳು ಹೇಳಲ್ಪಟ್ಟಿರುವುದರಿಂದ ಇದಕ್ಕೆ ಈ ಹೆಸರು ಬಂದಿತು.

ಖಾಂಡವವನ ದಹನದಲ್ಲಿ ಮಯನೆಂಬ ದಾನವನು ತಪ್ಪಿಸಿಕೊಂಡು ಪ್ರಾಣರಕ್ಷಣೆ ಮಾಡಿಕೊಂಡನೆಂಬ ವೃತ್ತಾಂತವನ್ನು ನೀವು ತಿಳಿದಿರುವಿರಷ್ಟೆ. ಆತನು "ನನ್ನನ್ನು ಕಾಪಾಡಿದ ನಿನಗೆ ಯಾವ ಪ್ರತ್ಯುಪಕಾರವನ್ನು ಮಾಡಲಿ" ಎಂದು ಅರ್ಜುನನನ್ನು ಪ್ರಾರ್ಥಿಸಿದನು. ಆತನು ಮಯನಲ್ಲಿ ಪ್ರೀತಿಯನ್ನೂ ಗೌರವವನ್ನೂ ತೋರ್ಪಡಿಸುತ್ತ ನನಗೆ ಏನೊಂದಭಿಮತವೂ ಇಲ್ಲ, ಎಂದು ಹೇಳಿದನು. ಅಷ್ಟರಿಂದ ಮಯನು ತೃಪ್ತನಾಗದೆ ನನ್ನಿಂದ ಪ್ರತ್ಯುಪಕಾರವನ್ನು ನೀನು ಹೊಂದಿದಲ್ಲದೆ ನಾನು ಕೃತಕೃತ್ಯನಾಗಲಾರೆನೆನ್ನಲು ಅರ್ಜುನನು "ಶ್ರೀಕೃಷ್ಣನ ಅಪ್ಪಣೆಯನ್ನು ಪಡೆದು ಆತನಿಗಭಿಮತವಾದುದನ್ನು ಮಾಡು" ಎಂದನು. ವಾಸುದೇವನು ಮಯನನ್ನು ನೋಡಿ "ನೀನು ಶಿಲ್ಪಿಗಳಲ್ಲೆಲ್ಲಾ ಅಗ್ರೇಸರನಾಗಿರುವಿ, ನಿನ್ನ ಶಿಲ್ಪಚಾತುರ್ಯವು ಮೆರೆಯುವಂತೆ ಪಾಂಡವರಿಗೆ ಇಂದ್ರಪ್ರಸ್ಥಪಟ್ಟಣದಲ್ಲಿ ಸಭಾಮಂದಿರವೊಂದನ್ನು ನಿರ್ಮಿಸಿ ಕೊಡು" ಎಂದನು. ಮಯನು ಪರಮಾನಂದಭರಿತನಾಗಿ ಆ ಸ್ಥಳಕ್ಕೆ ಬಂದು ಬೇಕಾದಷ್ಟು ಭೂಮಿಯನ್ನು ಅಳತೆಮಾಡಿಸಿ ಕೆಲಸಕ್ಕೆ ಉಪಕ್ರಮಿಸಿದನು.

ಅಷ್ಟರಲ್ಲಿ ಕಮಲಾಕ್ಷನು ತನ್ನ ಪಟ್ಟಣಕ್ಕೆ ಹೊರಡಲುದ್ಯುಕ್ತನಾದನು. ಭಗವಂತನಾದ ಆ ಶ್ರೀಕೃಷ್ಣನು ಹಿರಿಯರಲ್ಲಿ ಭಕ್ತಿಗೌರವಗಳನ್ನು ಹೇಗೆ ತೋರ್ಪಡಿಸುತ್ತಿದ್ದನೆಂಬುದನ್ನು ನೋಡಿರಿ. ತಾನು ಹೊರಡುವ ಸಮಯದಲ್ಲಿ ತನ್ನ ಸೋದರತ್ತೆಯಾದ ಕುಂತಿಯ ಪಾದಕಮಲಗಳಿಗೆ ತನ್ನ ತಲೆಯು ಮುಟ್ಟುವಂತೆ ನಮಸ್ಕರಿಸಿ ಅಲ್ಲಿದ್ದ ಬ್ರಾಹ್ಮಣರಿಗೂ ತನಗಿಂತ ದೊಡ್ಡವರಾದ ಯುಧಿಷ್ಠಿರ ಭೀಮಸೇನರಿಗೂ ನಮಸ್ಕಾರಮಾಡಿ ಅಲ್ಲಿಂದ ಹೊರಟನು. ಮತ್ತೊಂದುಸಾರಿ ಆತನು ಬ್ರಾಹ್ಮಣರ ಪಾದಪ್ರಕ್ಷಾಳನವನ್ನು ಮಾಡಿದನೆಂದೂ ಸಹ ಹೇಳಿದೆ. ತನಗಿಂತ ವಯಸ್ಸಿನಲ್ಲಿಯೂ ವರ್ಣದಲ್ಲಿಯೂ ದೊಡ್ಡವರಾದವರಲ್ಲಿ ಈಗಿನವರಂತೆ

ಅನಾದರಣೆಯನ್ನು ತೋರ್ಪಡಿಸದೆ ಸದಾಕಾಲದಲ್ಲಿಯೂ ಭಕ್ತಿವಿನಯಗಳಿಂದ ಕೂಡಿದವನಾಗಿದ್ದು ಇತರರಿಗೆ ಸದ್ವೃತ್ತಿಯನ್ನು ಕಲಿಸಿರುವನು.

ಮಯನು ಪಾಂಡವರೊಡನೆ ಹೀಗೆಂದನು. ಒಂದಾನೊಂದು ಕಾಲದಲ್ಲಿ ಬಿಂದುಸರಸ್ಸಿನ ತಡಿಯಲ್ಲಿ ದಾನವರು ಒಂದು ಯಜ್ಞವನ್ನಾಚರಿಸಿದರು. ಆಸಮಯದಲ್ಲಿ ನಾನು ಅನೇಕ ರತ್ನರಾಶಿಗಳನ್ನು ಸಂಗ್ರಹಿಸಿಟ್ಟಿದ್ದೆನು. ಆ ಸರೋವರದಲ್ಲಿ ದಾನವಾಧಿಪತಿಯದಾದ ಒಂದು ಮಹಾಗದೆಯೂ ವರುಣನ ದೇವದತ್ತವೆಂಬ ಮಹಾಶಂಖವೂ ಇರುವುವು. ಅವುಗಳನ್ನು ನಿಮಗೆ ತಂದುಕೊಡುವೆನು. ಹೀಗೆ ಹೇಳಿ ಮಯನು ಹೊರಟು ಅವೆಲ್ಲವನ್ನೂ ತಂದು ಗದೆಯನ್ನು ಭೀಮಸೇನನಿಗೂ ಶಂಖವನ್ನು ಅರ್ಜುನನಿಗೂ ಕೊಟ್ಟು ರತ್ನಗಳನ್ನೆಲ್ಲಾ ಅತಿವಿಚಿತ್ರವಾಗಿ ಸಭಾ ಮಂದಿರದ ನಿರ್ಮಾಣದಲ್ಲಿ ವಿನಿಯೋಗಿಸಿದನು.

ಆ ಸಭೆಯು ಬಂಗಾರದ ಗೋಡೆಗಳಿಂದಲೂ, ಚಿನ್ನದ ಕಂಬಗಳ ಮೇಲೆ ನಿಲ್ಲಿಸಲ್ಪಟ್ಟ ರತ್ನಖಚಿತಗಳಾದ ಕಮಾನುಗಳಿಂದಲೂ ಸ್ಫಟಿಕಮಯಗಳಾದ ಸೋಪಾನಗಳಿಂದಲೂ ಪ್ರಕಾಶಿಸುವ ಸರೋವರಗಳಲ್ಲಿ ತೇಲಾಡುವರತ್ನಕುಸುಮಗಳಿಂದಲೂ ಮುತ್ತುಗಳ ಗೊಂಚಲುಗಳಿಂದ ಕೂಡಿ ಪಚ್ಚೆ ಮುಂತಾದ ಕಲ್ಲುಗಳಿಂದಲೂ ಪ್ರಕಾಶಿಸುವ ವೇದಿಕೆಗಳಿಂದಲೂ ವಿರಾಜಮಾನವಾಗಿತ್ತು. ಅದರ ಸುತ್ತಲೂ ಸುವಾಸನೆಯಿಂದ ಘಮಘಮಿಸುವ ಪುಷ್ಪಗಳಿಂದಲಂಕೃತಗಳಾದ ಗಿಡಗಳೂ, ಹಂಸೆ ಮೊದಲಾದ ಜಲಪಕ್ಷಿಗಳಿಂದಲೂ ಕಮಲಕಲ್ಹಾರಗಳಿಂದಲೂ ಅಂದವಾಗಿರುವ ಕೊಳಗಳೂ ದೃಷ್ಟಿಗೋಚರಗಳಾಗಿದ್ದುವು. ಹದಿನಾಲ್ಕು ತಿಂಗಳುಗಳಲ್ಲಿ ಮಯನು ಇಂತಹ ಅಸದೃಶವಾದ ಸಭಾಮಂದಿರವನ್ನು ನಿರ್ಮಿಸಿದನು. ಪಾಂಡವರು ಮಹೋತ್ಸವದಿಂದ ಅದನ್ನು ಪ್ರವೇಶಮಾಡುವ ಸಮಯದಲ್ಲಿ ನಾನಾದೇಶಗಳಿಂದ ಅನೇಕಮಂದಿ ನೃಪಾಲಕರು ಬಂದಿದ್ದರು. ಈ ಪರ್ವದ ಪ್ರಸಿದ್ಧವಾದ ಮೂರುಸಭೆಗಳ ಪೈಕಿ ಇದೇ ಮೊದಲನೆಯದು.

ಅನಂತರ ದೇವರ್ಷಿಯಾದ ನಾರದನು ಅಲ್ಲಿಗೆ ಬರಲು ಧರ್ಮವಿದನಾದ ಯುಧಿಷ್ಠಿರನು ಆತನ ಆಗಮನವನ್ನು ನೋಡಿ ತಮ್ಮಂದಿರೊಡನೆ ಪ್ರತ್ಯುತ್ಥಾನ ಮಾಡಿ ಅತ್ಯಂತ ಪ್ರೀತಿಯಿಂದಲೂ ವಿನಯದಿಂದಲೂ ಕೂಡಿ ನಮಸ್ಕರಿಸಿ ಯಥೋಚಿತವಾಗಿ ಆತನನ್ನು ಪೂಜಿಸಿದನು. ನಾರದನು ಆ ದೊರೆಯು ತನ್ನ ಧರ್ಮಗ

ಳನ್ನು ಕ್ರಮವಾಗಿ ಆಚರಿಸುತ್ತಾನೆಯೋ ಎಂಬುದನ್ನು ತಿಳಿಯುವುದಕ್ಕಾಗಿ ಆತನನ್ನು ಕುರಿತು ಕೆಲವು ಪ್ರಶ್ನೆಗಳನ್ನು ಮಾಡಿದನು. ಭೂಪಾಲಕನು ತನ್ನ ದೇಶಸ್ಥರಾದ ಸರ್ವರಲ್ಲಿಯೂ ಅಗ್ರಗಣ್ಯನಾಗಿ ವಿಷ್ಣುವಿಗೆ ಸಮಾನನಾದವನೆಂದು ಆರ್ಯರ ಶಾಸ್ತ್ರಗಳು ಹೇಳುತಿರುವವು. ಅವನು ನೆರವೇರಿಸಬೇಕಾದ ಕರ್ತವ್ಯವು ಅತ್ಯಂತ ದುರ್ಭರವಾದುದರಿಂದಲೂ ಅವನಿಗಿರತಕ್ಕ ಜವಾಬುದಾರಿಯು ಅತಿವಿಶೇಷವಾದುದರಿಂದಲೂ ಸರ್ವಕಾಲದಲ್ಲಿಯೂ ತುಂಬಾ ಶ್ರಮಪಟ್ಟು ಅವನು ಕೆಲಸ ಮಾಡಬೇಕಾಗಿದೆ. ನೃಪತಿಯು ಗುಣವಂತನಾಗಿದ್ದುದಾದರೆ ಪ್ರಜೆಗಳು ಕ್ಷೇಮವುಳ್ಳವರಾಗಿರುವರು. ಆದುದರಿಂದಲೇ ಪ್ರಜೆಗಳ ಕ್ಷೇಮಲಾಭಕ್ಕೆ ಇವನೇ ಗೊತ್ತುಗಾರನು. ರಾಷ್ಟ್ರಕ್ಕೆಲ್ಲಾ ಶುಭವುಂಟಾಗುವಂತೆ ಆಚರಿಸತಕ್ಕುದೇ ರಾಜಧರ್ಮವು. ಭೀಷ್ಮನು ರಾಜಧರ್ಮಗಳ ವಿಚಾರವಾಗಿ ಮಾಡುವ ಪ್ರಶಂಸೆಯನ್ನು ರಾಜಧರ್ಮಪರ್ವದಲ್ಲಿ ತಿಳಿಯೋಣ. ಈಗ ನಾರದನು ಧರ್ಮಜನನ್ನು ಕೇಳಿದ ಪ್ರಶ್ನೆಗಳನ್ನು ಕೇಳಿರಿ, ಧರ್ಮಾರ್ಥಕಾಮಗಳೊಂದೊಂದಕ್ಕೂ ವಿರೋಧಬಾರದಂತೆ ಚೆನ್ನಾಗಿ ತಿಳಿದು ವಿಭಜನೆಮಾಡಿ ಅವುಗಳಿಗೆ ತಕ್ಕ ಕಾಲಗಳನ್ನು ಗೊತ್ತುಮಾಡಿ ಆಯಾಸಮಯಗಳಲ್ಲಿ ಅವನ್ನು ನಡೆಸುತ್ತಿರುವೆಯಾ ? ಜ್ಞಾನಸಂಪನ್ನರಾದವರನ್ನು ಮಂತ್ರಿಪದವಿಯಲ್ಲಿಟ್ಟುಕೊಂಡಿರುವೆಯಾ? ಸೇನೆಗಳಿಗೆ ಕ್ಲುಪ್ತಕಾಲದಲ್ಲಿ ಸಂಬಳಗಳನ್ನು ಕೊಡುತ್ತಿರುವೆಯಾ ? ಯುದ್ಧದಲ್ಲಿ ನಿನಗೋಸ್ಕರ ಮೃತರಾದ ವೀರರ ಪತ್ನೀಪುತ್ರರನ್ನು ಪ್ರೇಮದಿಂದ ಪೋಷಿಸುವೆಯಾ ? ನಿನ್ನಿಂದ ಪರಾಜಿತರಾದ ಶತ್ರುಗಳನ್ನು ಕಾಪಾಡುತ್ತಿರುವೆಯಾ ? ಪ್ರಜೆಗಳೆಲ್ಲರೂ ತಮ್ಮ ತಂದೆ ತಾಯಿಗಳ ಬಳಿಗೆ ಹೋಗುವಂತೆ ಏನೊಂದಡ್ಡಿಯೂ ಇಲ್ಲದೆ ನಿನ್ನಲ್ಲಿಗೆ ಬರುತ್ತಿರುವರೇ ? ಉತ್ಪತ್ತಿಯಲ್ಲಿ ಖರ್ಚುಜಾತಾ ಮುಕ್ಕಾಲನ್ನಾಗಲೀ ಮೂರರಲ್ಲಿ ಎರಡು ಭಾಗವನ್ನಾಗಲೀ ಕಡೇಪಕ್ಷ ಅರ್ಧವನ್ನಾಗಲೀ ಉಳಿಸುತ್ತೀಯಾ ? ಕೃಷಿಯಿಂದ ಜೀವಿಸುವ ರೈತರು ಸದಾಸಂತುಷ್ಟರಾಗಿರುವರೇ ? ವ್ಯವಸಾಯಕ್ಕೆ ದೈವಿಕವಾದ ವರ್ಷವನ್ನೇ ಆಧಾರವಾಗಿ ಮಾಡಿರದೆ ದೇಶದಲ್ಲಿ ಅಲ್ಲಲ್ಲಿ ಜಲಪೂರಿತಗಳಾದ ದೊಡ್ಡ ದೊಡ್ಡ ಕೆರೆಗಳನ್ನು ಕಲ್ಪಿಸಿರುವೆಯಾ ? ವ್ಯವಸಾಯಗಾರರು ಬೀಜಕ್ಕೂ ತಿಂಡಿಗೂ ಕೊರತೆಯಿಲ್ಲದೆ ಜೀವನ ಮಾಡುತ್ತಿರುವರೇ ? ಅವರಿಗೆ ಬೀಜಗಳನ್ನು ಎರವಾಗಿ ಕೊಡುವಿಯಾ ? ಕೃಷಿಯೂ, ವಾಣಿಜ್ಯವೂ, ಗೋರಕ್ಷ

ಣೆಯೂ, ಹಣವನ್ನು ಬಡ್ಡಿಗೆ ಕೊಡುವಿಕೆ ಇವೆಲ್ಲವೂ ಧರ್ಮದಿಂದ ನಡೆಯುತ್ತಿರುವುವೇ? ಲೋಭ, ಮೋಹ, ಗರ್ವ ಈ ಯಾವುದರ ಮೂಲಕವಾಗಿ ಯಾಗಲೀ ನ್ಯಾಯಕ್ಕೆ ಲೋಪಬರುತ್ತದೆಯೇ? ನಿನ್ನ ಮಂತ್ರಿಗಳು ಮತ್ತು ಅಧಿಕಾರಿಗಳು ಲಂಚವನ್ನು ತೆಗೆದುಕೊಳ್ಳುವವರಲ್ಲವೇ? ಪ್ರಜೆಗಳಿಂದ ಸುಂಕವನ್ನು ತೆಗೆದುಕೊಳ್ಳುವುದರಲ್ಲೇನಾದರೂ ಅನ್ಯಾಯ ನಡೆಯುತ್ತದೆಯೇ? ಶಿಲ್ಪಿಗಳಿಗೆ ನಾಲ್ಕು ತಿಂಗಳಿಗೊಂದುಸಾರಿಯಾದರೂ ಸಂಬಳವನ್ನೂ ದ್ರವ್ಯೋಪಕರಣಗಳನ್ನೂ ಕೊಡುತ್ತಿರುವೆಯಾ? † ಅಗ್ನಿ ಚೋರಾದಿಗಳಿಂದ ಭಯವುಂಟಾಗದಿರುವಂತೆ ನಿನ್ನ ದೇಶವನ್ನು ಕಾಪಾಡುತ್ತಿರುವೆಯಾ? ಕುರುಡರು, ಕುಂಟರು, ಮೂಗರು, ಅಂಗಹೀನರು, ದಿಕ್ಕಿಲ್ಲದವರು, ಸನ್ಯಾಸಿಗಳು ಇವರುಗಳನ್ನು ನಿನ್ನ ಮಕ್ಕಳಂತೆ ಕಾಪಾಡುತ್ತಿರುವೆಯಾ? ಹೆಚ್ಚು ನಿದ್ರೆ, ಸೋಮಾರಿತನ, ಭಯ, ಕೋಪ, ದೀನತ್ವ, ದೀರ್ಘಸೂತ್ರತೆಗಳೆಂಬ ಈ ಆರು ಅನರ್ಥಗಳನ್ನು ದೂರಮಾಡಿರುವೆಯಾ? ಎಂದು ಈ ರೀತಿಯಲ್ಲಿ ಅನೇಕ ವಿಧವಾಗಿ ಕೇಳಲು ಯುಧಿಷ್ಠಿರನು ಆ ಮುನಿನಾಥನ ಚರಣಾರವಿಂದಗಳಿಗೆ ನಮ್ರತೆಯೊಡನೆ ನಮಸ್ಕರಿಸಿ ಮಹಾತ್ಮಾ! ನೀನು ಕೇಳಿದ ಧರ್ಮಗಳನ್ನೆಲ್ಲಾ ಮಾಡಲು ಯತ್ನಿಸಿರುವೆನೆಂದು ಬಿನ್ನವಿಸಲು ನಾರದನು ಅಷ್ಟದಿಕ್ಪಾಲಕರ ಸಭೆಗಳನ್ನು ವರ್ಣಿಸಿದನು. ಆತನ ವಾಕ್ಯಗಳಿಂದ ಇಂದ್ರನ ಸಭೆಯಲ್ಲಿ ಪೃಥ್ವೀಪಾಲಕರ ಪೈಕಿ ಹರಿಶ್ಚಂದ್ರನೊಬ್ಬನೇ ವಾಸಿಸುತ್ತಿರುವುದನ್ನು ತಿಳಿದು ಧರ್ಮಜನು ಆ ರಾಜನ ಮಹಿಮೆಗಳನ್ನು ಕುರಿತು ಮತ್ತೂ ತನ್ನ ತಂದೆಯಾದ ಪಾಂಡುರಾಜನ ವೃತ್ತಾಂತವನ್ನೂ ಪ್ರಶ್ನೆಮಾಡಲು ನಾರದನಿಂತೆಂದನು. ಹರಿಶ್ಚಂದ್ರನು ರಾಜಸೂಯಯಾಗವನ್ನು ಮಾಡಿ ಇಂದ್ರಲೋಕ ವಾಸವನ್ನು ಪಡೆದನು. ನೀನೂ ಆತನಂತೆಯೇ ಭೂಮಿಯೆಲ್ಲವನ್ನೂ ಜಯಿಸಿ ರಾಜಸೂಯಯಾಗವನ್ನು ಮಾಡಿದೆಯಾದರೆ ನಿನ್ನ ಪ್ರಭಾವವನ್ನು ತಾನೂ ಹೊಂದಿ ಸ್ವರ್ಗದಲ್ಲಿ ವಾಸಮಾಡಬಲ್ಲೆನೆಂದು ಪಾಂಡುರಾಜನು ನಿನಗೆ ಹೇಳೆಂದನು. ಆದರೂ ಈ ಯಾಗವನ್ನು ಮಾಡುವುದು ಎಷ್ಟೋ ಕಷ್ಟವಾದ ಕೆಲಸ. ಇದನ್ನು ಮಾಡಲು ಉಪಕ್ರಮಿಸಿದ ದೊರೆಯು ತನ್ನ ಚಕ್ರವರ್ತಿತ್ವವನ್ನು ಪ್ರಕಟಿಸಲು ಆತನು ಧರ್ಮಪರನೂ ಪರಾಕ್ರಮಶಾಲಿಯೂ ಆಗಿರದಿದ್ದಲ್ಲಿ ಇತರ ರಾಜರು ಆತನಿಗೆ ಒಳಗಾ

† ಆ ಕಾಲದಲ್ಲಿ ಶಿಲ್ಪಿಗಳಿಗೂ ಮತ್ತು ಕೂಲಿಯವರಿಗೂ ಅನ್ನವನ್ನು ಹಾಕಿ ಮೇಲೆ ಬಟ್ಟೆ ಮುಂತಾದುದಕ್ಕೆ ಆಗಾಗ್ಗೆ ಸಂಬಳಕೊಡುತ್ತಿದ್ದ ಪದ್ಧತಿಯಿತ್ತೆಂದು ತೋರುತ್ತೆ.

ಗರು. ಎಂದು ಹೇಳಿ ನಾರದನು ಅಲ್ಲಿಂದ ಹೊರಟು ಹೋದನು. ಯುಧಿಷ್ಠಿರನು ಮಂತ್ರಿಗಳೊಡನೆ ಕೂಡಿ ತಾನು ಅಂತಹ ಮಹಾಕ್ರತುವನ್ನು ಮಾಡಲು ಯೋಗ್ಯನೇ ಎಂದು ಆಲೋಚಿಸತೊಡಗಿದನು. ಆತನು ನ್ಯಾಯಪಥವನ್ನು ತಪ್ಪದೇ ಪ್ರಜಾಪಾಲನ ಮಾಡುವುದಕ್ಕೆ ಆತನ ರಾಷ್ಟ್ರದ ಸುಖಸ್ಥಿತಿಯೇ ಸಾಕ್ಷಿಯು. ಆತನು ಪ್ರಜೆಗಳಲ್ಲಿ ಯಾವಾಗಲೂ ಅನುರಕ್ತನಾಗಿದ್ದು ಯಾರಲ್ಲಿಯೂ ಭೇದ ಬುದ್ಧಿಯನ್ನುಂಟುಮಾಡದೇ ಅವರ ಮೇಲಿಗಾಗಿಯೇ ಪ್ರಯತ್ನಪಡುತ್ತಿದ್ದನು. ಆತನಿಗೆ ಶತ್ರುಗಳು ಯಾರೂ ಇಲ್ಲದಿದ್ದುದರಿಂದ ಜನಗಳು ಆತನನ್ನು ಅಜಾತ ಶತ್ರುವೆಂದು ಹೇಳುತ್ತಿದ್ದರು. ಆತನು ಎಲ್ಲರನ್ನೂ ತನ್ನ ಕುಟುಂಬದಂತೆಯೇ ಸಂರಕ್ಷಿಸುತ್ತಿದ್ದನು. ಆತನ ತಮ್ಮಂದಿರೂ ಭಕ್ತಿಯುಕ್ತರಾಗಿ ಆತನಿಗೆ ಎಲ್ಲಾ ಕಾಲದಲ್ಲಿಯೂ ಎಲ್ಲಾ ಕೆಲಸಗಳಲ್ಲಿಯೂ ಸಹಾಯಕರಾಗಿಯೇ ಇರುತ್ತಿದ್ದರು. ಹೀಗಿದ್ದುದರಿಂದ ರಾಜ್ಯದಲ್ಲಿ ಕಲಹಗಳಾಗಲೀ ಯಾವ ವಿಧವಾದ ಭಯಗಳಾಗಲೀ ಇಲ್ಲದೆ ಜನಗಳು ತಮ್ಮತಮ್ಮ ಕಾರ್ಯಗಳನ್ನು ಚೆನ್ನಾಗಿ ಅನುಷ್ಠಿಸುತ್ತಿದ್ದರು. ಪ್ರಜೆಗಳ ಮನಸ್ಸು ತೃಪ್ತಿಯಾಗುವಂತೆ ಮಳೆಯು ಸುರಿಯುತ್ತಿತ್ತು. ರಾಜ್ಯದಲ್ಲಿ ಸಂಪತ್ತು ಹೆಚ್ಚಿತು. ಯುಧಿಷ್ಠಿರನು ಸತ್ಯಸಂಧನಾಗಿದ್ದುದರಿಂದ ಆತನ ರಾಜ್ಯದಲ್ಲಿ ಯಾವಾಗಲೂ ಕಳ್ಳತನ, ಮೋಸ, ಕಾಠಿನ್ಯದಿಂದ ಮತ್ತೊಬ್ಬರ ಒಡವೆಯನ್ನು ಅಪಹರಿಸುವಿಕೆ, ಬಲವಂತದಿಂದ ಕಂದಾಯವಸೂಲಿ, ರೋಗಾಗ್ನಿಭಯಗಳು, ವಿಷಪ್ರಯೋಗ, ಶೂನ್ಯಗಳಿಂದ ಮರಣಗಳು ಇವು ಯಾವುವೂ ಇರಲಿಲ್ಲ. ಆದುದರಿಂದ ಧರ್ಮತನಯನ ಮಂತ್ರಿಗಳು ಆತನನ್ನು ಕುರಿತು ರಾಜಸೂಯಯಾಗವನ್ನು ನೀನು ಮಾಡಲು ಯೋಗ್ಯನೆಂದು ಏಕವಾಕ್ಯದಿಂದ ಹೇಳಿದರು. ಹೀಗಾದರೂ ಆತನು ಈ ವಿಷಯವನ್ನು ಚೆನ್ನಾಗಿ ಪರ್ಯಾಲೋಚಿಸಿ ತನ್ನ ಉಪಪತ್ತಿಯನ್ನು ಯೋಚಿಸಿ ‘ ಅವಸರಪಡದೇ ಆಲೋಚಿಸಿ ಕಾರ್ಯಗಳನ್ನು ಮಾಡುವ ಬುದ್ಧಿವಂತರಿಗೆ ಯಾವಾಗಲೂ ಆಪತ್ತುಗಳು ಉಂಟಾಗವು ’ ಎಂದು, ತಿಳಿದು ತನ್ನ ತಮ್ಮಂದಿರಲ್ಲಿಯೂ ಯೋಚಿಸಿ, ಕೊನೆಗೆ ಶ್ರೀ ಕೃಷ್ಣನಿಗಿಂತಲೂ ತನಗೆ ಯಾರೂ ಆಪ್ತರು ಇಲ್ಲದುದರಿಂದ ಆತನಿಗೆ ಈ ವೃತ್ತಾಂತವನ್ನು ತಿಳಿಸಲು ಆತನನ್ನು ಕರೆಯಿಸಿಕೊಳ್ಳಬೇಕೆಂದು ನಿಶ್ಚಯಮಾಡಿದನು.

ಶ್ರೀ ಕೃಷ್ಣನು ತನ್ನ ಸ್ನೇಹಿತನ ಕೋರಿಕೆಯನ್ನು ತಿಳಿದು ಹೊರಟುಬಂದು ಆತನು ಯಾಗವನ್ನು ಮಾಡಲು ಯತ್ನಿಸಿರುವುದನ್ನು ತಿಳಿದು ಆತನನ್ನು ಕುರಿತು

"ನೀನು ಮಾಡುವ ಈ ಯಾಗಕ್ಕೆ ಒಂದೇ ದೊಡ್ಡವಿಘ್ನವುಂಟು. ನೀನು ಈ ಯಾಗವನ್ನು ಮಾಡಲರ್ಹನಾದಾಗ್ಯೂ ಎಲ್ಲಾ ನೃಪಾಲರೂ ತಮಗಿಂತಲೂ ನೀನು ದೊಡ್ಡವನೆಂದು ಒಪ್ಪಿಕೊಂಡರೆ ಮಾತ್ರ ಇದನ್ನು ಆಚರಿಸಬಹುದು. ಮಹಾ ಪರಾಕ್ರಮ ಶಾಲಿಯಾದ ಜರಾಸಂಧನೆಂಬ ರಾಜನು ನಿನ್ನ ದೊಡ್ಡಸ್ತಿಕೆಗೆ ಒಪ್ಪಿ ಕೊಳ್ಳಲಾರನು. ಆ ಭೂಪಾಲಕನು ನೂರು ಮಂದಿ ರಾಜರುಗಳನ್ನು ಕೊಂದು ಕಠೋರವಾದ ಒಂದು ನರಮೇಧಯಾಗವನ್ನು ಮಾಡಲುಯತ್ನಿಸಿರುವನು. ಈಗ್ಯೆ ಆತನು ಎಂಬತ್ತಾರುಮಂದಿ ರಾಜರುಗಳನ್ನು ಜಯಿಸಿ ಅವರುಗಳನ್ನು ಸೆರೆಯಲ್ಲಿ ಟ್ಟಿರುವನು. ಆತನ ಕೆಲಸಕ್ಕೆ ಇನ್ನು ಹದಿನಾಲ್ಕು ಮಂದಿ ರಾಜರು ಕಡಮೆಯಾ ಗಿರುವರು. ಆ ಜರಾಸಂಧನನ್ನು ಕೊಂದು ಅಂತಹ ಪಾಪಕೃತ್ಯವನ್ನು ನಿವಾರಿಸಿ ದವನಿಗೆ ಶಾಶ್ವತವಾದ ಕೀರ್ತಿಯುಂಟಾಗುವುದಾದಕಾರಣ ಅವನನ್ನು ನೀನು ಗೆಲ್ಲಬೇಕು. ಇದೇ ವಿಘ್ನವು; ಎಂದುಹೇಳಿ ಆ ಕೆಲಸಕ್ಕೆ ಪಾಂಡವರನ್ನು ಸಮ್ಮತಿ ಪಡಿಸಿ ಸ್ವಲ್ಪ ವಿಚಾರಮಾಡುತ್ತಾ ಜರಾಸಂಧನು ಹೆಚ್ಚು ಪರಾಕ್ರಮಶಾಲಿಯಾ ದುದರಿಂದ ಸೇನೆಯೊಡನೆ ಕೂಡಿ ಆತನೊಡನೆ ಯುದ್ಧಮಾಡುವುದು ಸಾರ್ಥಕ ವೆಂದು ತಿಳಿದು ಪುನಃ ಶ್ರೀ ಕೃಷ್ಣನು ಹೀಗೆಂದು ಹೇಳಿದನು.

ಅವನನ್ನು ಜಯಿಸಲು ತಕ್ಕ ನೀತಿಯು ನನ್ನಲ್ಲಿಯೂ ತಕ್ಕ ಪರಾಕ್ರಮವು ಭೀಮನಲ್ಲಿಯೂ ವಿಜಯವು ಅರ್ಜುನನಲ್ಲಿಯೂ ಇರುವುದರಿಂದ ಭೀಮಾರ್ಜುನ ರನ್ನು ಕರೆದುಕೊಂಡು ನಾನು ಆತನ ಬಳಿಗೆ ಹೋಗುವೆನು ಎಂದು ಹೇಳಲು ಯುಧಿಷ್ಠಿರನು ಹಾಗೆ ಹೋಗುವುದು ಅಪಾಯಕರವೆಂದು ಪ್ರತಿಯಾಗಿ ಹೇಳಲು ಅದಕ್ಕೆ ಕಮಲನಾಭನಿಂತೆಂದನು. ನೀನು ನನ್ನಲ್ಲಿ ನಂಬಿಕೆಯುಳ್ಳವನಾದರೆ ಜಾಗ್ರತೆಯಿಂದ ಭೀಮಾರ್ಜುನರನ್ನು ನನ್ನ ಭರವಸೆಯ ಮೇಲೆ ನನ್ನ ವಶಮಾಡು, ಎಂದಮಾತನ್ನು ಕೇಳಿ ಧರ್ಮತನಯನು ಪ್ರೀತಿಯೊಡನೆ ಕೂಡಿ ಆತನೊಡನೆ ಹೀಗೆಂದನು. ನಾನು ನಿನ್ನ ಅಪ್ಪಣೆಯನ್ನು ನಡೆಸತಕ್ಕವನು. ಅರ್ಜುನನು ನಿನ್ನ ಹಿಂದೆಯೂ ಭೀಮನು ಅರ್ಜುನನ ಹಿಂದೆಯೂ ಹೊರಡುವವರಾಗಿ. ನೀತಿಯೂ ಬಲವೂ ಜಯವೂ ಒಂದಾಗಿ ಕೂಡಿದಲ್ಲಿ ಕಾರ್ಯವು ಕೈಗೂಡುವುದು ಯಥಾ ರ್ಥವು, ಎಂದು ಹೇಳಿ ಆ ಮೂವರನ್ನೂ ಕಳುಹಿಸಿಕೊಟ್ಟನು. ಅವರುಗಳು ಸ್ನಾತಕ ಬ್ರಾಹ್ಮಣರ ವೇಷವನ್ನು ಧರಿಸಿ ತೆರಳಿ ಜರಾಸಂಧನ ರಾಜಧಾನಿಯಾದ ಮಗಧಪಟ್ಟಣವನ್ನು ಸೇರಿದರು. ಅಲ್ಲಿನ ಪುರಜನಗಳು ಪೂಜಿಸುತ್ತಿದ್ದ ಒಂದು

ಪರ್ವತಶಿಖರವನ್ನು ಒಡೆದುಹಾಕಿ ಬ್ರಾಹ್ಮಣರ ಸದಾಚಾರಕ್ಕೆ ವಿರೋಧವಾಗಿ ವಕ್ರವಾದ ಮಾರ್ಗದಿಂದ ಆ ಪಟ್ಟಣವನ್ನು ಪ್ರವೇಶಿಸಿ ವಿಪಣಿಯಲ್ಲಿ ಹೊರಟು ಪುಷ್ಪಮಾಲಿಕೆಗಳನ್ನೂ ವಸ್ತ್ರಗಳನ್ನೂ ಬೇಕಾದಷ್ಟು ಅಂಗಡಿಯವರಿಂದ ಕಿತ್ತು ಕೊಂಡು ತಮ್ಮ ಶರೀರಗಳನ್ನು ಅಲಂಕರಿಸಿಕೊಂಡು ಅರಮನೆಗೆ ಪ್ರವೇಶಿಸಿದರು. ಜರಾಸಂಧನು ಅವರುಗಳನ್ನು ನೋಡಿ ಬ್ರಾಹ್ಮಣರೆಂದು ಭಾವಿಸಿ ಜಾಗ್ರತೆಯಿಂ ದೆದ್ದು ಅರ್ಘ್ಯಪಾದ್ಯಾದ್ಯುಪಚಾರಗಳನ್ನು ಮಾಡತೊಡಗಲು ಅವರು ಆತನ ಪೂಜೆಗಳನ್ನು ಸ್ವೀಕರಿಸಲಿಲ್ಲ. ಕೃಷ್ಣನು ಅವನನ್ನು ನೋಡಿ ನೀನು ಈದಿನ ಅರ್ಧ ರಾತ್ರಿಯ ಸಮಯಕ್ಕೆ ನಮ್ಮ ಬಳಿಗೆ ಬರಬೇಕೆಂದು ಹೇಳಲು ಆ ನೃಪತಿಯು ತಪ್ಪದೇ ಆ ಸಮಯಕ್ಕೆ ಅವರ ಬಳಿಗೆ ಬಂದು ನಿಮ್ಮ ನಡವಳಿಕೆಗಳು ವಿಲಕ್ಷಣ ವಾಗಿರುವವು. ಸ್ನಾತಕಬ್ರಾಹ್ಮಣರು ಅತಿಕ್ರಮದಿಂದ ಸಂಪಾದಿಸಿದ ಗಂಧಪುಷ್ಪ ಗಳನ್ನು ಧರಿಸಿಕೊಳ್ಳುವುದೂ ಪರ್ವತಗಳನ್ನು ಒಡೆದುಹಾಕುವುದೂ ಬಲಾತ್ಕಾರ ದಿಂದ ಪಟ್ಟಣವನ್ನು ಪ್ರವೇಶಮಾಡುವುದೂ ಎಲ್ಲಿಯೂ ಇಲ್ಲ. ನಿಮ್ಮ ವೃತ್ತಾಂತ ವೇನೆಂಬುದನ್ನು ತಿಳಿಸಬೇಕೆನ್ನಲು ಕೃಷ್ಣನು ಗಂಭೀರವಾದ ವಚನಗಳಿಂದ ಹೀಗೆಂ ದನು. ಬ್ರಾಹ್ಮಣರಂತೆ ಕ್ಷತ್ರಿಯ ವೈಶ್ಯರೂ ಸ್ನಾತಕವ್ರತವನ್ನಾಚರಿಸ ಬಹು ದೆಂತಲೂ ಪುಷ್ಪಮಾಲಿಕೆಯು ಸಂಪತ್ಸೂಚಕವೆಂತಲೂ ಶತ್ರುವಿನ ಮನೆಯನ್ನು ವಕ್ರಮಾರ್ಗದಿಂದಲೇ ಪ್ರವೇಶಿಸುವುದು ಸಹಜವೆಂತಲೂ ತಮಗೆ ಬೇಕಾದ ಕೆಲಸ ಕ್ಕಾಗಿಯೇ ಹೀಗೆ ಶತ್ರುವಿನ ಮನೆಯನ್ನು ಪ್ರವೇಶಿಸಿರುವುದರಿಂದ ಇವನು ಮಾಡಿದ ಪೂಜೆಗಳನ್ನು ಸ್ವೀಕರಿಸುವುದಿಲ್ಲವೆಂತಲೂ ಹೇಳಲು ಜರಾಸಂಧನು ಗಾಬರಿಹೊಂದಿ ನಾನು ಏನಪರಾಧವನ್ನಾಚರಿಸಿದೆನೆಂದು ಕೇಳಿದನು. ಅದಕ್ಕೆ ಕೃಷ್ಣನು "ನೀನು ಮನುಷ್ಯರನ್ನು ರುದ್ರನಿಗೆ ಬಲಿಕೊಡಲುಯತ್ನಿಸಿರುವುದೇ ನಿನ್ನ ಅಪರಾಧವು. ನಾವು ಇದನ್ನು ನಿವಾರಿಸಲು ಬಂದಿರುವೆವು. ನಾನು ಕೃಷ್ಣನು; ಇವರು ಮಹಾ ಪರಾಕ್ರಮಶಾಲಿಗಳಾದ ಭೀಮಾರ್ಜುನರು. ಮಗಧಾಧಿಪತಿಯೇ! ಈಗಲೇ ನಿನ್ನನ್ನು ನಮ್ಮೊಡನೆ ಯುದ್ಧಕ್ಕೆ ಕರೆಯುತ್ತಿರುವೆವು. ನಮ್ಮೊಡನೆ ನಿಂತು ಯುದ್ಧಮಾಡುವವನಾಗು. ದೊರೆಗಳೆಲ್ಲರನ್ನೂ ಸೆರೆಯಿಂದ ಬಿಡುವುದ ನ್ನಾಗಲೀ ಯಮಸದನವನ್ನು ಸೇರುವುದನ್ನಾಗಲೀ ನಿರ್ಣಯಮಾಡಿಕೋ" ಎಂದು ಹೇಳಿದನು. ಇದನ್ನು ಕೇಳಿ ಜರಾಸಂಧನು ಅವರೊಡನೆ ಯುದ್ಧಮಾ

ಡಲು ಒಪ್ಪಿದವನಾಗಿ ತನ್ನ ಮಗನಿಗೆ ರಾಜ್ಯಾಧಿಪತ್ಯವನ್ನು ಒಪ್ಪಿಸಿ ದ್ವಂದ್ವಯುದ್ಧಕ್ಕೆ ಭೀಮನನ್ನು ಕೋರಿದನು. ಅನಂತರ ಅವರಿಬ್ಬರಿಗೂ ಹದಿನಾಲ್ಕು ದಿನಗಳು ಮಲ್ಲಯುದ್ಧವು ಜರುಗಲು ಭೀಮಸೇನನು ಯುಕ್ತಿಯಿಂದಲೂ ಬಲದಿಂದಲೂ ಅವನನ್ನು ಹೊಂಚಿ ಹಿಡಿದುಕೊಂಡು ಗರಗರನೆ ತಿರುಗಿಸಿ ನೆಲದ ಮೇಲೆ ಅಪ್ಪಳಿಸಿ ತನ್ನ ಮೊಣಕಾಲಿನಿಂದ ಅವನ ಬೆನ್ನನ್ನು ಮುರಿದು ಬಿಸಾಟನು. ಹೀಗೆ ವಿಜಯವನ್ನು ಹೊಂದಿ ಶ್ರೀ ಕೃಷ್ಣನು ಸೆರೆಯಲ್ಲಿದ್ದ ಭೂಪಾಲಕರೆಲ್ಲರನ್ನೂ ಬಿಟ್ಟು ಕಳುಹಿಸಿ ಭೀಮಾರ್ಜುನರೊಡನೆ ಕೂಡಿ ಜರಾಸಂಧನ ದಿವ್ಯವಿಮಾನಾರೂಢನಾಗಿ ಯುಧಿಷ್ಠಿರನ ಸಮೀಪಕ್ಕೆ ಬಂದನು. ಆ ದೊರೆಗಳೆಲ್ಲರೂ, ಜರಾಸಂಧನ ಮಗನೂ ಸಹ ಧರ್ಮರಾಯನನ್ನು ತಮ್ಮ ಅಧಿರಾಜನನ್ನಾಗಿ ಒಪ್ಪಿಕೊಂಡರು.

ಅನಂತರ ದಿಗ್ವಿಜಯವನ್ನು ಮಾಡಲು ಅರ್ಜುನನು ಉತ್ತರ ದಿಕ್ಕಿಗೂ ಭೀಮನು ಪೂರ್ವದಿಕ್ಕಿಗೂ ಸಹದೇವನು ದಕ್ಷಿಣಕ್ಕೂ ನಕುಲನು ಪಡುವಣ ದಿಕ್ಕಿಗೂ ಸೇನೆಗಳೊಡನೆ ಹೊರಟು ಸಮಸ್ತ ಭೂಪಾಲಕರನ್ನೂ ಧರ್ಮರಾಯನಿಗೆ ಅಧೀನರನ್ನಾಗಿ ಮಾಡಿ ಅವರುಗಳಿಂದ ಅಪರಿಮಿತಗಳಾದ ಧನಗಳನ್ನು ಕಪ್ಪವಾಗಿ ತೆಗೆದುಕೊಂಡು ಬಂದು ಅಣ್ಣನಿಗೆ ಸಮರ್ಪಿಸಿದರು. ಪಾಂಡವರಿಗೆ ಅಜೇಯವಾದ ಬಲವುಂಟಾದಬಗೆಯೆಂತೆಂದರೆ:—ಆ ನಾಲ್ವರು ತಮ್ಮಂದಿರೂ ಏನುಮಾಡಿದರೂ ಯಾವುದನ್ನು ಜಯಿಸಿದರೂ ಯಾವವಸ್ತುವನ್ನು ತೆಗೆದುಕೊಂಡು ಬಂದರೂ ತಮ್ಮಣ್ಣನಿಗೆ ಸಮರ್ಪಿಸುತ್ತಿದರು. ಆದುದರಿಂದಲೇ ಅವರು ರಾಜಸೂಯಯಾಗವನ್ನು ಮಾಡಲು ಶಕ್ತರಾದರು.

ಮಹಾಭಾರತವನ್ನು ಓದುವಲ್ಲಿ ಪೂರ್ವಕಾಲದಲ್ಲಿ ಪರಲೋಕಸಾಧನಗಳನ್ನು ಮೊದಲನೆಯದನ್ನಾಗಿಯೂ ಇಹಲೋಕ ಸೌಖ್ಯಗಳನ್ನು ಎರಡನೆಯದನ್ನಾಗಿಯೂ ಜನಗಳು ಭಾವಿಸುತ್ತಿದ್ದ ಈ ಹಿಂದೂ ದೇಶವು ಎಷ್ಟು ಭಾಗ್ಯವುಳ್ಳದ್ದಾಗಿತ್ತೋ ಎಂದು ಸದಾಸ್ಮೃತಿಗೆ ಬರುತ್ತಿರುವುದು. ಅಂತಹ ಮತವಿಷಯವಾದ ಮೇಲ್ಮೆಯು ದೂರವಾದ ಪ್ರಯುಕ್ತ ಈ ದೇಶವು ದುರ್ಬಲವಾಗಿ ಕ್ರಮತಪ್ಪಲು ಪರರಾಜರುಗಳು ಈ ದೇಶವನ್ನು ಸ್ವಾಧೀನಪಡಿಸಿಕೊಂಡು ಇಲ್ಲಿನ ಧನಗಳನ್ನು ಕ್ರಮವಾಗಿ ಸೂರೆಗೊಂಡರು. ಪೂರ್ವದಲ್ಲಿ ದೊಡ್ಡ ಅರಮನೆಗಳು ಚಿನ್ನ ಬೆಳ್ಳಿ ಮುಂತಾದ ಉತ್ತಮ ಲೋಹಗಳಿಂದಲೂ ರತ್ನಗಳಿಂದಲೂ ನಿರ್ಮಿತವಾದ ಗೋಡೆಗಳುಳ್ಳವಾಗಿಯೂ, ಬಂಗಾರದ ತಂತಿಗಳಿಂದ ಮಾಡಲ್ಪಟ್ಟ ಕಿಟಿಕಿಗಳುಳ್ಳವಾಗಿಯೂ, ಮುತ್ತುಗಳ ಗೊಂಚಲುಗಳಿಂದಲಂಕೃತವಾದ ಅಂಗಳಗಳಿಂದಲೂ, ಸ್ಫಟಿಕಗಳಿಂದ ನಿರ್ಮಿತವಾಗಿ ರತ್ನ ಕಂಬಳಿಗಳಿಂದಲಂಕೃತಗಳಾದ ಜಗಲಿಗಳಿಂದ ಕೂಡಿಯೂ ಪ್ರಕಾಶಿಸುತ್ತಿದ್ದುವೆಂದು ತಿಳಿಯಬರುತ್ತದೆ.

ಯುಧಿಷ್ಠಿರನಿಗೆ ಕಪ್ಪವಾಗಿ ತಂದ ಪದಾರ್ಥಗಳನ್ನು ನೋಡಿರಿ. ಅನೇಕ ರತ್ನರಾಶಿಗಳನ್ನೂ ದ್ರವ್ಯಸಮೂಹಗಳನ್ನೂ ಬಂಗಾರದ ಪಾತ್ರೆಗಳನ್ನೂ ಸುವರ್ಣದ ಉಪಕರಣಗಳನ್ನೂ ರತ್ನಗಳನ್ನು ಕೆತ್ತಿರುವ ದಂತದ ಪಿಡಿಗಳಿಂದ ವಿರಾಜಮಾನಗಳಾದ ಕತ್ತಿಗಳನ್ನೂ ಕನಕಕವಚಗಳನ್ನೂ ದಿವ್ಯಾಲಂಕಾರಶೋಭಿತಗಳಾದ ರಥಗಳನ್ನೂ ಅತ್ಯಂತ ಶೋಭಾಯಮಾನವಾದ ಊರ್ಣವಸ್ತ್ರಗಳನ್ನೂ ನಾರಿನಿಂದಲೂ ರೇಷ್ಮೆಯಿಂದಲೂ ತಯಾರುಮಾಡಲ್ಪಟ್ಟ ವಸ್ತ್ರಗಳನ್ನೂ ಮೇಲಾದ ರತ್ನಕಂಬಳಿಗಳನ್ನೂ ಅನರ್ಘ್ಯಗಳಾದ ಹಾಸಿಗೆಗಳನ್ನೂ ಜರತಾರಿವಸ್ತ್ರಗಳನ್ನೂ ಸುಗಂಧದ್ರವ್ಯಗಳನ್ನೂ ಸುಗಂಧವುಳ್ಳ ಚಕ್ಕೆಗಳನ್ನೂ ಉತ್ತಮವಾದ ಜಮಖಾನೆ ಮೊದಲಾದವುಗಳನ್ನೂ ದಿವ್ಯವಾದ ವಸ್ತ್ರಾಭರಣಗಳಿಂದ ಅಲಂಕರಿಸಲ್ಪಟ್ಟ ಅನೇಕ ಸಹಸ್ರಆನೆಗಳನ್ನೂ ಕುದುರೆಗಳನ್ನೂ ಉತ್ತಮಾಶ್ವಗಳನ್ನೂ ಹೇಸರಕತ್ತೆಗಳನ್ನೂ ಯುಧಿಷ್ಠಿರನಿಗೆ ರಾಜರು ಕಪ್ಪವಾಗಿ ತಂದೊಪ್ಪಿಸಿದರು.

ಎಲ್ಲಿ ನೋಡಿದರೂ ಮನೋಹರಗಳಾದ ಶಿಲ್ಪಿಚಾತುರ್ಯಗಳಿಂದ ಯುಕ್ತಗಳಾದ ಕಟ್ಟಡಗಳು ಹೇಳಲಸಾಧ್ಯವಾದ ಐಶ್ವರ್ಯಗಳಿಂದ ವಿರಾಜಮಾನಗಳಾಗಿದ್ದುವು. ಪೂರ್ವಕಾಲದಲ್ಲಿ ಈ ದೇಶವು ಅತ್ಯುನ್ನತ ನಾಗರೀಕಸ್ಥಿತಿಯನ್ನು ಹೊಂದಿತ್ತೆಂತಲೂ ಅಸಂಖ್ಯಾತವಾದ ದ್ರವ್ಯವನ್ನು ಪಡೆದಿತ್ತೆಂತಲೂ ಮಹತ್ತಾದ ಆರೋಗ್ಯಾದಿ ಸಂಪತ್ತನ್ನುಳ್ಳದಾಗಿತ್ತೆಂತಲೂ ಸ್ಪಷ್ಟವಾಗಿ ಗೊತ್ತಾಗುತ್ತದೆ.

ಇದಲ್ಲದೆ ಸಾಮಾನ್ಯಜನಗಳು ಧನವಂತರಾಗಿಯೂ ಸೌಖ್ಯವುಳ್ಳವರಾಗಿಯೂ ಇರುತ್ತಿದ್ದರೆಂದು ತಿಳಿಯಬರುವುದು. ಅಂಗಡಿಗಳಲ್ಲಿ ಪದಾರ್ಥಸಮೂಹಗಳು ತುಂಬಿದ್ದುವೆಂಬದಾಗಿಯೂ ಸಂತೋಷಕಾಲಗಳಲ್ಲಿ ಪುರಜನರು ತಮ್ಮ ಮನೆಗಳನ್ನು ಮನೋಹರವಾಗಿ ಅಲಂಕರಿಸುತ್ತಿದ್ದರೆಂಬದಾಗಿಯೂ ತಿಳಿದುಬರುತ್ತದೆ. ಜನಗಳು ದೇವತೆಗಳಲ್ಲಿ ಭಕ್ತಿ, ನಮ್ರತೆ, ವಿಧೇಯತೆ, ಔದಾರ್ಯಗಳನ್ನು ತೋರ್ಪಡಿಸುತ್ತಾ ಅವರ ಅನುಗ್ರಹಗಳನ್ನು ಹೊಂದುವವರಾದರೆ ಅವರಿಗೆ ಇಹಲೋಕಸಂಬಂಧವಾದ ಸಂಪತ್ತುಗಳೂ ಎಲ್ಲಾ ಶುಭಗಳೂ ಉಂಟಾಗುವುವು.

ಆ ಮಹಾಯಜ್ಞಕ್ಕಾಗಿ ನಾಲ್ಕುದಿಕ್ಕಿನ ರಾಜರುಗಳೂ ಬಂದು ಸೇರಿದರು ನಕುಲನು ಹಸ್ತಿನಾಪುರಕ್ಕೆ ಹೊರಟು ಅಲ್ಲಿ ಭೀಷ್ಮ, ಧೃತರಾಷ್ಟ್ರಾದಿಗಳನ್ನು ಕರೆಯಲಾಗಿ ಅಲ್ಲಿಂದ ಅವರೂ ದ್ರೋಣವಿದುರರೂ ಧೃತರಾಷ್ಟ್ರನ

ಪುತ್ರರೂ ಕೃಪ, ಕರ್ಣ ಮೊದಲಾದ ವೀರಶ್ರೇಷ್ಠರೂ ಬಂದರು. ಯುಧಿಷ್ಠಿರನು ಧನಸಮೂಹವನ್ನು ಭೀಷ್ಮ, ದ್ರೋಣ ಮೊದಲಾದ ದೊಡ್ಡವರ ವಶಕ್ಕೆ ಬಿಟ್ಟು ಎಲ್ಲಾ ಕೆಲಸಗಳನ್ನೂ ಕ್ರಮವಾಗಿ ನಡೆಯಿಸಬೇಕೆಂದು ಅವರಿಗೆ ವಿಜ್ಞಾಪಿಸಿದನು. ಯಜ್ಞವು ಪೂರ್ತಿಯಾಗುವವರೆಗೂ ಏನೂ ಕೊರತೆಯಿಲ್ಲದಂತೆ ಜರುಗಿತು. ಕಡೆಯ ದಿನ ಯುಧಿಷ್ಠಿರನು ಚಕ್ರವರ್ತಿಯಾಗಿ ಪಟ್ಟಾಭಿಷಿಕ್ತನಾಗಬೇಕಾದ ಕಾಲವು ನಾರದನು ಈ ಪರ್ವದ ಎರಡನೆಯದಾದ ಈ ಸಭೆಯಲ್ಲಿ ನೆರೆದಿದ್ದ ಈ ಬಹುಮಂದಿ ರಾಜರ ಸಂಘವನ್ನು ನೋಡಿ ದೇವತೆಗಳು ಮನುಷ್ಯರಾಗಿ ಹುಟ್ಟಿರುವುದನ್ನೂ ಶ್ರೀಮನ್ನಾರಾಯಣನೇ ಅವತರಿಸಿರುವುದನ್ನೂ ತಿಳಿದವನಾದುದರಿಂದ ಆ ಸ್ವಾಮಿಯು ಆ ಮಹಾಸಭೆಯಲ್ಲಿರುವ ದುಷ್ಟರನ್ನು ಸಂಹಾರಮಾಡುವನೆಂದು ಮನಸ್ಸಿನಲ್ಲಿ ನೆನೆದು ಯೋಚನಾಕ್ರಾಂತನಾಗಿ ಕುಳಿತಿದ್ದನು. ಮುಂದೆ ನಡೆಯುವ ಯುದ್ಧಕ್ಕೆ ಕಾರಣವು ಇಲ್ಲಿಯೇ ಮೂಡಿತು. ಭೀಷ್ಮನು ರಾಜರುಗಳಲ್ಲಿ ಶ್ರೇಷ್ಠನಾದವನಿಗೆ ಮೊದಲು ಬಹುಮಾನಮಾಡಿ ಉಳಿದವರನ್ನು ಕ್ರಮತಪ್ಪದೇ ಸನ್ಮಾನಿಸಬೇಕೆಂದು ಹೇಳಲು ಧರ್ಮತನಯನು ರಾಜರುಗಳಲ್ಲಿ ಯಾರು ಶ್ರೇಷ್ಠರೆಂದು ಕೇಳಿದನು. ಭೀಷ್ಮನು ಶ್ರೀಕೃಷ್ಣನನ್ನು ತೋರಿಸಿ ತೇಜೋಮಯವಾದ ವಸ್ತುಗಳಲ್ಲೆಲ್ಲಾ ಸೂರ್ಯನು ಹೇಗೆ ಶ್ರೇಷ್ಠನೋ ಹಾಗೆ ಈ ಮಹಾನುಭಾವನು ಇವರೆಲ್ಲರಲ್ಲಿಯೂ ಶ್ರೇಷ್ಠನಾಗಿ ಪ್ರಕಾಶಿಸುತ್ತಿರುವನೆಂದುಹೇಳಲು, ಸಹದೇವನು ಮೊದಲು ಆತನಿಗೆ ಅರ್ಘ್ಯವನ್ನು ಕೊಡಲು, ಕೇಶವನು ಅದನ್ನು ಸ್ವೀಕರಿಸಿದನು. ಅದನ್ನು ನೋಡಿ ಚೇದಿದೇಶಾಧಿಪತಿಯಾದ ಶಿಶುಪಾಲನೆಂಬ ರಾಜನು ಪಟಾಟೋಪದಿಂದ ಧಿಗ್ಗನೆದ್ದು ಪಾಂಡವರನ್ನೂ ಭೀಷ್ಮನನ್ನೂ ನೋಡಿ ಹೀಗೆಂದನು. ನೀವು ಧರ್ಮವನ್ನು ಸ್ವಲ್ಪವಾದರೂ ತಿಳಿದವರಲ್ಲ. ಈ ಕೃಷ್ಣನು ಪಟ್ಟಾಭಿಷಿಕ್ತನಾದ ರಾಜನಲ್ಲ; ಸಿಂಹಾಸನಾಧಿಪತಿಯಲ್ಲ; ವಯೋವೃದ್ಧನೂ ಅಲ್ಲ; ಗುರುವೂ ಅಲ್ಲ; ಪುರೋಹಿತನೂ ಅಲ್ಲ. ಎಲ್ಲಾಭಾಗಗಳಲ್ಲಿಯೂ ಇತರರು ಇವನಿಗಿಂತ ಶ್ರೇಷ್ಠರು. ಹೀಗಿರುವಲ್ಲಿ ರಾಜರುಗಳಾದ ನಮ್ಮೆಲ್ಲರನ್ನೂ ಅವಮಾನಪಡಿಸುವುದಕ್ಕಲ್ಲವೇ ಇವನಿಗೆ ಅರ್ಘ್ಯಸಮರ್ಪಣೆಮಾಡಿದುದು. ಹೀಗೆ ಅವಮಾನ ಪಡಿಸುವುದಕ್ಕೇನೇ ನೀವು ನಮ್ಮನ್ನು ಕರೆಸಿದ್ದು, ಎಂದು ಹೇಳಿ ಶಿಶುಪಾಲನು ಕ್ರೋಧಾವಿಷ್ಟನಾಗಿ ಹೊರಡಲುದ್ಯುಕ್ತನಾದನು. ಇತರರಾಜರು ಇವನನ್ನು ಹಿಂಬಾಲಿಸಿದರು.

ಯುಧಿಷ್ಠಿರನು ಅವನ ಹಿಂದೆ ಹೊರಟು ಪ್ರಸನ್ನನಾಗಬೇಕೆಂದು ಕೇಳಿಕೊಳ್ಳುತ್ತಿರಲು ಭೀಷ್ಮನು ಕ್ರೌರ್ಯದಿಂದ ಈ ರೀತಿ ಗದರಿಸಿಕೊಂಡನು. ಆದಿಪುರುಷನಾದ ಪುರುಷೋತ್ತಮನಿಗೆ ಮಾಡುವ ಪೂಜೆಗಳನ್ನೊಲ್ಲದವನು ನಯೋಕ್ತಿಗಳಿಗೂ ಗೌರವಕ್ಕೂ ಪಾತ್ರನಲ್ಲ, ಎಂದು ಹೇಳಿ ಮನುಷ್ಯಶರೀರವನ್ನು ಹೊಂದಿ ಅಲ್ಲಿದ್ದ ಆ ಭಗವಂತನನ್ನು ಪ್ರೀತಿವಿನಯಗಳೊಡನೆ ಕೂಡಿದ ವಾಕ್ಯಗಳಿಂದ ಹೊಗಳಿದನು. ಸಹದೇವನು ಲೋಕಜನಕನಾದ ಜಗದ್ಗುರುವಾದ ಶ್ರೀಕೃಷ್ಣನ ಪೂಜೆಗಳಿಗೆ ಅಡ್ಡಿಮಾಡುವವರಿದ್ದಲ್ಲಿ ಅವರು ಅವಿವೇಕಿಗಳೆಂದು ಆಕ್ಷೇಪಿಸಿ ಹೇಳಿದನು. ನಕುಲನು ಕಮಲಾಕ್ಷನಾದ ಶ್ರೀಕೃಷ್ಣನನ್ನು ಪೂಜಿಸದಿರುವ ಮನುಷ್ಯರು ಜೀವಶವಗಳಾದುದರಿಂದ ಅಂಥವರು ಸಂಭಾಷಣೆಗೆ ಅರ್ಹರಲ್ಲವೆಂದು ಹೇಳಿದನು. ಇಂತಹ ಮಾತುಗಳು ನಡೆಯಲಾಗಿ ಅಲ್ಲಿ ನೆರೆದಿದ್ದ ರಾಜರುಗಳ ಸಮೂಹದಲ್ಲಿ ಕ್ಷೋಭೆಯೂ ಅಲ್ಲೋಲಕಲ್ಲೋಲವೂ ಉಂಟಾಯಿತು.

ಆ ಸಮಯದಲ್ಲಿ ಆ ಮಹಾಸಭೆಯಲ್ಲಿ ಕಲಕಲಧ್ವನಿಯು ಹುಟ್ಟಿತು. ಆ ಯಜ್ಞಕ್ಕೆ ವಿಘಾತವುಂಟಾಗುತ್ತದೆಯೋ ಏನೋ ಎಂಬದಾಗಿ ಭಯಪಡುತ್ತಿದ್ದ ಧರ್ಮತನಯನನ್ನು ನೋಡಿ ಭೀಷ್ಮನು ಶಾಂತವಚನಗಳಿಂದ ಹೀಗೆಂದನು. ಅಚ್ಯುತನು ಸಿಂಹವನ್ನು ಹೋಲುವವನು. ಸಿಂಹವನ್ನು ನಾಯಿಯು ಸಂಹರಿಸಬಲ್ಲುದೇ? ಎಂದು ಹೇಳಲು ಶಿಶುಪಾಲನು ಬಹಳವಾಗಿ ಸಿಟ್ಟುಗೊಂಡು ಅವರನ್ನು ಪುನಃ ಹೀಯಾಳಿಸತೊಡಗಿದನು. ಭೀಮನು ಅವನಮೇಲೆ ಉರವಣಿಸಲು ಭೀಷ್ಮನು ಆತನನ್ನು ತಡೆದು ಶಿಶುಪಾಲನ ಚರಿತ್ರೆಗಳನ್ನು ಆತನಿಗೆ ತಿಳಿಸಿ ಇಂತೆಂದನು. ಶ್ರೀಕೃಷ್ಣನಿಂದಲೇ ಇವನು ಹತನಾಗಬೇಕು. ಆತನು ಇವನ ನೂರುತಪ್ಪುಗಳನ್ನು ಮನ್ನಿಸುವೆನೆಂದು ಇವನ ತಾಯಿಗೆ ಭಾಷೆಕೊಟ್ಟಿರುವನು ಎಂದು ಹೇಳಿದನು. ಅಷ್ಟರಲ್ಲಿ ಅವರಿಗೆ ವಾಗ್ಯುದ್ಧವು ಪ್ರಬಲವಾಗಲು ಭೀಷ್ಮನು ಎಲ್ಲರಿಗೂ ಕೇಳುವಂತೆ ಹೀಗೆ ಹೇಳಿದನು. ನಾವು ಗೋವಿಂದನನ್ನು ಪೂಜೆಮಾಡುವುದೇ ಸರಿ. ಆದರಿಂದ ಏನಾದರೂ ನಾವು ಅನುಭವಿಸುವೆವು. ಶಿಶುಪಾಲನು ಶ್ರೀಕೃಷ್ಣನಿಂದ ಹತನಾಗುವ ಕಾಲವು ಸಮೀಪಿಸಿದೆಯೆಂದು ಭೀಷ್ಮನು ತಿಳಿದಿದ್ದುದರಿಂದ "ಗತಾಯುಸ್ಕರಾದವರು ಚಕ್ರಗದಾಧಾರಿಯಾದ ಆ ದೇವನೊಡನೆ ಯುದ್ಧಕ್ಕೆ ಸಿದ್ಧರಾಗಲಿ" ಎನ್ನಲು ಶಿಶುಪಾಲನು ಶ್ರೀಕೃಷ್ಣನನ್ನು ಯುದ್ಧಕ್ಕೆ ಕರೆದನು. ಆ ಸಾತ್ವ

ಮಿಯು ಮೃದುನುಡಿಯಿಂದಲೇ ಅವನ ಅಪರಾಧಗಳನ್ನೆಲ್ಲಾ ತಿಳಿಯಪಡಿಸಿ ಆತನ ತಾಯಿಗೆ ಅವನ ನೂರು ಅಪರಾಧಗಳನ್ನು ಮನ್ನಿಸುವುದಾಗಿ ಕೊಟ್ಟಿದ್ದ ಭಾಷೆಯನ್ನು ತಿಳಿಸಿ ಇದುವರೆಗೆ ನೂರು ತಪ್ಪುಗಳನ್ನೂ ಕ್ಷಮಿಸಿರುವೆನೆನ್ನಲು, ಶಿಶುಪಾಲನು ಕಿಡಿಕಿಡಿಪಟ್ಟು ತನ್ನನ್ನು ಹೊಗಳಿಕೊಳ್ಳುತ್ತಿರಲು,ಅಷ್ಟರಲ್ಲಿ ಶ್ರೀಕೃಷ್ಣನು ತನ್ನ ಚಕ್ರವನ್ನು ಧ್ಯಾನಿಸಿದ ಮಾತ್ರಕ್ಕೆ ಚಕ್ರವು ಕೈಗೆ ಬರಲು ಶತ್ರುವಿನ ಮೇಲೆ ಪ್ರಯೋಗಿಸಿ, ಆತನ ತಲೆಯನ್ನು ಛೇದಿಸಲು ಅವನು ಸಿಡಿಲೊಡೆದ ಪರ್ವತದ ತೆರದಲ್ಲಿ ನೆಲದಲ್ಲಿ ಬಿದ್ದನು. ಈ ರೀತಿ ಅವನು ನಾಶವಾಗಲು ಆ ಸಭೆಯಲ್ಲಿ ಶಾಂತಿಯುಂಟಾಯಿತು. ಅನಂತರ ಆ ಮಹಾಯಜ್ಞವನ್ನು ಶ್ರೀಕೃಷ್ಣನು ಕೊನೆಯವರೆಗೂ ನಡೆಯಿಸಲು ಧರ್ಮತನಯನನ್ನು ಎಲ್ಲಾನರಪತಿಗಳೂ ಚಕ್ರವರ್ತಿಯನ್ನಾಗಿ ಒಪ್ಪಿಕೊಂಡು ಗೌರವಿಸಿ ತಮ್ಮತಮ್ಮ ದೇಶಗಳಿಗೆ ತೆರಳಿದರು. ಪದ್ಮನಾಭನೂ ದ್ವಾರಕೆಗೆ ತೆರಳಿದನು. ವ್ಯಾಸಋಷಿಯು ಇನ್ನು ದುಷ್ಟಕಾಲಪ್ರಾಪ್ತವಾಗುವುದೆಂದೂ ಈತನೊಡನೆ ಕ್ಷತ್ರಿಯರು ದ್ವೇಷಮಾಡಿ ನಷ್ಟವಾಗುವರೆಂದೂ ಯುಧಿಷ್ಠಿರನಿಗೆ ತಿಳಿಸಿ ತೆರಳಿದನು. ಆ ಮಾತನ್ನಾಲಿಸಿ ಯುಧಿಷ್ಠಿರನು ಚಕ್ರವರ್ತಿಯಾಗಿ ಮಹಾಪ್ರಾಭವದಿಂದಿದ್ದರೂ ಮನಸ್ಸಿನಲ್ಲಿ ಚಿಂತೆಹೊಂದಿದವನಾಗಿ ಏನು ಕಾರಣವುಂಟಾಗಿ ಅದರಿಂದ ಯುದ್ಧಪ್ರಾಪ್ತವಾಗುವುದೋ ಎಂದು ತಲ್ಲಣಹೊಂದಿ ಕಠಿಣೋಕ್ತಿಯನ್ನಾಡುವುದಿಲ್ಲವೆಂದು ಪಂತಮಾಡಿಕೊಂಡನು.

ದುರ್ಯೋಧನನು ಕೆಲವುದಿನ ಪಾಂಡವರೊಡನಿದ್ದು ಒಂದುದಿನ ಶಕುನಿಯೂ ತಾನೂ ಮಯನಿರ್ಮಿತವಾಗಿ ರಾಜಿಸುತ್ತಿರುವ ಆ ಸಭಾಮಂದಿರವನ್ನು ನೋಡಲೆಣಿಸಿ ಮಯನು ಮಾಡಿರುವ ತಂತ್ರಗಳನ್ನು ತಿಳಿಯಲಾರದೇ ಅಲ್ಲಿ ಅನೇಕವೇಳೆ ಮೋಸಹೋದನು. ಒಂದು ಸ್ಥಳದಲ್ಲಿ ಸ್ಫಟಿಕಮಯವಾದ ಪ್ರದೇಶವನ್ನು ನೋಡಿ ನೀರೆಂದು ಭಾವಿಸಿ ಉಟ್ಟಿದ್ದವಸ್ತ್ರವನ್ನು ಮೇಲಕ್ಕೆತ್ತಿಕೊಂಡು ಮುಂದಕ್ಕೆ ಹೋದನು. ಇನ್ನೊಂದುಕಡೆಯಲ್ಲಿ ಒಂದು ಸರೋವರವನ್ನು ಸ್ಫಟಿಕತಲವೆಂದು ಭಾವಿಸಿ ನೀರಿನಲ್ಲಿ ಬಿದ್ದನು. ಮತ್ತೊಂದುಸ್ಥಳದಲ್ಲಿ ಸ್ಫಟಿಕನಿರ್ಮಿತವಾದ ಬಾಗಿಲಿರುವಲ್ಲಿ ಬಯಲೆಂದು ಭಾವಿಸಿ ಹೊರಕ್ಕೆ ಹೋಗಲೆಣಿಸಿ ತಲೆಯನ್ನು ತಗುಲಿಸಿಕೊಂಡನು. ಮತ್ತೊಂದುಕಡೆ ಬಯಲಾಗಿರಲು ಸ್ಫಟಿಕದ ಬಾಗಿಲಿದೆಯೆಂದು ತಿಳಿದು ತೆರೆಯಲು ಕಾಲನ್ನು ಮುಂದಿಟ್ಟು ಮುಂದಕ್ಕೆ ಧೊಪ್ಪನೆ ಬಿದ್ದನು. ಇದೆ

ಕ್ಷಿವನ್ನೂ ನೋಡಿದ ಭೀಮಾರ್ಜುನರೂ, ಯಮಳರೂ, ಕಾವಲಿದ್ದ ಜನಗಳೂ, ಭಂಟರೂ ಕಲಕಲಧ್ವನಿಯಿಂದ ನಗಲು ದುರ್ಯೋಧನನು ಕೋಪಗೊಂಡನು. ಕೊನೆಗೆ ಆತನು ಕೋಪವನ್ನೂ ಅಸೂಯೆಯನ್ನೂ ಹೊಂದಿದವನಾಗಿ ತನ್ನ ಪಟ್ಟಣ ವನ್ನು ಸೇರಿ ತನ್ನ ಸೋದರಮಾವನೂ ಗಾಂಧಾರದೇಶಾಧೀಶ್ವರನೂ ಆದ ಶಕುನಿ ಯೊಡನೆ ತಾನು ಹೊಂದಿದ ಭಂಗಗಳನ್ನೆಲ್ಲಾ ಹೇಳಿ ಹೀಗೆಂದನು. ಪಾಂಡವರಿಂದ ಹೀಗೆ ಅವಮಾನವನ್ನು ಹೊಂದಿ ನಾನು ಇನ್ನು ಬದುಕಲೇಕೆ? ಅವರ ಸಾರ್ವಭೌ ಮತ್ವವನ್ನೂ ಅವರ ಸಂಪತ್ತುಗಳನ್ನೂ ಅವರು ಮಾಡಿದ ರಾಜಸೂಯಯಾಗ ವನ್ನೂ ನೋಡಿದಲ್ಲಿ ಯಾವನಿಗೆ ತಾನೆ ಸಹಿಸುವುದು ? ದಿನದಿನಕ್ಕೂ ಧೃತರಾಷ್ಟ್ರ ಪುತ್ರರು ಕೃಶರಾಗುತ್ತಿರಲು ಕುಂತೀತನಯರು ಸೌಭಾಗ್ಯಯುಕ್ತರಾಗುತ್ತಿರುವ ರಲ್ಲವೇ ? ಎನ್ನಲು ಶಕುನಿಯು ಆತನನ್ನು ಸಮಾಧಾನಪಡಿಸುತ್ತಾ ಹೀಗೆಂದನು. "ಏಕೆ ಹೀಗೆ ದೀನತೆಯನ್ನು ಹೊಂದುವಿ ? ನಿನ್ನ ಸೌಭಾಗ್ಯಕ್ಕೂ ಪರಾಕ್ರಮಕ್ಕೂ ಕೊರತೆಯೇ ? ಇವು ನಿನಗೆ ಸಾಲದೆನ್ನುವುದಾದರೆ ಪಾಂಡವರನ್ನು ಬಾಹುಬಲ ದಿಂದ ಜಯಿಸಲಾಗದಿದ್ದರೂ ಕಪಟದಿಂದ ಅವರನ್ನು ಗೆಲ್ಲಬಹುದು. ಧರ್ಮತನಯ ನಿಗೆ ಜೂಜಾಡುವುದರಲ್ಲಿ ಆಸಕ್ತಿ ಹೆಚ್ಚಾಗಿದ್ದರೂ ಅದರಲ್ಲಿ ಅವನು ಅಷ್ಟು ಚಾತು ರ್ಯವುಳ್ಳವನಲ್ಲ. ಆಡಬೇಕೆಂದು ಕರೆದಲ್ಲಿ ಅವನು ಬರುವುದಿಲ್ಲವೆಂದು ಹೇಳಲಾ ರನು. ನಾನು ಪಗಡೆಯಾಟದಲ್ಲಿ ಕುಶಲನು. ನನ್ನ ಸಮಾನನಾದವನು ಭೂಲೋ ಕದಲ್ಲಿಮಾತ್ರವೇ ಅಲ್ಲದೆ ಮೂರುಲೋಕಗಳಲ್ಲಿಯೂ ಇಲ್ಲ. ಆದುದರಿಂದ ಆತ ನನ್ನು ಜೂಜಾಡುವುದಕ್ಕಾಗಿ ಕರೆಯಿಸು ದಾಳಗಳನ್ನು ಚಮತ್ಕಾರದಿಂದ ಹಾಕಿ ನಾನು ಆತನ ರಾಜ್ಯವನ್ನೂ ಆತನ ವೈಭವವೆಲ್ಲವನ್ನೂ ಜಯಿಸಿ ನಿನಗೆ ಕೊಡುವೆನು. ಇದೆಲ್ಲವನ್ನೂ ನಿನ್ನ ತಂದೆಗೆ ತಿಳಿಸಿ ಆತನ ಅಪ್ಪಣೆಹೊಂದಿ ಹಾಗೆ ನಡೆಯಿಸುವೆನು." ಹೀಗೆ ಶಕುನಿಯು ತನ್ನಳಿಯನಮೇಲಿನ ಪ್ರೀತಿಗಾಗಿ ಇಂತಹ ದುರಾಲೋಚನೆಗಳನ್ನು ಮಾಡಿ ಧೃತರಾಷ್ಟ್ರನ ಬಳಿಗೆಹೋಗಿ ದುರ್ಯೋಧನನ ಮನೋವ್ಯಥೆಯನ್ನು ತಿಳಿಸಿದನು. ಆ ದೊರೆಯು ಮಗನನ್ನು ಕರೆಯಿಸಿ ಆತನ ದುರ್ನಡತೆಗೆ ಕೋಪಿಸಿ ಅದು ಯೋಗ್ಯವಲ್ಲವೆಂದು ಎಷ್ಟು ಹೇಳಿದರೂ ದುರ್ಯೋ ಧನನು ಕೇಳದೆ ಮೂರ್ಖತನದಿಂದ ತನಗೆ ಪಾಂಡವರಲ್ಲಿ ಉಂಟಾದ ಅಸೂಯೆಗೆ ಕಾರಣಗಳನ್ನು ತಿಳಿಯಪಡಿಸಲು ಶಕುನಿಯು ಆ ದೊರೆಯನ್ನು ಕುರಿತು ಯುಧಿ

ಷ್ಠಿರನೊಡನೆ ನಾನು ಜೂಜಾಡಿ ಆತನ ಐಶ್ವರ್ಯವನ್ನೆಲ್ಲಾ ತೆಗೆದುಕೊಳ್ಳಲೇ ಎಂದು ಕೇಳಿದನು. ಧೃತರಾಷ್ಟ್ರನು ವಿದುರನನ್ನು ಕೇಳದೆ ನಾನು ಯಾವುದಕ್ಕೂ ಒಡಂಬಡುವುದಿಲ್ಲ, ಎಂದು ಹೇಳಿ ಆತನನ್ನು ಕರೆಕಳುಹಿಸಲು ದುರ್ಯೋಧನನಿಂತೆಂದನು. ತಂದೇ! ನೀನು ಇದಕ್ಕೊಡಂಬಡುವುದಿಲ್ಲವಾದರೆ ಕೂಡಲೆ ನಾನು ಪ್ರಾಣತ್ಯಾಗಮಾಡುವೆನು. ನಾನು ಸತ್ತಮೇಲೆ ನೀನೂ ವಿದುರನೂ ಸಹ ಸುಖವಾಗಿ ಬಾಳಬಹುದು ಎಂದು ಕಠಿನವಾಗಿ ನುಡಿದನು. ಅಷ್ಟರಲ್ಲಿ ವಿದುರನು ಬರಲು ಧೃತರಾಷ್ಟ್ರನು ಆತನೊಡನೆ ಆ ಸಂಗತಿಗಳನ್ನು ತಿಳಿಯಿಸಿ ಶಕುನಿಯೊಡನೆ ಜೂಜಾಡುವುದಕ್ಕಾಗಿ ಧರ್ಮತನಯನನ್ನು ಕರೆಯಿಸಲು ನಿಶ್ಚಯಮಾಡಿರುವೆನು; ಆತನ ಬಳಿಗೆ ದೂತನನ್ನಾಗಿ ನಿನ್ನನ್ನು ಕಳುಹಿಸುವೆನೆಂದು ಹೇಳಲು ವಿದುರನು ವ್ಯಾಕುಲಚಿತ್ತನಾಗಿ ಭೀಷ್ಮನ ಬಳಿಗೆ ಬಂದನು. ಅಂಧನೃಪತಿಯು ಪುನಃ ತನ್ನ ಮಗನನ್ನು ಕರೆಯಿಸಿ ಅಣ್ಣಾ! ನಿನ್ನ ಸಂಕಲ್ಪವನ್ನು ಬಿಡೆಂದು ಎಷ್ಟು ಕೇಳಿಕೊಂಡರೂ ದುರ್ಯೋಧನನು ಪಾಂಡವರ ಪರಾಕ್ರಮವನ್ನೂ ಐಶ್ವರ್ಯವನ್ನೂ ಕುರಿತು ಮತ್ತೆಮತ್ತೆ ಹೇಳುತ್ತಾ ಅವರ ಅತ್ಯದ್ಭುತವಾದ ಸಭೆಯಲ್ಲಿ ತನಗುಂಟಾದ ಭಂಗಗಳನ್ನು ಒಂದೊಂದನ್ನಾಗಿ ತಿಳಿಸುತ್ತಾ ತಂದೆಯ ಮಾತನ್ನು ಲಕ್ಷ್ಯಮಾಡದಿರಲು ಧೃತರಾಷ್ಟ್ರನಿಂತೆಂದನು. ಪುತ್ರನೇ! ಪಾಂಡವರಲ್ಲಿ ಅಸೂಯೆಪಡುವುದು ತಕ್ಕುದಲ್ಲ. ಅಸೂಯೆಯುಳ್ಳವನು ಯಾವಾಗಲೂ ದುಃಖಗಳಿಗೆ ಗುರಿಯಾಗಿ ಮರಣಕ್ಕೆ ತುತ್ತಾಗುವನು. ಮತ್ತೊಬ್ಬರ ಒಡವೆಗೆ ಆಸೆಪಡುವುದು ಯೋಗ್ಯವಾದ ಕಾರ್ಯವಲ್ಲ. ತನಗಿದ್ದುದರಲ್ಲಿ ತೃಪ್ತಿಹೊಂದುವವನು ಸುಖಿಯಾಗುವನು, ಎಂದು ಎಷ್ಟುಹೇಳಿದರೂ ದುರ್ಯೋಧನನು ಆ ಮಾತುಗಳನ್ನು ಕಿವಿಗೆ ಹಾಕಿಕೊಳ್ಳದೆ ಜೂಜಾಡಲೇಬೇಕೆಂದು ಖಂಡಿತವಾಗಿ ಹೇಳಲು, ಧೃತರಾಷ್ಟ್ರನು ಅದರಿಂದ ಕೇಡುಂಟಾಗುವುದೆಂದು ಹೇಳಿ, ಬಲಾತ್ಕಾರಕ್ಕಾಗಿ ಸಮ್ಮತಿಪಟ್ಟನು. ಧೃತರಾಷ್ಟ್ರನು ಚಪಲಚಿತ್ತನಾದುದರಿಂದ ವಿಧಿಯು ಬಲವಂತವಾದುದೆನುತಲೂ ಮೀರಲು ಸಾಧ್ಯವಲ್ಲದುದೆನುತಲೂ ತಿಳಿದನು. ಮನುಷ್ಯನು ತನ್ನ ವಿಧಿಗೆ ತಾನೇ ಕರ್ತನೆಂದೂ ಪ್ರಾಣವಿರುವವರೆಗೂ ತಾನು ಅದನ್ನು ಕ್ರಮಪಡಿಸಿಕೊಳ್ಳಬಹುದೆನುತ್ತಲೂ ಆ ದೊರೆಯು ತಿಳಿಯದಿದ್ದನು. ವಿದುರನು ಪುನಃ ಹೀಗೆಂದನು. "ನಿನ್ನ ಪ್ರಪಣೆಗೆ ನಾನು ಸಮ್ಮತಿಪಡೆನು. ಹೀಗೆ ನೀನು ಮಾಡಲಾಗದು. ಇದು

ನಮ್ಮ ವಂಶಕ್ಷಯಕ್ಕೆ ಕಾರಣವಾಗಬಹುದು." ಎಂದು ಎಷ್ಟುಹೇಳಿದಾಗ್ಯೂ ತನ್ನ ಅಣ್ಣನೂ ಪ್ರಭುವೂ ಆದ ಧೃತರಾಷ್ಟ್ರನ ಮಾತನ್ನೇ ನಡೆಯಿಸಬೇಕಾಗಿ ಬಂದುದರಿಂದ ವಿದುರನು ಈ ಅಪ್ಪಣೆಯನ್ನು ತೆಗೆದುಕೊಂಡು ಖಾಂಡವಪ್ರಸ್ಥಕ್ಕೆ ಹೊರಡಲು ಪ್ರಯಾಣವಾದನು. ಹೀಗೆ ಅಲ್ಲಿಗೆ ಸೇರಿ ಆ ದೊರೆಯಮಾತನ್ನು ಯುಧಿಷ್ಠಿರನಿಗೆ ತಿಳಿಸಿ ಆತನು ಹೊಸದಾಗಿ ಕಟ್ಟಿಸಿದ್ದ ಪ್ರಾಸಾದಕ್ಕೆ ಬಂದು ತಮಾಷೆಗಾಗಿ ಜೂಜಾಡಲು ಬಾಯೆಂದು ಕರೆಯಲು ಧರ್ಮಜನಿಂತೆಂದನು. ಇದಕ್ಕೆ ನಾನು ಸಮ್ಮತಿಸಲೊಲ್ಲೆನು. ಇದರಿಂದ ಕೇಡೊದಗುವುದು. ನೀನೇನುಹೇಳುವಿ? ಎಂದು ಕೇಳಲು ವಿದುರನು ಹೀಗೆಂದನು. 'ಜೂಜಿನಿಂದ ಕೇಡುಂಟಾಗುವುದು ನಿಶ್ಚಯವು. ಇದು ಕೂಡದೆಂದು ನಾನು ಎಷ್ಟು ನಿವಾರಿಸಿದರೂ ನನ್ನನ್ನು ನಿನ್ನ ಬಳಿಗೆ ಕಳುಹಿಸಿದನು.' ಎನ್ನಲು ಯುಧಿಷ್ಠಿರನು ಯತ್ನವಿಲ್ಲದೇ ಹೀಗೆಂದನು. 'ತತ್ತ್ವವೇದಿಯೇ! ಧೃತರಾಷ್ಟ್ರನ ಅಪ್ಪಣೆಯಂತೆ ನನಗೆ ಜೂಜಾಡಲಿಷ್ಟವಿಲ್ಲದಿದ್ದಾಗ್ಯೂ ಕ್ಷತ್ರಿಯನಾದವನು ಕರೆಯಲ್ಪಟ್ಟು ಒಪ್ಪದಿರುವುದು ಧರ್ಮವಲ್ಲ. ನೀಚನಾದ ಆ ಶಕುನಿಯು ಸಭೆಯಲ್ಲಿ ನನ್ನನ್ನು ಕರೆಯದಿದ್ದರೆ ನಾನು ಆಡುವುದಿಲ್ಲ. ಅವನು ಕರೆದಲ್ಲಿ ನಾನು ಹಿಂಜರಿಯುವುದಿಲ್ಲ. ಇಷ್ಟುಮಟ್ಟಿಗೆ ನನ್ನ ನಿಶ್ಚಯವು.' ಎಂದು ಹೇಳಿ ಬಹಳವಾಗಿ ಮನಸ್ಸಿನಲ್ಲಿ ವ್ಯಾಕುಲಹೊಂದಿದವನಾಗಿ ತಮ್ಮಂದಿರನ್ನೂ ಧರ್ಮಪತ್ನಿಯನ್ನೂ ಕೂಡಿ ಪಟ್ಟಣದಿಂದ ಹೊರಟನು. ಆತನ ಮನಸ್ಸಿನಲ್ಲಿ ಪಗಡೆಯಾಡಬೇಕೆಂಬ ಅಭಿಪ್ರಾಯವು ಪೂರ್ಣವಾಗಿದ್ದಾಗ್ಯೂ ಅದನ್ನ ಣಗಿಸಿಕೊಳ್ಳುತ್ತಿದ್ದನು. ಈ ಗುಣವನ್ನು ಆತನ ಮನಸ್ಸಿನಲ್ಲಿ ಬೇರುಮುಟ್ಟ ಕದಲಿಸುವುದಕ್ಕೂ ಇದರಿಂದುಂಟಾಗುವ ಅನರ್ಥಗಳನ್ನು ಶಾಶ್ವತವಾಗಿ ಲೋಕದ ಜನಗಳಿಗೆ ಚೆನ್ನಾಗಿ ತಿಳಿಯಪಡಿಸುವುದಕ್ಕೂ ದೇವತೆಗಳು ಇಂತಹ ಸಂವಿಧಾನವನ್ನು ಕಲ್ಪಿಸಿದರು. ಪಾಂಡವರು ಹಸ್ತಿನಾಪಟ್ಟಣವನ್ನು ಸೇರಲು ಅವರು ಇಳಿಯುವುದಕ್ಕೆ ಪ್ರತ್ಯೇಕವಾದ ಅರಮನೆಯು ಮಾಡಲ್ಪಟ್ಟಿತು. ಅಲ್ಲಿಯೇ ಪಾಂಡವರಿಗೆ ಕೇಡುತಂದ ಮರುದಿನ ಸಭೆಯು ಜರುಗಿತು. ಯುಕ್ತಿಯುಳ್ಳ ಕಪಟಿಯಾದ ಶಕುನಿಯು ಧರ್ಮತನಯನನ್ನು ಜೂಜಾಡುವುದಕ್ಕಾಗಿ ಕರೆಯಲು ಆತನು ಪ್ರತಿ ಹೇಳುತ್ತಾ ನಿವಾರಿಸಲೆತ್ನಿಸಲು ಶಕುನಿಯಿಂತೆಂದನು. ನಾನು ಗೆಲ್ಲುವೆನೆಂದು ಹೇಳುತ್ತಿರುವೆನು. ನೀನು ಸೋಲುವಿಯಾದರೆ ನಿಲ್ಲಿಸಿಬಿಡೋಣ ಎಂದು ಆತನನ್ನು

ಪ್ರೋತ್ಸಾಹಗೊಳಿಸಲು ಆ ಮಾತುಗಳನ್ನು ಕೇಳಿದ ಧರ್ಮರಾಯನು ಜೂಜಾ ಡಲು ಬರಬೇಕೆಂದು ಕರೆದಲ್ಲಿ ನಾನೆಂದೂ ಬರುವುದಿಲ್ಲವೆಂದು ಹೇಳಿದವನಲ್ಲ. ಇದೇ ನನ್ನ ವ್ರತವೆಂದು ಉತ್ತರಹೇಳಿದನು. ಆತನಿಗೆ ಸರಿತೂಗುವಂತೆ ಪಂತವನ್ನೊಡ್ಡು ವವರು ಇಲ್ಲದಿದ್ದುದರಿಂದ ದುರ್ಯೋಧನನು ತನ್ನ ದ್ರವ್ಯವನ್ನೆಲ್ಲಾ ಒಡ್ಡಿರುವೆನು. ನನಗೆ ಬದಲಾಗಿ ಶಕುನಿಯು ದಾಳಗಳನ್ನು ಹಾಕುವನು, ಎಂದು ಹೇಳಲು ಧರ್ಮತನಯನಿಂತೆಂದನು. ಒಬ್ಬನಿಗೆ ಬದಲಾಗಿ ಮತ್ತೊಬ್ಬನು ಜೂಜಾಡು ವುದು ಯುಕ್ತವಲ್ಲವೆಂದು ದೊಡ್ಡವರು ಹೇಳುವರು. ಇದನ್ನು ನೀನೂ ತಿಳಿದಿ ರುವೆಯಲ್ಲವೆ. ಆದರೂ ನೀನು ಹೀಗೆ ಮಾಡಲಿಷ್ಟವುಳ್ಳವನಾದರೆ ಆಟಕ್ಕೆ ಪ್ರಾರಂ ಭಿಸೋಣವೆಂದನು. ಅನಂತರದಲ್ಲಿ ಆಟವು ಪ್ರಾರಂಭವಾಯಿತು. ಧರ್ಮರಾ ಯನು ಬಂಗಾರದಿಂದ ಕಟ್ಟಿದ್ದ ಒಂದು ಮುತ್ತಿನ ಹಾರವನ್ನೊಡ್ಡಲು ಶಕು ನಿಯು ದಾಳಗಳನ್ನುರುಳಿಸಿ ಇಗೋ ನಾನು ಗೆದ್ದೆನೆಂದನು. ಅನಂತರ ಧರ್ಮರಾ ಜನು ತನ್ನ ಬಂಗಾರ ಬೆಳ್ಳಿ ರತ್ನಗಳು ಮೊದಲಾದ ಧನಸಮೂಹವನ್ನು ಒಡ್ಡಲು ಶಕುನಿಯು ಇಗೋ ನಾನು ಗೆದ್ದೆನೆಂದನು. ಪುನಃ ಧರ್ಮರಾಯನು ತನ್ನ ರಥ ವನ್ನೊಡ್ಡಲು ಶಕುನಿಯು ಕಾಪಟ್ಯದಿಂದ ದಾಳವನ್ನು ಬಿಟ್ಟು ಇಗೋ ನಾನು ಗೆದ್ದೆನೆಂದನು. ಅನಂತರ ಆ ದೊರೆಯು ತನ್ನ ದಾಸೀಜನಗಳನ್ನೊಡ್ಡಲು ಶಕು ನಿಯು ಇಗೋ ನಾನು ಗೆದ್ದಿರುವೆನೆಂದನು. ಸೇವಕರನ್ನೊಡ್ಡಲು ಇಗೋ ನಾನು ಗೆದ್ದಿರುವೆನೆಂದನು. ಯುದ್ಧಚಾತುರ್ಯವನ್ನು ಕಲಿತಿದ್ದ ಆನೆಗಳನ್ನು ಹೆಣ್ಣಾನೆಗಳ ಸಹಿತ ಒಡ್ಡಲು ಶಕುನಿಯು ಇಗೋ ನಾನು ಗೆದ್ದಿರುವೆನೆಂದನು. ಉತ್ತಮಾಶ್ವ ಗಳನ್ನು ಕಟ್ಟಿದ ರಥಗಳನ್ನೂ ಯೋಧರನ್ನೂ ಒಡ್ಡಲು ಶಕುನಿಯು ಇಗೋ ನಾನು ಗೆದ್ದಿರುವೆನೆಂದನು. ದಿವ್ಯಗಳಾದ ಶಾಸ್ತ್ರಶಸ್ತ್ರಗಳನ್ನು ಒಡ್ಡಲು ಶಕುನಿಯು ಇಗೋ ಗೆದ್ದಿರುವೆನೆಂದನು. ವಾಹನಗಳನ್ನೂ ಪರಾಕ್ರಮಿಗಳಾದ ಯೋಧಾಗ್ರೇ ಸರರನ್ನೂ ಒಡ್ಡಲು ಶಕುನಿಯು ಇಗೋ ನಾನು ಗೆದ್ದೆನೆಂದನು. ಅನರ್ಘಭೂಷ ಣಗಳನ್ನೊಡ್ಡಲು ಶಕುನಿಯು ಇಗೋ ನಾನು ಗೆದ್ದಿರುವೆನೆಂದನು.

ಅಷ್ಟರಲ್ಲಿ ವಿದುರನು ಈ ಕೇಡನ್ನು ನೋಡಿ ಸಹಿಸಲಾರದೇ ಧೃತರಾಷ್ಟ್ರ ನನ್ನು ಕುರಿತು ಇಂತೆಂದನು. "ದ್ಯೂತದಿಂದ ತಪ್ಪದೆ ಕಲಹವು ಉಂಟಾಗುವುದು. ಅದರಿಂದ ಕೇಡುದ್ಭವಿಸುವುದು. ಅದರಿಂದುಂಟಾಗುವ ದೋಷಗಳನ್ನು ಯೋಚಿ

ಸಿದರೆ ಭಯವುಂಟಾಗುವುದು. ದುರ್ಯೋಧನನು ಪಾಂಡುಪುತ್ರರೊಡನೆ ಜೂಜಾಡಿ ಗೆಲ್ಲುತಿರುವನೆಂದು ಉಬ್ಬುತ್ತಿರುವಿ. ಇಂತಹ ಗೆಲುವಿನಿಂದಲೇ ಯುದ್ಧಪ್ರಾಪ್ತವಾಗಿ ಜನಕ್ಷಯವಾಗುವುದು. ಪಾಂಡವರ ಐಶ್ವರ್ಯವೆಲ್ಲವನ್ನೂ ಬಾಚಿಕೊಳ್ಳುವುದರಿಂದ ನಿನಗಾಗುವ ಲಾಭವೇನು? ಪಾಂಡವರನ್ನೇ ನಿನ್ನ ವಶರನ್ನಾಗಿ ಮಾಡಿಕೊಳ್ಳುವನಾಗು. ಅವರ ಸರ್ವದ್ರವ್ಯಕ್ಕಿಂತಲೂ ಹೆಚ್ಚಾದ ಸಂಪತ್ತು ನಿನಗೆ ಉಂಟಾಗುವದಿಲ್ಲವೇ? ಸೌಬಲನ ಅಕ್ಷವಿದ್ಯಾಕೌಶಲ್ಯವನ್ನೂ ನಾವು ಬಲ್ಲೆವು. ಈ ಪರ್ವತರಾಜನು ದ್ಯೂತದಲ್ಲಿ ಅನೇಕವಿಧವಾದ ಮೋಸವೃತ್ತಿಗಳನ್ನು ಕಲಿತವನು. ಇವನನ್ನು ಬಂದ ದಾರಿಯಿಂದ ಹೊರಡುವಂತೆ ಕಳುಹಿಸುವವನಾಗು. ಪಾಂಡುಪುತ್ರರೊಡನೆ ಹೋರಾಟ ಸಲ್ಲದು, ಎನ್ನಲು ಇದನ್ನು ಕೇಳಿ ದುರ್ಯೋಧನನು ಹೆಚ್ಚಾಗಿ ಕೋಪವುಳ್ಳವನಾಗಿ ವಿದುರನೊಡನೆ ಹೀಗೆಂದನು. ನೀನು ಕೌರವರಿಗೆ ಸೇವಕನಾಗಿದ್ದರೂ ಪಾಂಡವಪಕ್ಷಪಾತಿಯಾಗಿರುವಿ. ಇನ್ನು ನಮ್ಮೊಡನೆ ನೀನಿರತಕ್ಕದಲ್ಲ. ನಿನಗಿಷ್ಟವಾದಸ್ಥಳಕ್ಕೆ ಹೊರಡುವವನಾಗು. ವ್ಯಭಿಚಾರಿಯಾದ ಹೆಂಡತಿಯನ್ನು ಎಷ್ಟು ಪ್ರೀತಿಯಿಂದ ಮನ್ನಿಸಿದರೂ ಗಂಡನನ್ನು ಬಿಟ್ಟು ಹೋಗುವಳಲ್ಲವೇ? ಎಂದು ದೂಷಣೆಮಾಡಲು ವಿದುರನು ಮನಸ್ಸಿನಲ್ಲಿ ವ್ಯಥೆಹೊಂದಿ ಧೃತರಾಷ್ಟ್ರನನ್ನು ನೋಡಿ ಒಡೆಯನೆಂಬ ಪಕ್ಷಪಾತವನ್ನು ಬಿಟ್ಟು ಸರಿಯಾಗಿಹೇಳಬೇಕೆಂದು ಯೋಚಿಸಿ ದುರ್ಯೋಧನನನ್ನು ಕುರಿತು ಹೀಗೆ ಹೇಳಿದನು. ನಿನ್ನ ನಡತೆಯು ಹೇಗಿದ್ದಾಗ್ಯೂ ಪ್ರಿಯವಚನಗಳಿಂದ ನೀನು ಮೆಚ್ಚುವಿಯಾದರೆ ಅದರಿಂದ ಕೇಡುಸಂಭವಿಸುತ್ತಿದ್ದರೂ ಅಂತಹ ಪ್ರಿಯವಚನಗಳನ್ನೇ ಹೇಳುವರು. ಇಷ್ಟವಾಗಿರುವುದನ್ನು ಹೇಳುವ ಪಾಪಾತ್ಮರು ಈ ಪೃಥ್ವಿಯಲ್ಲಿ ಅನೇಕರಿರುವರು. ಔಷಧದಂತೆ ಅಪ್ರಿಯವಾದಾಗ್ಯೂ ಕೊನೆಗೆ ಹಿತಕರವಾಗಿರುವಂತಹ ಮಾತುಗಳನ್ನು ಹೇಳುವವನೂ ಅದನ್ನು ಕೇಳುವವನೂ ಅಪರೂಪ. ತನ್ನೊಡೆಯನು ಇದನ್ನು ಅಂಗೀಕರಿಸುವನು, ಇದನ್ನಂಗೀಕರಿಸನು ಎಂಬುದನ್ನು ಯೋಚನೆಮಾಡದೆ, ತಾನು ನ್ಯಾಯಪಥವನ್ನು ತಪ್ಪದೇ ಆತನಿಗೆ ಹಿತವುಂಟಾಗುವುದನ್ನು ಅಪ್ರಿಯವಾಗಿ ಕಾಣುತ್ತಿದ್ದರೂ ತಿಳಿಯಪಡಿಸುವವನೇ ದೊರೆಗೆ ನಿಜವಾದ ಮಿತ್ರನು. ಮಹಾಪ್ರಭು! ನೀನು ಸತ್ಪುರುಷರು ಪಾನಮಾಡತಕ್ಕ, ದುಷ್ಟರು ತ್ಯಜಿಸತಕ್ಕ, ಶಾಂತಿಯೆಂಬ ಔಷಧವನ್ನು ಕುಡಿಯುವೆಯಾದರೆ, ಅದನ್ನು ಪಾನಮಾಡುವಾಗ್ಯೆ ವಿಷವಾಗಿದ್ದರೂ ಕಟುವಾಗಿದ್ದರೂ ಬಿಸಿಯಾಗಿ

ದ್ದರೂ ಇಂಪಾಗಿಲ್ಲದಿದ್ದರೂ ಯುಗಟಾಗಿದ್ದರೂ ಪಾನಮಾಡಿದ ತರುವಾಯ ಮತ್ತನ್ನು ಹೋಗಲಾಡಿಸಿ ಸೌಖ್ಯವನ್ನುಂಟುಮಾಡುವುದು. ಇದೇ ನಿನಗೆ ನಮಸ್ಕಾರಗಳು. ಎಂದು ಹೇಳಿ ಮನಸ್ಸಿನಲ್ಲಿ ತಲ್ಲಣಗೊಂಡು ಸುಮ್ಮನಿದ್ದನು.

ಪುನಃ ದ್ಯೂತವು ಆರಂಭವಾಯಿತು. ಪಾಂಡವಾಗ್ರಜನು ತನ್ನಲ್ಲಿದ್ದ ದ್ರವ್ಯವನ್ನೆಲ್ಲಾ ಪಣವಾಗಿ ಒಡ್ಡಲು ಶಕುನಿಯು ಎಂದಿನಂತೆ ಇಗೋ ನಾನು ಗೆದ್ದಿರುವೆನೆಂದನು. ಪಶುಗಳನ್ನೂ ಕುದುರೆಗಳನ್ನೂ ಅಜಾವಿಕಗಳನ್ನೂ ಒಡ್ಡಲು ಶಕುನಿಯು ಇಗೋ ನಾನು ಗೆದ್ದಿರುವೆನೆಂಬ ಮಾತನ್ನೇ ಹೇಳಿದನು. ತನ್ನ ಸಂರಕ್ಷಣೆಯಲ್ಲಿದ್ದ ರಾಜ್ಯದಲ್ಲಿ ಬ್ರಾಹ್ಮಣವೃತ್ತಿಗಳನ್ನು ಬಿಟ್ಟು ಉಳಿದಪಟ್ಟಣಗಳನ್ನೂ ಭೂಮಿಗಳನ್ನೂ ಸರ್ವಪ್ರಜೆಗಳ ಧನಗಳೆಲ್ಲವನ್ನೂ ಒಡ್ಡಲು 'ಇಗೋ ನಾನು ಗೆದ್ದಿರುವೆನು' ಎಂಬುದು ವಿನಹ ಬೇರೇ ಮಾತನ್ನೇ ಹೇಳದಿದ್ದನು. ತನ್ನ ಸಾಮಂತ ನೃಪಾಲಕರನ್ನು ಒಡ್ಡಲು ಶಕುನಿಯು ಇಗೋ ನಾನು ಗೆದ್ದಿರುವೆನೆಂದನು. ಹೀಗೆ ಧರ್ಮಜನು ಸಮಸ್ತವಾದ ಐಶ್ವರ್ಯವನ್ನೂ ಸೇವಕರನ್ನೂ ಪ್ರಜೆಗಳನ್ನೂ ಅಧೀನರಾಜರುಗಳನ್ನೂ ಸೋತವನಾಗಿ ದರಿದ್ರನಾದನು. ಇನ್ನು ತನಗೇನಿರುವುದು ? ಸಹೋದರರಸಂಘವು ಇನ್ನೂ ಅವಿಚ್ಛಿನ್ನವಾಗಿದೆ. ಆದುದರಿಂದ ಇವನು ಕೇವಲ ಶೂನ್ಯನಲ್ಲ. ಅಕ್ಕಟಾ ! ಜೂದಾಳಿಯ ಛಲವು ಅವನಲ್ಲಿ ಏರುತ್ತಾಬಂತು. ಈ ರೀತಿಯಾದ ಕಣ್ಣುಕಾಣದಂತಹ ಸಂದರ್ಭವೊದಗಲು ತನ್ನ ತಮ್ಮಂದಿರ ಕೋಪಕ್ಕೆ ಯೋಚಿಸುತ್ತಾ ಮಾತನಾಡಲು ಒಣಗಿದ ತುಟಿಗಳಿಂದ ಈ ಹುಚ್ಚುಮಾತುಗಳು ಹೊರಟವು. ಮಹಾಬಾಹುವಾದ ಕೆಂಪಾದ ಕಣ್ಣುಗಳುಳ್ಳ ಪರಾಕ್ರಮದಿಂದ ಪ್ರಕಾಶಿಸುವ ಸಿಂಹಸ್ಕಂಧನಾದ ನವಯುವ್ವನದಿಂದ ಪ್ರಕಾಶಿಸುವ ಈ ನಕುಲನು ನನ್ನ ಒಡವೆಯು ; ಇವನನ್ನೊಡ್ಡಿರುವೆನೆನ್ನಲು ಶಕುನಿಯು ವಿಶೇಷವಾದ ಜಯಸೂಚಕವಾದ ಧ್ವನಿಯಿಂದ ಇಗೋ ಇವನೂ ನಮ್ಮಾಧೀನನಾದನೆಂದನು. ಸಹೋದರರ ಸಂಘವು ವಿಚ್ಛಿತ್ತಿಯನ್ನು ಹೊಂದಿತು. ಕೇಡು ಮೇಲೆಮೇಲೆ ಜಾಗ್ರತೆಯಾಗಿ ಬರುತ್ತಿರುವುದು. ಕೂಡಲೆ ಸಹದೇವನು ಹೊಣೆಯಾದನು. ಇಗೋ ನಾನು ಗೆದ್ದಿರುವೆನೆಂಬ ಮಾತೇ ಕೇಳಬಂತು. ಜಯಶೀಲನಾದ ಅರ್ಜುನನನ್ನು ಲೋಕೋತ್ತರವಾದ ಗಾಂಡೀವದೊಡನೆ ಒಡ್ಡಲು 'ಇಗೋ' ನಾನು ಗೆದ್ದಿರುವೆನೆಂಬ ಕಠೋರಧ್ವನಿಯು ಕೇಳಬಂದಿತು. ಪರಾಕ್ರಮಿಯಾದ ಭೀಮನನ್ನೊಡ್ಡಲು

ಶಕುನಿಯು ಇಗೋ ನಾನು ಗೆದ್ದೆನೆಂದು ಹೇಳಿ ಇನ್ನೂ ಸೋಲದಿರುವುದೇನಾದರೂ ಇರುವುದೇ ಎಂದು ಹಾಸ್ಯಮಾಡಿದನು. ಆ ಮಾತುಗಳನ್ನು ಕೇಳಿ ಧರ್ಮತನಯನು ದೀನನಾಗಿ ತನ್ನನ್ನೇ ಒಡ್ಡಲು ಪುನಃ 'ಇಗೋ, ನಾನು ಗೆದ್ದಿರುವೆನು' ಎಂದು ಶಕುನಿಯು ಲಾಘವಮಾಡಿದನು. ಆ ರಾಜಕುಮಾರರು ಐವರೂ ಹೀಗೆ ದರಿದ್ರರಾದುದಲ್ಲದೆ ತಮ್ಮ ಶತ್ರುಗಳಿಗೆ ಭೃತ್ಯರಾದರು. ಇದಕ್ಕಿಂತಲೂ ಕ್ಷತ್ರಿಯರಿಗೆ ಅವಮಾನವಿರುವುದೇ? ಹೀಗೆ ಎಂಥವರಿಗೂ ಉಂಟಾಗಬಾರದಂತಹ ಕೇಡುಗಳು ಸಂಭವಿಸಿದವು. ಇದಕ್ಕಿಂತಲೂ ಹೆಚ್ಚು ಕ್ರೂರವಾದ ವಿಧಿಯು ಅವರಿಗಿನ್ನೇನಿರುವುದು.

ಆ ಸಭೆಯಲ್ಲಿ ಒಬ್ಬರಾದರೂ ಮಾತನಾಡಲಾರದವರಾಗಿ ಮೂಕರಂತಿರಲು ಶಕುನಿಯು ಹೀಗೆ ಹೇಳಿದನು. ಧರ್ಮನಂದನ! ನಿನಗೆ ಪ್ರಿಯತಮವಾದ ಇದುವರೆಗೆ ನಾನು ಗೆಲ್ಲದಿರುವ ದ್ರವ್ಯವೊಂದಿರುವುದು. ಅದು ಯಾವುದೆಂದರೆ ಪಾಂಚಾಲಪುತ್ರಿಯಾದ ದ್ರೌಪದಿಯು. ಆಕೆಯನ್ನು ಪಂಥವಾಗಿಟ್ಟು ಆಡಿ ನೀನು ಸೋತದ್ದನ್ನೆಲ್ಲಾ ಗೆದ್ದುಕೋ' ಎಂದು ನುಡಿದಾಗ ಧರ್ಮಜನ ಎದೆಯು ಝಲ್ಲೆನ್ನಲಾಗಿ ಹಾರಿಬಿದ್ದನು. ಅವನ ಮುಖದಲ್ಲಿ ಖಿನ್ನತೆಯುಂಟಾಗಿ ತನ್ನ ಮನಸ್ಸಿನಲ್ಲಿಯೇ ಈ ರೀತಿ ಯೋಚಿಸಿದನು. ಅಕಟಕಟಾ! ದ್ರೌಪದೀ! ಯಾಜ್ಞಸೇನೀ! ನಿನ್ನ ಅತಿಶಯಲಾವಣ್ಯಕ್ಕೆ ನನ್ನ ಮನಸ್ಸು ನಾಚಿಕೆ ಪಡುವುದಲ್ಲಾ! ನೆರಳಿನೋಪಾದಿಯಲ್ಲಿ ನನ್ನನ್ನು ಬಿಡದೆ ನನಗುಪಚರಿಸುತ್ತಿರುವೆಯಲ್ಲಾ! ಯಾವಾಗಲೂ ನನ್ನನ್ನಾಲಿಂಗಿಸಿ ಸಂತೋಷಪಡುವೆಯಲ್ಲಾ! ನನ್ನ ಮುದ್ದು ಮಗುವಿನ ತಾಯೇ! ನನ್ನ ಕುಲಕ್ಕೆ ಕೀರ್ತಿತರುವ ಸತೀ ತಿಲಕವೇ! ನನ್ನ ಧರ್ಮಪತ್ನೀ! ನಿನ್ನನ್ನು ಪಂಥವಾಗಿ ಒಡ್ಡಬೇಕಾಯಿತಲ್ಲಾ, ಎಂದು ನಿಟ್ಟುಸುರುಗಳನ್ನು ಬಿಡುತ್ತಾ ಹೀಗೆಂದನು. ಸೌಬಲನೇ! ಇಗೋ, ಸಿಂಹಮಧ್ಯೆಯಾದ ದ್ರೌಪದಿಯನ್ನು ಪಂತವಾಗಿ ಒಡ್ಡಿಯಾಡುತ್ತಿರುವೆನು, ಎಂದು ಹೇಳುತ್ತಿರಲು, ಆ ಸಭೆಯಲ್ಲಿ ಕಲಕಲಧ್ವನಿಯುಂಟಾಗಿ ಛೀ! ಛೀ! ಎಂಬ ಶಬ್ದವು ಹುಟ್ಟಿತು. ಅಲ್ಲಿನ ಹಿರಿಯರೆಲ್ಲರೂ ಪಾಂಡವರಿಗುಂಟಾದ ಆಪತ್ತುಗಳನ್ನು ನೋಡಿ ಅವರ ಮೇಲಿನ ಪ್ರೇಮದಿಂದ ಕಣ್ಣಿನಲ್ಲಿ ನೀರು ಸುರಿಸುತ್ತಾ ಅನೇಕ ವಿಧವಾಗಿ ಹಂಬಲಿಸುತ್ತಿದ್ದರು. ದುರ್ಮಾರ್ಗಿಗಳು ಒಬ್ಬರನ್ನೊಬ್ಬರು ನೋಡುತ್ತಾ ನಗುತ್ತಿದ್ದರು. ಆ ಸಮಯದಲ್ಲಿ ಕಟ್ಟಕಡೆಗೆ ಶಕುನಿಯು ಇಗೋ ನಾನು ಗೆದ್ದಿರುವೆನೆಂದು ಸಂತೋಷದಿಂದ ಹೇಳಿದನು.

ಇಲ್ಲಿಗೆ ಎಲ್ಲವೂ ಕೊನೆ ಮುಟ್ಟಿತು. ಆಟವೂ ಮುಗಿಯಿತು. ಪಾಂಡವರು ಇದ್ದು ದೆಲ್ಲವನ್ನೂ ಹೋಗಲಾಡಿಸಿಕೊಂಡರು.

ಅನಂತರ ದುರ್ಯೋಧನನು ಉಲ್ಲಾಸದಿಂದ ಕೂಡಿ ವಿದುರನೊಡನಿಂತೆಂದನು. ನೀನು ಹೋಗಿ ಪಾಂಡವರ ಪ್ರಿಯಪತ್ನಿಯಾದ ದ್ರೌಪದಿಯನ್ನು ಕರೆತರುವನಾಗು. ಅವಳು ನಮ್ಮ ಅರಮನೆಯಲ್ಲಿ ಕಸವನ್ನು ಗುಡಿಸುತ್ತಾ ನಮ್ಮ ದಾಸಿಯರ ಜೊತೆಯಲ್ಲಿರಲಿ, ಎಂದು ಲಾಘವಮಾಡಿ ನುಡಿಯಲು ವಿದುರನು ಅದು ಯೋಗ್ಯವಲ್ಲವೆಂದು ಎಷ್ಟುವಿಧಗಳಿಂದ ಬುದ್ಧಿವಾದ ಹೇಳಿದರೂ ದುರ್ಯೋಧನನು ಆ ಮಾತುಗಳು ಕಿವಿಯಲ್ಲಿ ಬೀಳದವನಂತೆಯೇ ಇದ್ದು ಒಬ್ಬ ಸೇವಕನನ್ನು ಕರೆದು ನೀನು ಹೋಗಿ ದ್ರೌಪದಿಯನ್ನು ಕರೆದುಕೊಂಡು ಬರುವುದೆಂದು ಕಳುಹಿಸಿದನು. ಅವನು ಆ ಮಾತನ್ನು ಕೇಳಿ ಸಿಂಹವಿರುವ ಗುಹೆಯೊಳಕ್ಕೆ ನಾಯಿ ಹೋಗುವ ತೆರದಲ್ಲಿ ಪಾಂಚಾಲಿಯಿದ್ದ ಮನೆಯೊಳಕ್ಕೆ ಪ್ರವೇಶಿಸಿ ಆ ದೇವಿಯನ್ನು ನೋಡಿ ದುರ್ಯೋಧನನು ಜೂಜಿನಲ್ಲಿ ನಿನ್ನನ್ನು ಗೆದ್ದಿರುವನು. ನಿನ್ನನ್ನು ಊಳಿಗದ ಕೆಲಸಗಳಿಗೆ ನಿಯಮಿಸುವನು ಎಂದು ಹೇಳಿದನು. ಆ ಮಾತುಗಳು ನಿಶಿತಗಳಾದ ಬಾಣಗಳಂತೆ ಕಿವಿಯನ್ನು ಪ್ರವೇಶಿಸಿ ಬೆಚ್ಚರಬಿದ್ದು ಬರುಗಿದ ವೃತ್ತಾಂತವೇನೆಂದು ಕೇಳಿದಳು. ಅದಕ್ಕವನು ಧರ್ಮರಾಯನು ಜೂಜಿನಲ್ಲಿ ತನ್ನ ತಮ್ಮಂದಿರನ್ನೂ ಕೂಡಲೆ ತನ್ನನ್ನೂ ಅನಂತರ ನಿನ್ನನ್ನೂ ಒಡ್ಡಿ ಸೋತಿರುವನೆಂದು ಹೇಳಿದನು. ದ್ರೌಪದಿಯು ಸ್ತ್ರೀಚಾತುರ್ಯಮೆರೆಯುವಂತೆ ತಪ್ಪಿಸಿಕೊಳ್ಳಲು ಉಪಾಯ ಹುಡುಕಿ ನೀನುಹೋಗಿ ಮೊದಲು ತನ್ನನ್ನು ಸೋತನೋ ಅಥವಾ ನನ್ನನ್ನು ಸೋತನೋ ತಿಳಿದುಬರುವುದೆಂದು ಕಳುಹಿಸಿದಳು. ಅವನು ಪುನಃ ಬಂದು ಆ ರಮಣಿಯು ಹೇಳಿದಮಾತುಗಳನ್ನು ಕೇಳಲು ಯುಧಿಷ್ಠಿರನು ವ್ಯಸನದಿಂದ ಖಿನ್ನ ಮನಸ್ಕನಾಗಿ ಉತ್ತರಕೊಡದೇ ಹೋದನು. ಅನಂತರದಲ್ಲಿ ದುರ್ಯೋಧನನು ಅವನನ್ನು ಕುರಿತು ಹೀಗೆಂದನು. ನೀನು ಪುನಃ ಹೋಗಿ ದ್ರೌಪದಿಯನ್ನು ಕರೆದುಕೊಂಡು ಬರುವನಾಗು. ಅವಳು ತನಗಿಷ್ಟಬಂದುದನ್ನು ಇಲ್ಲಿಯೇ ಹೇಳಲಿ ಎಂದು ಹೇಳಿಕಳುಹಿಸಲು ಅವನೂ ಅಂತಹ ಕ್ರೂರಕೃತ್ಯಕ್ಕೆ ಹೃದಯದಲ್ಲಿ ತಲ್ಲಣ ಹೊಂದುತಿರುವನಾಗಿ ಹೋಗಿ ಆ ಸತೀಮಣಿಯನ್ನು ತನ್ನ ಹಿಂದೆ ಬರುವುದೆಂದು ಹೇಳಲು ಆ ಮಾನಿನಿಯು ಆತನೊಡನಿಂತೆಂದಳು. ನೀನು ಪುನಃ ಹೋಗಿ ಸಭೆಯ

ಲ್ಲಿರುವ ಹಿರಿಯರನ್ನು ನಾನೇನು ಮಾಡುವುದೆಂದು ಕೇಳು ಅವರೇನು ಮಾಡೆಂದು ಹೇಳಿದರೆ ಅದರಂತೆ ಮಾಡುವೆನು, ಎಂದು ಹೇಳಿಕಳುಹಿಸಲು ಅವನು ಪುನಃ ಬಂದು ದ್ರೌಪದಿಯ ಮಾತುಗಳನ್ನು ಹೇಳಿದನು. ಧರ್ಮತನಯನು ತಾನು ಆ ಸತೀರತ್ನವನ್ನು ಸೋತುದು ಮನಸ್ಸಿಗೆ ಬರಲು ಅವಮಾನಹೊಂದಿದವನಾಗಿ ದ್ರೌಪದಿಯನ್ನು ಕರೆತರುವುದಾಗಿ ಅವನಿಗೆ ಹೇಳಿದನು. ಅವನು ಪುನಃ ಹೇಗೆ ಈ ಸಭೆಯೊಳಕ್ಕೆ ಕರೆತರಲೆಂದು ಮನಸ್ಸಿನಲ್ಲಿ ಸಂಶಯಪಡುತ್ತಿರಲು ಆ ದುಷ್ಟಾತ್ಮನಾದ ದುರ್ಯೋಧನನು ತನ್ನ ತಮ್ಮನಾದ ದುಶ್ಶಾಸನನನ್ನು ಕರೆದು ನೀನು ಹೋಗಿ ಕೃಷ್ಣೆಯನ್ನು ಹಿಡಿದೆಳತರುವುದೆಂದು ಕಳುಹಿಸಿದನು. ದುಶ್ಶಾಸನನು ಈ ಪಾಪಕೃತ್ಯಕ್ಕೆ ಕುತೂಹಲಹೊಂದಿ ಜಾಗ್ರತೆ ಹೊರಟು ಆ ಸಾಧ್ವೀಶಿರೋಮಣಿಯ ಸಮೀಪವನ್ನು ಹೊಂದಿ ಇನ್ನು ನಿನ್ನ ಪಾತಿವ್ರತ್ಯವನ್ನು ದೂರವಾಗಿಟ್ಟು ನನ್ನ ಹಿಂದೆ ಸಭೆಗೆ ಬರುವುದೆಂದು ಅಪ್ಪಣೆಮಾಡಲು ಆ ಲಲನೆಯು ಯತ್ನವಿಲ್ಲದೇ ಹೊರಟುಬಂದು ರಾಜಸ್ತ್ರೀಯರಿದ್ದ ಅಂತಃಪುರವನ್ನು ಪ್ರವೇಶಿಸಿದಳು. ಆ ದುರಾತ್ಮನು ಆ ನಿಂತಂಬಿನಿಯ ಹಿಂದೆ ಹೋಗಿ ಆಕೆಯ ಕುಟಿಲಾಲಕೆಗಳನ್ನು ಹಿಡಿದೆಳದುಕೊಂಡು ಸಭೆಗೆ ಕರೆತಂದನು. ಅಕ್ಕಟಾ! ಗಟ್ಟಿಯಾದ ಗಾಳಿಯೂ ಕೂಡ ಸೋಕದೆಯೂ ಪರರ ಕಣ್ಣಿಗೆ ಗೋಚರವಾಗದೆಯೂ ಅರಮನೆಯಲ್ಲಿದ್ದ ಆ ಸಾಧ್ವೀಶಿರೋಮಣಿಯು ಅಷ್ಟಕ್ಕ ಮುಂಚೆ ರಾಜಸೂಯಯಾಗದಲ್ಲಿ ಅವಭೃಥಸ್ನಾನದಿಂದ ಪಾವನಗಳಾಗಿ ಪ್ರಕಾಶಿಸುವ ತನ್ನ ಮುಂಗೂದಲುಗಳಿಂದ ಸಭೆಗೆ ಸೆಳೆಯಲ್ಪಟ್ಟವಳಾಗಿ ಒಂಟಿಯಾದ ವಸ್ತ್ರವನ್ನು ಧರಿಸಿ ಅರ್ಧವಸ್ತ್ರರಹಿತಳಾಗಿ ನಡುಗುವ ಶರೀರದಿಂದ ಅಲ್ಲಿ ಇತರರ ಕಣ್ಣಿಗೆ ಗೋಚರವಾಗಿ ನಿಂತಳು. ಇಂತಹ ಕಷ್ಟದಿಂದಲೂ ಅಪಮಾನದಿಂದಲೂ ತನ್ನ ಪಾತಿವ್ರತ್ಯವು ಈ ರೀತಿ ಭಂಗವಾಗಲು ಆ ಭಾಮಿನಿಯ ಮನಸ್ಸಿನಲ್ಲಿ ಕೋಪವು ಹೆಚ್ಚಿತು. ಅಲ್ಲಿದ್ದ ಪ್ರಾಜ್ಞರನ್ನೂ ಪರಾಕ್ರಮಿಗಳನ್ನೂ ನೋಡಿ "ನಿಮಗೆ ಅಯೋಗ್ಯಕರವಾದ ಇಂತಹ ದುಷ್ಟಕೃತ್ಯವನ್ನು ನಿಲ್ಲಿಸುವುದಿಲ್ಲವೇ? ಅಕ್ಕಟಾ! ನನ್ನನ್ನು ಈ ದುರಾತ್ಮನು ಹೀಗೆ ತೊಂದರೆಕೊಡುತ್ತಿರಲು ನೀವೆಲ್ಲರೂ ಸುಮ್ಮನೆ ಹೀಗೆ ನೋಡುತ್ತಿರುವುದು ಸರಿಯೇ? ನೀವೆಲ್ಲರೂ ಭೀತರೇ? ಇಂತಹ ಪಾಪಕೃತ್ಯವನ್ನು ಕುರುಶ್ರೇಷ್ಠರಲ್ಲಿ ವೃದ್ಧರೂ ಕೂಡ ನೋಡುತ್ತಾ ಏಕೆ ಸುಮ್ಮನಿರುವರು?" ಎಂದು ಗಟ್ಟಿಯಾಗಿ ಕೂಗಿಕೊಂಡಳು.

ಅಲ್ಲಿ ಆಕೆಯ ಐದುಮಂದಿಪತಿಗಳೂ ಮರಗಳೋಪಾದಿಯಲ್ಲಿ ಕುಳಿತಿದ್ದರು. ಅವರಿಂದ ತನಗೆ ಸಹಾಯವೇನೂ ಇಲ್ಲವೋ ? ಅಕ್ಕಟಾ ! ಅವರು ಧರ್ಮದಿಂದ ಕಟ್ಟುಬಿದ್ದಿದ್ದುದರಿಂದ ದ್ರೌಪದಿಯನ್ನು ಕಾಪಾಡಲು ಅಸಮರ್ಥರಾಗಿದ್ದರು. ದುಶ್ಶಾಸನನು ಅವರು ಸಹಾಯಮಾಡಲಾರರೆಂದು ತಿಳಿದು ಆ ತನ್ವಿಯನ್ನು ಹಿಡಿದೆಳೆದು ದಾಸೀ ! ದಾಸೀ ! ಎಂದು ಕೂಗುತ್ತಾ ಇನ್ನೂ ಗಟ್ಟಿಯಾಗಿ ಕರ್ಣನೂ ಶಕುನಿಯೂ ಕಲಕಲನೆ ನಕ್ಕರು. ಇವರುಗಳೂ ದುಶ್ಶಾಸನ ದುರ್‍ಯೋಧನರೂ ಮಾತ್ರ ಇವಳ ಅವಮಾನದಿಂದ ಸಂತೋಷಹೊಂದಿದರು. ಇದನ್ನು ನೋಡಿ ಆ ಸಮಯದಲ್ಲಿ ಭೀಷ್ಮನು ಶೋಕವ್ಯಾಕುಲಿತಚಿತ್ತನಾಗಿ ಮೃದುಭಾಷೆಯಿಂದಿಂತೆಂದನು. ತಾಯೇ ! ನೀನು ಕೇಳಿದ ಪ್ರಶ್ನೆಗೆ ನಾನು ನಿರ್ಣಯವನ್ನು ಹೇಳಲಾರೆ. ಧರ್ಮಪುತ್ರನು ತನ್ನನ್ನು ಸೋತಬಳಿಕ ತಾನು ಯಾವುದನ್ನೂ ಪಣವಾಗಿಡಲು ಶಕ್ಯನಲ್ಲ. ಆದರೂ ಭಾರ್ಯೆಯು ಯಾವಾಗಲೂ ತನ್ನ ಪ್ರಾಣೇಶ್ವರನ ಅಧೀನಳೆಂದು ತಿಳಿಯುವೆನು. ಈ ಧರ್ಮವನ್ನು ನಾನು ನಿರ್ಣಯಿಸಲಾರೆ. ಎಂದು ಧರ್ಮವಿದನಾದ ಭೀಷ್ಮನು ಹೇಳಿದನು. ಭೀಷ್ಮನೇ ಸಂಶಯಪಡುತ್ತಿರುವಲ್ಲಿ ಇನ್ನಾರಿಗೆ ತಾನೇ ನಿರ್ಣಯಮಾಡಲು ಸಾಮರ್ಥ್ಯವುಂಟು. ಪ್ರಶ್ನೆಗೆ ಉತ್ತರವೇ ಕಾಣಬರಲಿಲ್ಲ. ದುಶ್ಶಾಸನನು ಪುನಃ ಆ ಸುಂದರಿಯನ್ನು ಹಿಂಸಿಸುತಿರಲು ಆ ಘೋರಕೃತ್ಯವನ್ನು ನೋಡಿ ಸೈರಿಸಲಾರದೇ ಭೀಮನು ಕ್ರೋಧಾವಿಷ್ಟನಾಗಿ ತನ್ನ ಅಣ್ಣನನ್ನು ಕುರಿತು ಹೀಗೆ ಹೇಳಿದನು. ಇದು ಏನು ಹುಚ್ಚುತನ ? ತನ್ನ ಉಳಿದ ಸರ್ವಸ್ವವನ್ನಾದರೂ ಸೋಲಬಹುದೇ ಹೊರತು ತನ್ನ ಪತ್ನಿಯನ್ನು ಸೋಲುವುದು ಎಲ್ಲಿಯಾದರೂ ಉಂಟೇ? ಅದಕ್ಕಾಗಿ ನನಗೆ ನಿನ್ನಮೇಲೆ ಕೋಪವುಂಟಾಗಿರುವುದು. ಇಂತಹ ಕೃತ್ಯವನ್ನಾಚರಿಸಿದ ನಿನ್ನ ಕೈಗಳನ್ನು ಸುಡುವೆನು. ಸಹದೇವ, ಬೆಂಕಿಯನ್ನು ತರುವನಾಗು, ಎಂದು ಸಿಂಹಗರ್ಜನೆಯಂತೆ ಭಯಂಕರವಾಗಿ ಮಾತನಾಡಲು ಸಭೆಯಲ್ಲಿದ್ದವರೆಲ್ಲರೂ ಭಯಪಟ್ಟು ಸುಮ್ಮನಿದ್ದರು. ಅಲ್ಲಿದ್ದ ಉತ್ತಮಚರಿತನಾದ ಅರ್ಜುನನು ತನ್ನ ಮನಸ್ಸಿನಲ್ಲಿ ಶಾಂತಿಯನ್ನು ಹೊಂದಿ ಭೀಮಸೇನನನ್ನು ಸಮಾಧಾನಪಡಿಸುತ್ತಾ ಹೀಗೆಂದನು. ಧರ್ಮಜನು ಜೂಜಾಡುವುದರಲ್ಲಿ ತಾನಿಷ್ಟಪಡದಿದ್ದರೂ ಪರರಿಂದ ಕರೆಯಲ್ಪಟ್ಟು ಕ್ಷತ್ರಿಯ ಧರ್ಮೋದ್ಧಾರಕ್ಕಾಗಿ ಜೂಜಾಡಿರುವನೇ ಹೊರತು ಇಷ್ಟಪಟ್ಟು ಜೂಜಾಡಿದವನಲ್ಲ. ಅಲ್ಲದೆ ಎಂಥಪರಾದರೂ ಅಗ್ರಜನನ್ನು ನಿಂದಿಸುವರೇ ಎನ್ನಲು ಭೀಮನು ತನ್ನ ಕೋಪವನ್ನಡಗಿಸಿಕೊಂಡು

ಹೀಗೆಂದನು. ಧನಂಜಯನೇ! ಕ್ಷತ್ರಿಯಧರ್ಮಕ್ಕನುಸಾರವಾಗಿ ಈ ರಾಜನು ಮಾಡಿರುವನೆಂದು ನಾನು ತಿಳಿಯದಿದ್ದಲ್ಲಿ ಈತನ ಕೈಗಳನ್ನು ನನ್ನ ಬಲದಿಂದ ಹಿಡಿದು ಧಗಧಗನುರಿಯುವ ಬೆಂಕಿಯಲ್ಲಿಟ್ಟು ಸುಟ್ಟಿರುತ್ತಿದ್ದೆನೆಂದು ಹೇಳಿದನು.

ಅಷ್ಟರಲ್ಲಿ ದುರ್ಯೋಧನನ ತಮ್ಮಂದಿರಲ್ಲೊಬ್ಬನಾದ ವಿಕರ್ಣನೆಂಬುವನು ಅಲ್ಲಿ ಸಭಾಸದರನ್ನು ನೋಡಿ ದ್ರೌಪದಿಯು ಕೇಳಿದ ಅರ್ಥವನ್ನು ನೀವು ತಪ್ಪದೇ ನಿರ್ಣಯಿಸಿರೈ ಎಂದು ಕೇಳಲು ಯಾರೊಬ್ಬರೂ ಬದಲು ಹೇಳದೆ ಸುಮ್ಮನಿದ್ದರು. ಆಗ ಅವನು ದ್ರೌಪದಿಯು ಧರ್ಮದಿಂದ ಜಯಿಸಲ್ಪಟ್ಟವಳಲ್ಲವೆಂದು ನಾನು ನಿರ್ಣಯಿಸಿರುವೆನೆಂದು ಹೇಳಿದನು. ಆ ಮಾತುಗಳನ್ನು ಕೇಳಿ ಅಲ್ಲಿದ್ದ ದೊರೆಗಳೆಲ್ಲರೂ ಸರಿಯೆಂದು ಒಪ್ಪಿ ಆತನನ್ನು ಹೊಗಳಲು ಅದನ್ನು ಕೇಳಲಿಷ್ಟಪಡದೆ ಕರ್ಣನು ದೊಡ್ಡವರೆಲ್ಲಾ ಸುಮ್ಮನಿರಲು ಹುಡುಗನಾದ ನೀನೇಕೆ ನಿನ್ನ ವಿವೇಕವನ್ನು ತೋರ್ಪಡಿಸಿಕೊಳ್ಳುತ್ತಿರುವೆಯೆಂದು ಹೀಯಾಳಿಸಿ ದ್ರೌಪದಿಯನ್ನು ಹಾಗೆ ಭಂಗಪಡಿಸುವುದೇ ಯುಕ್ತವೆಂದು ಹೇಳುತ್ತಾ ದುಶ್ಶಾಸನನನ್ನು ಕುರಿತು ನೀನು ಪಾಂಡವರ ವಸ್ತ್ರಗಳನ್ನು ತೆಗೆದುಕೊಂಡು ದ್ರೌಪದಿಯುಟ್ಟಿರುವ ಸೀರೆಯನ್ನು ಸೆಳೆದುಕೊಳ್ಳುವುದೆಂದನು. ಆ ಮಾತುಗಳನ್ನು ಕೇಳಿ ಪಾಂಡವರು ತಮ್ಮ ಉತ್ತರೀಯಗಳನ್ನು ತೆಗೆದು ಬಿಸಾಟರು. ದುಶ್ಶಾಸನನು ದ್ರೌಪದಿಯುಟ್ಟಿದ್ದ ಏಕವಸ್ತ್ರವನ್ನು ಸೆಳೆಯಲು ಯತ್ನಿಸಲಾರಂಭಿಸಿದನು. ಮನುಷ್ಯಸಹಾಯ ತಪ್ಪಿದ ಮತ್ತು ಯಾಗಾಗ್ನಿಯಿಂದುತ್ಪನ್ನಳಾದ ಆ ತರುಣಿಯು ಅನಾಥರಕ್ಷಕನಾದ ಭಗವಂತನನ್ನು ಕುರಿತು ಆರ್ತಳಾಗಿ ಹಾ! ಗೋವಿಂದ! ಹಾ! ದ್ವಾರಕಾವಾಸ! ಹಾ! ಕೃಷ್ಣ! ಎಂದು ಇನ್ನೂ ಅನೇಕ ವಿಧಗಳಾದ ಗೋವಿಂದನಾಮಗಳನ್ನುಚ್ಚರಿಸುತ್ತಾ ನನ್ನನ್ನು ಕಾಯೈ ಎಂದು ಹಲುಬಿದಳು. ಕರುಣಾಮೂರ್ತಿಯಾದ ಶ್ರೀ ಕೃಷ್ಣನು ಆ ದೀನಾಲಾಪನೆಗಳನ್ನು ಕೇಳಿ ಆ ಸಾಧ್ವೀಮಣಿಯನ್ನು ಕಾಪಾಡಿದನು. ಧರ್ಮದೇವತೆಯು ಯಾರಿಗೂ ಕಾಣಿಸಿಕೊಳ್ಳದೆ ಆ ಸತಿಯ ಒಳಿಯಲ್ಲಿ ನಿಂತು ಅನೇಕ ವರ್ಣಗಳ ಸೀರೆಗಳಿಂದ ಆಕೆಯನ್ನು ಅಲಂಕರಿಸುತ್ತಿದ್ದನು. ಆ ಪಾಪಾತ್ಮನು ಒಂದು ವಸ್ತ್ರವನ್ನು ಸೆಳೆಯಲು ಮತ್ತೊಂದು ಕಾಣಬರಲು, ಹೀಗೆ ಎಳೆದೆಳೆದು ಹಾಕಿದ ಆ ನೂರಾರು ವಸ್ತ್ರಗಳು ಬೆಟ್ಟದಂತೆ ಭೂಮಿಯಲ್ಲಿ ರಾಶಿಬಿದ್ದರೂ ಆಕೆಯು ವಸ್ತ್ರವನ್ನು ಧರಿಸಿಯೇ ಇರುವುದನ್ನು ನೋಡಿ ನಾಚಿಕೆಪಟ್ಟು ಆಯಾಸ

ದಿಂದ ಕೂತುಕೊಂಡನು. ಭೀಮನು ಇಂತಹ ದುಷ್ಪ್ರವರ್ತನೆಯನ್ನು ನೋಡಿ ಸಹಿಸದೆ ಸಿಂಹದಂತೆ ಗರ್ಜಿಸುತ್ತಾ ಹೀಗೆಂದನು. ಪ್ರಪಂಚದಲ್ಲಿನ ರಾಜರುಗಳೆಲ್ಲಾ ನನ್ನ ಮಾತನ್ನು ಕೇಳುವವರಾಗಿರಿ. ಇಂತಹ ಮಾತುಗಳನ್ನು ಇದುವರೆಗೆ ಯಾರೂ ಹೇಳಿರಲಾರರು; ಮುಂದೆಯೂ ಹೇಳಲಾರರು. "ಓ ರಾಜರುಗಳೇ ನಾನು ಈಗ ಹೇಳುವುದನ್ನು ನಡೆಯಿಸದಿದ್ದಲ್ಲಿ ನನ್ನ ಹಿರಿಯರು ಹೊಂದಿದ ಸದ್ಗತಿಯು ನನಗುಂಟಾಗದಿರಲಿ. ಭರತವಂಶದಲ್ಲಿ ಹುಟ್ಟಿದ ಪರಮನೀಚನೂ ದುರಾತ್ಮನೂ ಆದ ಇವನನ್ನು ಸೀಳಿ ಇವನ ಎದೆಯನ್ನು ರಣರಂಗದಲ್ಲಿ ಬಗಿದು ಇವನ ರಕ್ತವನ್ನು ಪಾನಮಾಡದಿದ್ದಲ್ಲಿ ನನ್ನ ಹಿರಿಯರಿಗುಂಟಾದ ಸದ್ಗತಿಯು ನನಗೆ ಬಾರದಿರಲಿ'' ಎಂದು ಕ್ರೂರವಾದ ಶಪಥವನ್ನು ಮಾಡಿದನು. ಬಳಿಕ ಕ್ರೌರ್ಯದಿಂದ ಈ ಪಂಥವನ್ನ ಸಾಧಿಸಿಕೊಂಡನು. ಈ ಕಠಿನಸಂಕಲ್ಪವು ಉತ್ತರೋತ್ತರ ಭಯಂಕರವಾಗಿ ನೆರವೇರಿತು.

ಇಷ್ಟಾದರೂ ದ್ರೌಪದಿಯು ಗಟ್ಟಿಯಾಗಿ ಅಳುತ್ತಿರಲು ಆಕೆಯ ಪ್ರಶ್ನೆಗೆ ಯಾರೂ ಉತ್ತರ ಹೇಳದಿದ್ದರು. ಕರ್ಣನು ದುಶ್ಶಾಸನನನ್ನು ಕುರಿತು ದಾಸಿಯಾದ ಈ ಸ್ತ್ರೀಯನ್ನು ಅಂತಃಪುರಕ್ಕೆ ಕರೆದುಕೊಂಡು ಹೋಗೆನ್ನಲು ಆ ಪಾಪಾತ್ಮನು ಆ ತರುಣಿಯನ್ನೆಳೆಯುತೊಡಗಿದನು. ಆಗ ದ್ರೌಪದಿಯು ದೀನಳಾಗಿ ಸಭೆಯುವರ ಕಡೆಗೆ ನೋಡಲು ದುರ್ಯೋಧನನು ತಿರಸ್ಕಾರಪೂರ್ವಕವಾಗಿ ಇಂತೆಂದನು. ನಿನ್ನ ಗಂಡಂದಿರನ್ನು ಶರಣಾಗತಳಾಗು. ಅವರು ಯುಧಿಷ್ಠಿರನು ತಮ್ಮೊಡೆಯನಲ್ಲವೆಂದು ಹೇಳಿ ಸತ್ಯಸಂಧನಾದ ಆತನನ್ನು ಅಸತ್ಯವಂತನನ್ನಾಗಿ ಮಾಡಿದಲ್ಲಿ ನಿನ್ನನ್ನು ದಾಸೀಕೆಲಸದಿಂದ ಬಿಟ್ಟು ಕಳುಹಿಸುವೆನು. ಯಾವಾಗಲೂ ಧರ್ಮಮಾರ್ಗವನ್ನತಿಕ್ರಮಿಸದೇ ನಡೆಯುತ್ತಿರುವ ಇಂದ್ರಸಮಾನನಾದ ಮಹಾತ್ಮನಾದ ಧರ್ಮತನಯನು ನಿನಗೆ ತಾನು ಒಡೆಯನಹುದೋ ಅಲ್ಲವೋ ಎಂಬುದನ್ನು ಹೇಳಲಿ, ಎಂದ ಮಾತನ್ನು ಕೇಳಿ ಭೀಮನು ಮಹಾಸತ್ವಯುಕ್ತಗಳಾದ ತನ್ನ ಬಾಹುಗಳನ್ನು ತಿರುಗಿಸುತ್ತಾ ಹೀಗೆ ಹೇಳಿದನು. ನ್ಯಾಯವರ್ತಿಯಾದ ಯುಧಿಷ್ಠಿರನೇ ನಮ್ಮೊಡೆಯನು. ನಮ್ಮ ಕುಲಧರ್ಮಗಳಿಗೂ ಪುಣ್ಯಕರಗಳಾದ ತಪಸ್ಸುಗಳಿಗೂ ನಮ್ಮ ಪ್ರಾಣಗಳಿಗೂ ಅಧಿಪತಿಯಾಗಿರುವನು. ಈತನು ತಾನು ಜಿತನೆಂದು ತಿಳಿದಿರುವನಾದರೆ ನಾವೂ ಜಿತನೇ ಸರಿ, ಎನ್ನಲು ಕರ್ಣನು ಪರಿಹಾಸ್ಯ ಮಾಡುತ್ತಾ ದ್ರೌಪದಿಯನ್ನು ನೋಡಿ ನೀನು ಊಳಿಗದ ಕೆಲಸವನ್ನು ಮಾಡು

ತ್ತಾ, ಜೂಜಾಡಿ ನಿನ್ನನ್ನು ದಾಸಿಯಾಗಿ ಮಾಡದಿರುವ ಮತ್ತೊಬ್ಬ ಪತಿಯನ್ನು ಹುಡುಕಿಕೋ ಎಂದು ಹಾಸ್ಯಮಾಡಿದನು. ವಾಯುಪುತ್ರನು ಆ ಮಾತುಗಳನ್ನು ಕೇಳಿದನಾದರೂ ರಾಜನಿಗೆ ವಿಧೇಯನಾಗಿ ಧರ್ಮಪಾಶದಿಂದ ಬದ್ಧನಾದ ಕಾರಣ ಏನನ್ನೂ ಹೇಳದೆ ನಿಟ್ಟುಸುರುಬಿಡುತ್ತಾ ವ್ಯಸನಮೂರ್ತಿಯಂತೆ ಸುಮ್ಮನಿದ್ದನು. ದುರ್ಯೋಧನನು ಧರ್ಮಜನನ್ನು ನೋಡಿ ಉತ್ತರ ಹೇಳೆಂದೂ ಹೇಳದಿರುವುದು ಯೋಗ್ಯವಲ್ಲವೆಂದೂ ಹೀಯಾಳಿಸಿದನು ಮತ್ತು ಭೀಮನಿಗೆ ರೋಷವು ಹೆಚ್ಚುವಂತೆ ದ್ರೌಪದಿಯು ನೋಡುತ್ತಿರುವಾಗ ತನ್ನ ವಸ್ತ್ರವನ್ನು ವಾರೆಮಾಡಿ ಎಡತೊಡೆಯನ್ನು ತೋರಿಸಿದನು. ಅದನ್ನು ಕಂಡು ಭೀಮನು ಮಹೋಗ್ರವಚನದಿಂದ ಹೀಗೆಂದನು. ಮಹಾಯುದ್ಧದಲ್ಲಿ ನಾನು ಆ ತೊಡೆಯನ್ನು ಮುರಿದುಹಾಕದಿದ್ದಲ್ಲಿ ನನ್ನ ಹಿರಿಯರು ಹೊಂದಿದ ಸದ್ಗತಿಯು ನನಗೆ ಪ್ರಾಪ್ತವಾಗದಿರಲೆಂದು ಹೀಗೆ ಎರಡನೆಯ ಶಪಥವನ್ನು ಮಾಡಿದನು.

ಅನಂತರದಲ್ಲಿ ಅಂಧನೃಪತಿಯು ಇದೆಲ್ಲವನ್ನೂ ನೋಡಿ ಆ ಕೇಡನ್ನು ನಿವಾರಿಸಬೇಕೆಂದು ಯೋಚಿಸಿ ದ್ರೌಪದಿಯೊಡನೆ ವಿಶ್ವಾಸಪೂರ್ವಕವಾದ ವಚನಗಳಿಂದ ನಿನಗೆ ಬೇಕಾದವರಗಳನ್ನು ಕೇಳು ಕೊಡುವೆನೆನ್ನಲು ದ್ರೌಪದಿಯು ತನ್ನ ಪುತ್ರನು ದಾಸಪುತ್ರನೆಂದು ಹೆಸರು ಪಡೆಯದಿರುವಂತೆ ಯುಧಿಷ್ಠಿರನನ್ನು ದಾಸತ್ವದಿಂದ ಬಿಡಿಸೆಂದಳು. ಧೃತರಾಷ್ಟ್ರನು ಆಕೆಯು ಕೋರಿದ ವರವನ್ನು ಕೊಟ್ಟು ಇನ್ನೊಂದು ವರವನ್ನು ಕೇಳೆನ್ನಲು ಮಿಕ್ಕನಾಲ್ವರು ಪತಿಯರನ್ನೂ ಅವರ-ಆಯುಧಗಳ ಸಮೇತ ಬಿಡಿಸಬೇಕೆನ್ನಲು ಆ ಅಂಧ ನೃಪತಿಯು ಆ ವರವನ್ನೂ ಕೊಟ್ಟು ಮೂರನೆಯ ವರವನ್ನು ಕೇಳೆಂದನು. ಆ ನಾರೀಮಣಿಯು ನನ್ನ ಪತಿಗಳು ದಾಸ್ಯದಿಂದ ಬಿಡುಗಡೆ ಹೊಂದಲು ಬೇಕಾದಷ್ಟು ಐಶ್ವರ್ಯವನ್ನು ಸಂಪಾದಿಸಿಕೊಳ್ಳಬಲ್ಲರು; ಆದುದರಿಂದ ನನಗೆ ಇನ್ನು ಬೇರೇವರವು ಅವಶ್ಯಕವಿಲ್ಲವೆಂದಳು. ಕರ್ಣನು ಇದನ್ನು ನೋಡಿ ಪಾಂಡುಪುತ್ರರು ದುಃಖಸಾಗರದಲ್ಲಿ ಮುಳುಗುತ್ತಿರಲು ಅವರಿಗೆ ದ್ರೌಪದಿಯು ತೆಪ್ಪವಾಗಿ ಅವರುಗಳನ್ನು ದಡಕ್ಕೆ ಸೇರಿಸಿ ಸೌಖ್ಯವನ್ನುಂಟುಮಾಡಿದಳೆಂದು ನಿಜವನ್ನೇ ನುಡಿದನು.

ಬಳಿಕ ಯುಧಿಷ್ಠಿರನು ಭೀಮನನ್ನು ಸಮಾಧಾನಪಡಿಸಿ ಧೃತರಾಷ್ಟ್ರನ ಸಮೀಪವನ್ನೈದಿ ಕೈಮುಗಿದು, ತಂದೆಯೇ! ನಾವು ನಿನ್ನಪ್ಪಣೆಯಂತೆ ನಡೆಯತಕ್ಕವರಾದುದರಿಂದ ನಮ್ಮನ್ನೇನು ಮಾಡುವಂತೆ ಆಜ್ಞಾಪಿಸುವಿಯೆಂದು ಕೇಳಲು

ಆ ದೊರೆಯಿಂತೆಂದನು. ನೀವು ಇಲ್ಲಿಂದ ಇಂದ್ರಪ್ರಸ್ಥಕ್ಕೆ ತೆರಳಿ ಎಂದಿನಂತೆ ಸೌಖ್ಯವಾಗಿ ರಾಜ್ಯಸುಖವನ್ನನುಭವಿಸಿರಿ. ಒಳ್ಳೆಯ ನಡತೆಯಿಂದ ಪ್ರವರ್ತಿಸಿರಿ. ದುರ್ಯೋಧನನು ಮಾಡಿದ ಅವಮಾನಗಳನ್ನು ಮರೆಯಿರಿ. ಗಾಂಧಾರಿಯನ್ನೂ ನನ್ನನ್ನೂ ಮನಸ್ಸಿನಲ್ಲಿ ಸ್ಮರಿಸಿ, ಎನ್ನಲು ಆ ಯುಧಿಷ್ಠಿರನು ತಮ್ಮಂದಿರೊಡನೆಯೂ ಮಹಿಷಿಯೊಡನೆಯೂ ಆ ದೊರೆಯನ್ನು ಬಿಟ್ಟು ಹೊರಟು ಪಟ್ಟಣವನ್ನು ಕುರಿತು ತೆರಳುತ್ತಿರುವಲ್ಲಿ ದುರ್ಯೋಧನನು ಜಾಗ್ರತೆಯಿಂದ ತಂದೆಯ ಬಳಿಗೆ ಹೋಗಿ ಹೀಗೆಂದನು. "ಪಾಂಡವರು ಕ್ರೋಧಾವಿಷ್ಟರಾಗಿರುವರು. ಇಂತಹ ಸಂದರ್ಭದಲ್ಲಿ ಅವರನ್ನು ಬಿಟ್ಟು ಕಳುಹಿಸಿದರೆ ನಮಗೆ ದೊಡ್ಡ ಅಪಾಯವಾಗುವುದು. ಪುನಃ ಒಂದು ಸಲ ಜೂಜಾಡಲು ನೀನು ಸಮ್ಮತಿಸಬೇಕು. ಸೋತವರು ಹನ್ನೆರಡು ವರ್ಷ ವನವಾಸಮಾಡಿ ಅನಂತರ ಒಂದು ವರ್ಷ ಅಜ್ಞಾತವಾಸಮಾಡಬೇಕು. ಆ ಕಾಲದಲ್ಲಿ ಇತರರು ತಿಳಿದುದಾದರೆ ಪುನಃ ಹನ್ನೆರಡುವರ್ಷಗಳು ವನವಾಸಮಾಡಬೇಕು." ಎಂದು ಹೇಳಲು ದ್ರೋಣ ಭೀಷ್ಮ ವಿದುರರೇ ಮೊದಲಾದ ದೊಡ್ಡವರು ಇದು ಯೋಗ್ಯವಲ್ಲವೆಂದು ಹೇಳುತ್ತಿದ್ದರೂ ಗಾಂಧಾರಿಯು ದುರ್ಯೋಧನನನ್ನು ತ್ಯಜಿಸಿಬಿಡೆಂದು ಹೇಳುತ್ತಿದ್ದರೂ ಧೃತರಾಷ್ಟ್ರನು ಸುತನ ಮಾತಿಗೆ ಕಿವಿಗೊಟ್ಟು, ಪುನಃ ದ್ಯೂತಕ್ಕೆ ಸಮ್ಮತಿಸಿ ಪಾಂಡವರನ್ನು ಮತ್ತೆ ಕರೆಯಿಸಿದನು. ಅವರು ಪುನಃ ಒರಲು ಪಂತದ ಕ್ರಮವನ್ನು ಅವರಿಗೆ ತಿಳಿಯಿಸಿ ಹದಿಮೂರನೆಯ ವರ್ಷವು ಕಳೆದಮೇಲೆ ಅವರ ರಾಜ್ಯವು ಅವರದೇ ಆಗಿರುವುದೆಂದು ಹೇಳಿದನು. ಧರ್ಮತನಯನು ವ್ಯಾಕುಲದಿಂದಲ್ಲಕಲ್ಲೋಲವಾದ ಮನಸ್ಸಿನಿಂದ ಪುನಃ ಜೂಜಾಡಲುಯತ್ನಿಸಲು ಶಕುನಿಯು ಕೊನೆಯಸಾರಿ ಇಗೋ ನಾನು ಗೆದ್ದಿರುವೆನೆಂದು ಕೂಗಿ ಹೇಳಿದನು.

ಅನಂತರ ಪಾಂಡವರು ರಾಜೋಚಿತವಾದ ತಮ್ಮ ವಸ್ತ್ರಗಳನ್ನು ತೆಗೆದಿಟ್ಟು ಕೃಷ್ಣಾಜಿನಗಳನ್ನು ಧರಿಸಿದರು. ದುಶ್ಶಾಸನನು ಸಂತೋಷದಿಂದ ಅವರ ಸಮೀಪವನ್ನೈದಿ ದ್ರೌಪದಿಯನ್ನು ನೋಡಿ ನೀನು ಇವರನ್ನು ತ್ಯಜಿಸಿ ಬೇರೇ ಪತಿಯನ್ನು ವರಿಸೆಂದನು. ಭೀಮನು ಅವನನ್ನು ಗದ್ದರಿಸುತ್ತ ಹಿಮಾಲಯದ ಗುಹೆಯಿಂದ ಬಂದ ಸಿಂಹದಂತೆ ಅವನ ಬಳಿಗೆ ಹೋದನಾದರೂ ಧರ್ಮಕ್ಕೆ ವಿರುದ್ಧವಾಗಿ ನಡೆಯಬಾರದೆಂದು ಅವನನ್ನು ಏನೂಮಾಡದೆ ಸುಮ್ಮನಾದನು. ದುಶ್ಶಾಸನನು

ಸಂತೋಷವುಕ್ಕುತ್ತಿರಲು ನರ್ತನಮಾಡುತ್ತಾ ಭೀಮನನ್ನು ಕುರಿತು ಖೂಳಪಶುವೆ ಎಂದು ಕೂಗುತ್ತಾ ನೀಚವಾಕ್ಯಗಳಿಂದ ಬಯ್ದನು. ಭೀಮನು ತನ್ನ ಕೋಪವನ್ನಣಗಿಸಿಕೊಳ್ಳುತ್ತಾ ಇನ್ನು ನಿಮ್ಮೆಲ್ಲರನ್ನೂ ಆಹುತಿಯಾಗಿ ಮಾಡುವೆನೆಂದು ಗಂಭೀರವಾಗಿ ಹೇಳುತ್ತಾ ಅಣ್ಣನನ್ನನುಸರಿಸಿ ನಡೆದನು. ಅರ್ಜುನನು ಮೃದುವಚನಗಳಿಂದ ಹೀಗೆಂದನು——ಭೀಮಾ! ಮಹಾತ್ಮರ ಸಂಕಲ್ಪಗಳು ವಾಙ್ಮಾತ್ರದಿಂದಲೇ ಪ್ರಕಟವಾಗುವುದಿಲ್ಲ. ಈ ದಿನಕ್ಕೆ ಹದಿನಾಲ್ಕನೆಯವರ್ಷದಲ್ಲೇನಾಗುವುದೋ ಅವರು ನೋಡುವರು ಎಂದು ಹೇಳಿದನು. ಧರ್ಮಜನ ಆ ನಾಲ್ವರು ತಮ್ಮಂದಿರೂ ತಮ್ಮ ಶತ್ರುಗಳನ್ನು ಕೊಲ್ಲುವೆವೆಂದು ಒಬ್ಬೊಬ್ಬನೂ ಶಪಥಗಳನ್ನು ಮಾಡಿ ಧೃತರಾಷ್ಟ್ರನ ಬಳಿಗೆ ಹೋಗಿ ವನವಾಸಕ್ಕೆ ಹೊರಡಲು ಅಪ್ಪಣೆಕೊಡಬೇಕೆಂದು ಬೇಡಿದರು. ಧರ್ಮಜನು ಹಂಬಲಿಸುತ್ತಾ 'ಹೋಗಿ ಬರಲನುಜ್ಞೆಯೇ' ಎಂದು ಕೇಳಲು ನಾಚಿಕೆಯಿಂದ ತಲೆಬಗ್ಗಿಸಿ ಯಾರೂ ಆತನಿಗುತ್ತರಕೊಡಲು ಅಸಮರ್ಥರಾದಾಗ್ಯೂ ಮನಸ್ಸಿನಲ್ಲಿ ಮಾತ್ರ ಆತನಿಗೆ ಕುಶಲವುಂಟಾಗಲೆಂದು ಕೆಲವರು ಹಾರೈಸಿದರು. ವಿದುರನು ಅವರನ್ನು ಕುರಿತು ಹೀಗೆ ಹೇಳಿದನು ನಿಮ್ಮ ತಾಯನ್ನು ನನ್ನಬಳಿ ಬಿಟ್ಟಿರಿ. ಅರಣ್ಯವಾಸದಿಂದ ನಿಮಗೆ ದೊಡ್ಡಲಾಭ ಉಂಟಾಗುವುದಲ್ಲದೆ ನೀವು ಚೆನ್ನಾಗಿ ಯತ್ನಮಾಡಿದರೆ ಯಾವಶತ್ರುವೂ ಎದುರು ಬೀಳದಂತಹ ಬಲಸಂಪತ್ತುಗಳುಂಟಾಗುವುವು. ಕೌಂತೇಯನೇ! ಇನ್ನು ನಿನಗೆ ಹೋಗಿ ಬರಲಪ್ಪಣೆ ಕೊಟ್ಟಿರುವೆನು. ನಿನಗೆ ಶುಭವುಂಟಾಗಲಿ. ನೀನು ದುಷ್ಕೃತ್ಯವನ್ನಾಚರಿಸಿದೆಯೆಂದು ಯಾರೊಬ್ಬರೂ ಹೇಳಲಾರರು. ಆದುದರಿಂದ ನೀನು ಕ್ಷೇಮವಾಗಿದ್ದು ವಿಜಯಹೊಂದಿ ಪುನಃ ಬರುವಂತೆ ಅಪೇಕ್ಷಿಸುವೆನು, ಎಂದು ಹೇಳಲು ಪಾಂಡವರು ಅತಿ ಕಾರುಣ್ಯದಿಂದ ಕುಂತೀ ದೇವಿಯನ್ನು ಬಿಟ್ಟುಹೊರಡಲುದ್ಯುಕ್ತರಾದರು. ಆ ಸ್ತ್ರೀಯು ಅವರನ್ನು ಬಿಟ್ಟಿರಲಾರದೆ ವ್ಯಾಮೋಹದಿಂದ ಎದೆಯೊಡೆಯುವಷ್ಟು ದುಃಖದಿಂದ ಕೂಡಿ ಮಕ್ಕಳನ್ನು ಬಿಟ್ಟು ಕಳುಹಿಸಿದಳು. ಕೊನೆಗೆ ಎಲ್ಲವೂ ಮುಗಿಯಲು ಪಾಂಡವರು ಒಬ್ಬರ ಹಿಂದೊಬ್ಬರಾಗಿ ಹೊರಟರು. ಮುಂಭಾಗದಲ್ಲಿ ಯುಧಿಷ್ಠಿರನು ತನ್ನ ಮುಖವು ಇತರರಿಗೆ ಕಾಣದಂತೆ ಮುಚ್ಚಿಕೊಂಡು ಹೊರಟನು. ಭೀಮನು ತನ್ನ ಭುಜಗಳನ್ನು ನೋಡಿಕೊಳ್ಳುತ್ತಾ ಹೊರಟನು. ಅರ್ಜುನನು ಮರಳನ್ನು ಸುತ್ತಲೂ ಎರಚುತ್ತಾ ಹೊರಟನು. ನಕುಲನು

ಶರೀರವನ್ನು ಧೂಳಿನಿಂದ ಧೂಸರವನ್ನಾಗಿ ಮಾಡಿಕೊಂಡು ಹೊರಟನು. ಸಹದೇವನು ಮುಖಕ್ಕೆ ಮಸಿಯನ್ನು ಬಳಿದುಕೊಂಡು ಹೊರಟನು. ದ್ರೌಪದಿಯು ಬಿಚ್ಚಿಹೋಗಿದ್ದ ಕೂದಲುಗಳಿಂದ ಮುಖವನ್ನು ಮುಚ್ಚಿಕೊಂಡು ಹೊರಟಳು. ಧೌಮ್ಯನು ಕೈಯಲ್ಲಿ ದರ್ಭೆಗಳನ್ನು ದಕ್ಷಿಣಾಗ್ರವಾಗಿ ಹಿಡಿದುಕೊಂಡು ಸಾಮವೇದದಲ್ಲಿನ ರೌದ್ರಮಂತ್ರಗಳನ್ನು ಗಾನಮಾಡುತ್ತಾ ಪ್ರಯಾಣಮಾಡಿದನು.

ಈ ರೀತಿಯಾದ ಪಾಂಡವರ ಪ್ರಯಾಣವನ್ನು ವಿದುರನಿಂದ ಧೃತರಾಷ್ಟ್ರನು ಕೇಳಿ ಮನಸ್ಸಿನಲ್ಲಿ ಕಳವಳಹೊಂದಿ ಪಾಂಡವರು ಮಾಡಿದ ಕಾರ್ಯಗಳಿಗೆ ಅರ್ಥವೇನೆಂದು ಆತನನ್ನು ಕೇಳಲು ವಿದುರನಿಂತು ಹೇಳಿದನು. ಯುಧಿಷ್ಠಿರನು ಪರಮದಯಾಳುವಾದುದರಿಂದ ಕ್ರೋಧಾವಿಷ್ಟನಾದ ತನ್ನ ದೃಷ್ಟಿಯು ಯಾರ ಮೇಲಾದರೂ ಬಿದ್ದಲ್ಲಿ ಅವರಿಗೇನು ಕೇಡುಂಟಾಗುವುದೋ ಎಂದು ಯೋಚಿಸುತ್ತ ಮುಖವನ್ನು ಮರೆಮಾಡಿಕೊಂಡನು. ಭೀಮನು ತನ್ನ ಬಾಹುಗಳು ತನ್ನ ಶತ್ರುಗಳನ್ನು ಎಂದು ಪರಾಜಿತರನ್ನಾಗಿ ಮಾಡುವುವೋ ಎಂದು ಅವನ್ನು ನೋಡುತ್ತ ಹೊರಟನು. ಅರ್ಜುನನು ಯುದ್ಧದಲ್ಲಿ ತಾನು ಈ ರೀತಿಯಲ್ಲಿ ಬಾಣವರ್ಷವನ್ನು ಕರೆಯುತ್ತಾ ಶತ್ರುಗಳ ತಲೆಗಳನ್ನು ಖಂಡಿಸುವೆನೆಂಬುದನ್ನು ತೋರಿಸುವುದಕ್ಕಾಗಿ ಮರಳನ್ನು ಚೆಲ್ಲುತ್ತಿದ್ದನು. ನಕುಲನು ತನ್ನನ್ನು ಮಾರ್ಗದಲ್ಲಿ ಕಾಮಿನಿಯರು ಕಾಮಿಸದಿರುವುದಕ್ಕಾಗಿ ತನ್ನ ಶರೀರವನ್ನು ಧೂಳಿನಿಂದ ತುಂಬಿದನು. ಸಹದೇವನು ಕಷ್ಟಬಂದಾಗ ತನ್ನನ್ನು ಇತರರು ತಿಳಿಯದಿರಬೇಕೆಂದು ತೋರ್ಪಡಿಸಿದನು. ದ್ರೌಪದಿಯು ತನ್ನ ಶತ್ರುಗಳ ಭಾರ್ಯೆಯರನ್ನು ಸ್ಮರಿಸುತ್ತಾ ಅವರು ಇನ್ನು ಹದಿನಾಲ್ಕನೆಯ ವರ್ಷದಲ್ಲಿ ವಿಧವೆಯರಾಗಿ ಈ ರೀತಿಯಲ್ಲಿ ಹಲುಬುವರೆಂದು ತಿಳಿಯಪಡಿಸಿದಳು. ಧೌಮ್ಯನು ಅವನ ಶತ್ರುಗಳಿಗೆ ಈ ರೀತಿಯಲ್ಲಿ ಉತ್ತರ ಕ್ರಿಯೆಗಳನ್ನು ನಡೆಯಿಸುವೆನೆಂದು ತಿಳಿಸುವವನಾಗಿ ಆ ಮಂತ್ರಗಳನ್ನು ಪಠಿಸುತ್ತಿದ್ದನು.

ಆ ಸ್ಥಳದಲ್ಲಿ ನಡೆದ ಅನ್ಯಾಯಕ್ಕೂ ಅದರಿಂದ ಮುಂದೆ ಬರುವ ಕೇಡುಗಳಿಗೂ ಪ್ರಕೃತಿಯೇ ಗೋಳಾಡಿತು. ನಾರದನು ಮಹರ್ಷಿಗಳಿಂದ ಪರಿವೃತನಾಗಿ ಕಾಣಿಸಿಕೊಂಡು ಈ ದಿನಕ್ಕೆ ಹದಿನಾಲ್ಕನೆಯ ವರ್ಷ ದುರ್ಯೋಧನನು ಮಾಡಿದ ದುಷ್ಕೃತ್ಯಕ್ಕಾಗಿ ಕೌರವರೆಲ್ಲರೂ ಭೀಮಾರ್ಜುನರ ಪರಾಕ್ರಮದಿಂದ

ಹತರಾಗುವರೆಂದು ಹೇಳಿ ಜಾಗ್ರತೆ ಆ ಋಷಿಗಳೊಡನೆ ಅದೃಶ್ಯನಾದನು. ಹೀಗೆ ಪಾಂಡವರು ಅರಣ್ಯಕ್ಕೆ ತೆರಳಲು ಕಾಲಪಿತನು ಧೃತರಾಷ್ಟ್ರ ಪುತ್ರರಿಗೆ ಮುಂದೆ ಇಂತಹ ಕೇಡುಂಟಾಗುವುದೆಂಬುದನ್ನು ತಿಳಿಸುವನಂತೆ ಜಗತ್ತನ್ನು ಅಂಧಕಾರದಲ್ಲಿ ಮಗ್ನವನ್ನಾಗಿಮಾಡಿ ಅಸ್ತಮಿಸಿದನು.

ಸಭಾಪರ್ವಸಮಾಪ್ತ.



## ೫ ನೆಯ ಅಧ್ಯಾಯ.

### ವನ ಪರ್ವ, ವಿರಾಟ ಪರ್ವಗಳು.

#### ಪಾಂಡವರ ವನವಾಸ.

ಪಾಂಡವರು ದ್ರೌಪದಿಯ ಸಹಿತರಾಗಿ ಹನ್ನೆರಡು ವರ್ಷ ಅರಣ್ಯಗಳಲ್ಲಿಯೂ ಪರ್ವತಪ್ರದೇಶಗಳಲ್ಲಿಯೂ ಸಂಚರಿಸಿ ಒಂದುವರ್ಷ ಅಜ್ಞಾತವಾಸ ಮಾಡಿ ಕಷ್ಟಗಳನ್ನನುಭವಿಸಿದ ವೃತ್ತಾಂತವನ್ನು ನಾವು ಈಗ ಓದಿ ತಿಳಿಯಬೇಕಾಗಿದೆ. ಈ ಚರಿತ್ರೆಯು ಎರಡು ಪರ್ವಗಳಲ್ಲಿ ಹೇಳಲ್ಪಟ್ಟಿರುವುದು. ಹನ್ನೆರಡುವರ್ಷ ವನವಾಸವನ್ನು ಅರಣ್ಯಪರ್ವದಲ್ಲಿಯೂ ಒಂದು ಸಂವತ್ಸರದ ಅಜ್ಞಾತವಾಸವನ್ನು ವಿರಾಟಪರ್ವದಲ್ಲಿಯೂ ಹೇಳಿರುವರು. ಆ ಒಂದು ಸಂವತ್ಸರದಲ್ಲಿ ಪಾಂಡವರು ವಿರಾಟನ ಪಟ್ಟಣದಲ್ಲಿ ವಾಸಮಾಡುತ್ತಿದ್ದುದರಿಂದ ಈ ಪರ್ವಕ್ಕೆ ವಿರಾಟಪರ್ವವೆಂದು ಹೆಸರಾಯಿತು.

ಇದರಲ್ಲಿ ಮೊದಲನೆಯದಾದ ವನಪರ್ವವು ಶಾಂತಿಪರ್ವವನ್ನುಳಿದು ಮಿಕ್ಕ ಎಲ್ಲಾ ಪರ್ವಗಳಿಗಿಂತಲೂ ದೊಡ್ಡದು. ಈ ಪರ್ವದಲ್ಲಿ ಪಾಂಡವರು ಕಷ್ಟಗಳನ್ನು ಅನುಭವಿಸುತ್ತಾ ಆರ್ತರಾಗಿ ಕಾಲಕಳೆಯುತ್ತಿರಲು ಅವರನ್ನು ನೋಡುವುದಕ್ಕಾಗಿ ಬಂದ ಋಷಿಗಳು ಅವರಿಗೆ ತಿಳುವಳಿಕೆಯನ್ನು ಕೊಡುವುದಕ್ಕಾಗಿಯೂ ವ್ಯಥೆಯನ್ನು ಹೋಗಲಾಡಿಸುವುದಕ್ಕಾಗಿಯೂ ಹೇಳಿದ ಜ್ಞಾನೋ

ತ್ಪಾದಕಗಳಾದ ದೊಡ್ಡ ಚರಿತ್ರೆಗಳೂ ಆಶ್ಚರ್ಯಕರಗಳಾದ ಉಪಾಖ್ಯಾನಗಳೂ ಹೇಳಲ್ಪಟ್ಟಿರುವುದಲ್ಲದೆ ಅನೇಕ ಪುಣ್ಯಕ್ಷೇತ್ರಗಳು, ನದಿಗಳು, ಸರೋವರಗಳು ಮೊದಲಾದವುಗಳ ಮಾಹಾತ್ಮ್ಯವು ಇದರಲ್ಲಿ ವರ್ಣಿತವಾಗಿರುವುದರಿಂದ ಈ ಪರ್ವವು ಇಷ್ಟು ದೊಡ್ಡದಾಯಿತು. ಅವುಗಳನ್ನು ನಾವು ಬಿಟ್ಟುಬಿಡಬೇಕಾಗಿದೆ. ಇಂತಹ ಕಥೆಗಳೆಂದು ತಿಳಿದರೆ ಪ್ರತ್ಯೇಕವಾಗಿ ಅವನ್ನೇ ನೀವು ಓದಿಕೊಳ್ಳಬಹುದು.

ಈ ಪರ್ವದಲ್ಲಿ ಭಗವಂತನ ಅವತಾರವಾದ ಶ್ರೀರಾಮನ ಚರಿತ್ರೆಯೂ ತನ್ನ ಭಕ್ತಿ ಗೌರವಗಳಿಂದಲೂ ಚಾತುರ್ಯದಿಂದಲೂ ಮರಣದ ದೆಸೆಯಿಂದ ತನ್ನ ಗಂಡನನ್ನು ಬಿಡಿಸಿಕೊಂಡ ಸಾವಿತ್ರಿಯನ್ನು ಕುರಿತ ಮನೋಜ್ಞವಾದ ಕಥೆಯೂ, ಸತ್ಯ ಹರಿಶ್ಚಂದ್ರನ ವೃತ್ತಾಂತವೂ ನಳ ದಮಯಂತಿಯರ ಚರಿತ್ರೆಯೂ ನಳನು ಜೂಜಾಡಿದುದರಿಂದ ಅವರಿಗುಂಟಾದ ಕಷ್ಟಗಳು ಇವೆಲ್ಲವೂ ಹೇಳಲ್ಪಟ್ಟಿರುವ ಕ್ರಮದಲ್ಲಿ ನೀವು ತಿಳಿದೇಯಿರುವಿರಿ. ಆ ರಾಜಕುಮಾರರು ಹೀಗೆ ದೇಶಭ್ರಷ್ಟರಾಗಿ ಅಲೆಯುತ್ತಿರುವ ಸಮಯದಲ್ಲಿ ಅನೇಕ ವಿಷಯಗಳನ್ನು ಕಲಿತುಕೊಂಡರು. ಅವರ ಚರಿತ್ರೆಯನ್ನು ನೀವು ಗಮನಿಸಿದ್ದೇ ಆದರೆ ನೀವೂ ಸಹ ಅವುಗಳನ್ನು ಕಲಿಯಬಹುದು.

ಆ ರಾಜಕುಮಾರರು ಹಸ್ತಿನಾಪುರವನ್ನು ಬಿಟ್ಟು ಹೊರಡುವ ಸಮಯದಲ್ಲಿ ಪ್ರಜೆಗಳನೇಕರು ದುರ್ಯೋಧನನು ಪಾಲಿಸುವ ದೇಶದಲ್ಲಿರಲೊಲ್ಲದೆ ಪಾಂಡವರನ್ನು ಕೂಡಿ ಅರಣ್ಯಕ್ಕೆ ಹೊರಡುವವರಾಗಿ ಅವರ ಹಿಂದೆ ನಡೆಯುತ್ತಾ ಯುಧಿಷ್ಠಿರನೊಡನೆ ಹೀಗೆಂದರು. ಧರ್ಮಾತ್ಮರೊಡನೆ ವಾಸಿಸುವುದರಿಂದ ಪುಣ್ಯವೂ ದುಷ್ಟಾತ್ಮರಸಾಂಗತ್ಯದಿಂದ ಪುಣ್ಯಕ್ಷಯವೂ ಆಗುವುದರಿಂದ ನಾವು ಸತ್ಪುರುಷರ ಸಹವಾಸವನ್ನೇ ಕೋರುವೆವು. ಎಲ್ಲಾ ಸುಗುಣಗಳು ನಿನ್ನಲ್ಲಿ ಸಂಪೂರ್ಣವಾಗಿರುವುದರಿಂದ ನಾವು ನಿನ್ನೊಡನೆಯೇ ವಾಸಿಸಲು ಅಪೇಕ್ಷಿಸುತ್ತೇವೆ, ಎಂದು ಹೇಳಿದರು. ಈ ರೀತಿಯಲ್ಲಿ ಆ ಪ್ರಜೆಗಳು ಸಹವಾಸದ ವಿಷಯವಾಗಿ ಹೇಳಿದ ಮಾತು ಸತ್ಯವಾದುದೇ ಸರಿ. ನಾವು ಸತ್ಪುರುಷರೊಡನೆ ವಾಸ ಮಾಡಲು ಯತ್ನಿಸಬೇಕಲ್ಲದೆ ದುಷ್ಟಾತ್ಮರ ಬಳಿಯಲ್ಲಿ ಸೇರಬಾರದು. ಒಬ್ಬನ ಗುಣಗಳು ಮತ್ತೊಬ್ಬನಿಗೆ ಸಹವಾಸದಿಂದ ಉಂಟಾಗುವುದು ನಿಜವು. ಸಿಡುಬು

ಎದ್ದಿರುವವರ ಬಳಿಯಲ್ಲಿ ನಾವಿದ್ದುದಾದರೆ ನಮಗೂ ಆ ಜಾಡ್ಯ ಪ್ರಾಪ್ತವಾಗ ಬಹುದು. ದೈಹಿಕವ್ಯಾಧಿಗಳಿಗಿಂತಲೂ ಶೀಲಸ್ವಭಾವಗಳನ್ನು ಒದಲಾಯಿಸುವ ವ್ಯಾಧಿಗಳು ತುಂಬಾ ಅಂಟುಜಾಡ್ಯಗಳಾಗಿಯೂ ಕೆಡುಕುಜಾಡ್ಯಗಳಾಗಿಯೂ ಇವೆ. ಸತ್ಪುರುಷರ ಮನಸ್ಸು ಪರಿಶುದ್ಧತೆಯನ್ನೂ ದುರ್ಜನರ ಮನಸ್ಸು ಅಪ ವಿತ್ರತೆಯನ್ನೂ ಬೀರುತ್ತಿರುವವು. ಇವೆರಡೂ ಅಂಟುಸ್ವಭಾವವುಳ್ಳವುಗಳೇ. ನೀವು ಚಿಕ್ಕತನದಿಂದಲೇ ಸಜ್ಜನರೊಡನೆ ಸ್ನೇಹಬೆಳೆಸಿರಿ. ಯೌವನಸ್ಥರಾದಾಗ ನಿಮ್ಮ ಗುಣಗಳು ಸ್ಥಿರವಾಗಿ ನೆಲಸುವುವು. ಹಾಗಿಲ್ಲದಿದ್ದರೆ ವಯಸ್ಸಾದಮೇಲೆ ಇತರರ ಸ್ವಭಾವವು ಅಷ್ಟುಚೆನ್ನಾಗಿ ಅಂಟುವುದಿಲ್ಲ; ಹೊಸಪದ್ಧತಿಗಳ್ನು ಅಭ್ಯಾ ಸಮಾಡಿಕೊಳ್ಳುವುದು ಕಷ್ಟವಾಗುವುದು.

ಯುಧಿಷ್ಠಿರನಾದರೋ ಪ್ರಜೆಗಳು ದೊರೆಯನ್ನು ಬಿಟ್ಟು ತನ್ನೊಡನೆ ಬರ್ರು ವುದು ಧರ್ಮವಲ್ಲವೆಂದು ತಿಳಿದವನಾದುದರಿಂದ ಆತನು ಅವರುಗಳನ್ನು ಕುರಿತು 'ನೀವುಗಳು ಹಿಂದಕ್ಕೆ ಹೊರಟು ಭೀಷ್ಮ, ಧೃತರಾಷ್ಟ್ರ ವಿದುರರಿಗೂ ಕುಂತಿದೇವಿ ಗೂ ಪ್ರೀತಿಯಿಂದ ಉಪಚಾರಮಾಡುತ್ತಾ ವರ್ತಿಸಿ. ಹಾಗೆ ಮಾಡಿದಲ್ಲಿ ನೀವು ನನ್ನಲ್ಲಿಯೂ ನನ್ನ ತಮ್ಮಂದಿರಲ್ಲಿಯೂ ಹೆಚ್ಚಾದ ವಿಶ್ವಾಸವನ್ನು ತೋರ್ಪಡಿಸಿದಂ ತಾಗುವುದು' ಎಂದು ಸಮಾಧಾನಪಡಿಸಿ ಕಳುಹಿಸಿದನು. ರಾಜನು ದುಷ್ಟ ನಾದಪಕ್ಷದಲ್ಲಿ ಆತನನ್ನು ನಾವು ಬಿಟ್ಟುಬಿಡುವುದರಿಂದಲೂ ಆತನಿಗೆ ಪ್ರತಿಯ್ಯ ನ್ಯಾಚರಿಸುವುದರಿಂದಲೂ ಆತನನ್ನು ಒಳ್ಳೇಮಾರ್ಗಕ್ಕೆ ತಿರುಗಿಸುವುದಕ್ಕಾಗುವು ದಿಲ್ಲ. ನಾವು ಮಾಡಿದ ಕರ್ಮಕ್ಕನುಸಾರವಾಗಿ ನಮಗೆ ದೊರೆಯು ಸಿಕ್ಕು ವನು. ಆತನು ಕೆಟ್ಟವನಾದಲ್ಲಿ ನಾವು ಯತ್ನವಿಲ್ಲದೇ ಆತನಿಗೆ ವಿಧೇಯರಾ ಗಿದ್ದು ನಮ್ಮ ಧರ್ಮಗಳನ್ನು ಚನ್ನಾಗಿ ಆಚರಿಸುತ್ತ ರಾಜ್ಯದ ತೊಂದರೆಯನ್ನು ಹೋಗಲಾಡಿಸಬೇಕು. ಹಾಗಲ್ಲದೇ ನಾವು ರಾಜನಮೇಲೆ ಕೈಮಾಡಿದೆವಾದರೆ ನಾವು ಮಾರ್ಗತಪ್ಪಿದವರಾಗುವೆವು. ಅದರಿಂದ ಪ್ರಜೆಗಳಿಗೂ ರಾಜನಿಗೂ ಕೇಡುಸಂಭವಿಸುವುದು. ನಾವು ಭಕ್ತಿಯಿಂದಕೂಡಿ ಧರ್ಮವನ್ನಾಚರಿಸಿದಲ್ಲಿ ದೇವತೆಗಳು ನಮ್ಮ ರಕ್ಷಣೆಯನ್ನು ಕೈಗೊಳ್ಳುವರು. ದುರ್ಯೋಧನನು ಕಾಲ ವೊದಗಿದಾಗ, ಕರ್ತವ್ಯವನ್ನು ಎಸಗುವವರ ಹಸ್ತದಿಂದ, ಧರ್ಮಯುದ್ಧದಲ್ಲಿ ಮಡಿ ದುದೇ ಇದಕ್ಕೆ ಸಾಕ್ಷಿಯು. ಈ ಪ್ರಕಾರ ನಾವು ರಾಜಭಕ್ತರಾಗಿರಬೇ

ಕೇಬುದೇ ಸನಾತನವಾದ ಆರ್ಯಧರ್ಮವು. ಈ ಕಾಲದಲ್ಲಿ ನಡೆಯುವಹಾಗೆ ದೊರೆಗಳಲ್ಲಿ ಕಲಹಮಾಡುತ್ತಾ ರಾಷ್ಟ್ರಕ್ಷೋಭೆಯುಂಟಾಗುವಂತೆ ಮಾಡುವುದಕ್ಕಿಂತ ಮೊದಲಿದ್ದ ಧರ್ಮವೇ ಜನಗಳಿಗೆ ಕ್ಷೇಮವನ್ನುಂಟುಮಾಡುತ್ತಿದ್ದಿತು. ಆದುದರಿಂದ ಯುಧಿಷ್ಠಿರನ ಅಪ್ಪಣೆಯಂತೆ ಜನಗಳು ಪುನಃ ತಮ್ಮ ಬಳಿಗೆ ಹಿಂದಿರುಗಿದರು. ಬಳಿಕ ಪಾಂಡವರು ವೇದಪಠನಮಾಡುತ್ತಿದ್ದ ಕೆಲವುಮಂದಿ ಸ್ನಾತಕ ಬ್ರಾಹ್ಮಣರಿಂದೊಡಗೂಡಿ ಗಂಗಾತೀರವನ್ನು ಸೇರಿದರು.

ಮಾರನೆಯದಿನ ಸೂರ್ಯನುದಯಿಸಲು ಧರ್ಮನಂದನನು ಇಷ್ಟುದಿನಗಳೂ ಹೊತ್ತುಹೊತ್ತಿಗೆ ಸಾವಿರಗಟ್ಲೆ ಬ್ರಾಹ್ಮಣರಿಗೆ ಅನ್ನವನ್ನಿಡುತ್ತಿದ್ದು ಈ ದಿನ ಹಾಗೆಮಾಡಲು ಅನುಕೂಲವಿಲ್ಲದೆ ಚಿಂತಿಸಿ ಅಲ್ಲಿದ್ದ ಬ್ರಾಹ್ಮಣರನ್ನು ಕುರಿತು ನೀವೂ ನಮ್ಮೊಡನೆ ಅರಣ್ಯದಲ್ಲಿ ಕಷ್ಟಪಡಬೇಕೇ ? ನೀವುಗಳು ಊರುಗಳಲ್ಲಿದ್ದು ಸೌಖ್ಯವಾಗಿರಬಹುದೆಂದು ಬೇಡಿಕೊಳ್ಳಲು ಅವರುಗಳು ಆತನನ್ನು ಬಿಟ್ಟು ಹೋಗಲಾರದಿದ್ದರು. ಧರ್ಮಜನು ಅಯ್ಯೋ ! ಇವರನ್ನು ಹೇಗೆ ಕಾಪಾಡಲೆಂದು ವ್ಯಥೆಪಡುತ್ತಾ ನೆಲದಲ್ಲಿ ಬಿದ್ದು ಅಳುತ್ತಿರಲು, ಶೌನಕನೆಂಬೊಬ್ಬ ಋಷಿಯು ಆತನನ್ನು ಕುರಿತು ಹೀಗೆ ಹೇಳಿದನು. ಐಶ್ವರ್ಯ ಕಳೆದುಹೋದುದಕ್ಕಾಗಿ ನೀನು ಚಿಂತಿಸಬಹುದೇ ? ಭೂಮಿಯಲ್ಲಿನ ಭೋಗ್ಯವಸ್ತುಗಳಲ್ಲಿ ಆಶೆಯನ್ನು ಬಿಡತಕ್ಕದು ಯುಕ್ತವಲ್ಲವೇ ? ಎನ್ನಲು ಧರ್ಮಜನು ಅತಿ ಕಾರುಣ್ಯದಿಂದ ಕೂಡಿ ಹೀಗೆಂದನು. ನನ್ನನ್ನಾಶ್ರಯಿಸಿರುವ ಬ್ರಾಹ್ಮಣರನ್ನು ಕಾಪಾಡುವುದಕ್ಕಾಗಿ ಐಶ್ವರ್ಯವನ್ನಪೇಕ್ಷಿಸುವೆನಲ್ಲದೆ ನನ್ನ ಸುಖಗಳಿಗಾಗಿ ಅಪೇಕ್ಷಿಸೆನು. ಗಾರ್ಹಸ್ಥ್ಯ ಧರ್ಮವನ್ನು ನಾನು ಹೇಗೆ ಬಿಡಲಿ. ಅತಿಥಿ ಸತ್ಕಾರಕ್ಕಿಂತಲೂ ಹೆಚ್ಚಿನದಾದ ಶಾಶ್ವತವಾದ ಧರ್ಮವೇ ಇಲ್ಲವು. ಆಯಾಸಪಟ್ಟು ಬಂದವನಿಗೆ ಹಾಸಿಗೆಯನ್ನೂ ನಿಂತಿದ್ದು ಕಷ್ಟಪಡುವವನಿಗೆ ಆಸನವನ್ನೂ ತೃಷ್ಣಾಪೀಡಿತನಿಗೆ ಉದಕವನ್ನೂ ಹಸಿವಿನಿಂದ ಕೂಡಿದವನಿಗೆ ಅನ್ನವನ್ನೂ ಯಾವಾಗಲೂ ಕೊಡಬೇಕು. ಅತಿಥಿಯನ್ನು ಯಾವಾಗಲೂ ಆದರದಿಂದ ನೋಡುತ್ತಾ ಮನಸ್ಸಿಗೆ ಉಲ್ಲಾಸ ಉಂಟಾಗುವಂತೆ ಮೃದುವಚನಗಳಿಂದ ಸತ್ಕರಿಸಬೇಕು, ಎಂದು ಹೇಳಿ ಧರ್ಮಪುತ್ರನು ಧೌಮ್ಯನಕಡೆಗೆ ತಿರಗಿ ನಾನು ಈ ಸ್ಥಳದಲ್ಲೇನುಮಾಡಲೆಂದು ಕೇಳಲು ಆ ಗುರುಶ್ರೇಷ್ಠನು ಸೂರ್ಯನನ್ನು ಕುರಿತು ತಪಸ್ಸನ್ನಾಚರಿಸಿ

ಆದೇವನನ್ನಾರಾಧಿಸಿದಲ್ಲಿ ನಿನಗೆ ಕಷ್ಟನಿವಾರಣೆಯಾಗುವುದೆಂದು ಬೋಧಿಸಿದನು. ಆಗ ಧರ್ಮನಂದನನು ಗಂಗಾನದಿಯಲ್ಲಿ ನಿಂತುಕೊಂಡು ಪ್ರಾಣಾಯಾಮ ಮಾಡಿ ಸೂರ್ಯಮಂಡಲಾಂತರ್ವರ್ತಿಯಾದ ದೇವತೆಯಲ್ಲಿ ಮನಸ್ಸನ್ನಿಟ್ಟು ಸಕಲಾ ಭೀಷ್ಟದನೆಂದು ಆತನನ್ನು ಸ್ತೋತ್ರಮಾಡಲು ಆ ದೇವನು ಅಗ್ನಿಯೋಪಾದಿಯಲ್ಲಿ ಪ್ರಕಾಶಿಸುತ್ತಾ ಆತನಿಗೆ ಪ್ರತ್ಯಕ್ಷನಾಗಿ ಅನುಗ್ರಹ ಮಾಡುತ್ತಾ ಧರ್ಮರಾಯ ನಿಗೆ ಒಂದು ತಾಮ್ರದ ಪಾತ್ರೆಯನ್ನಿತ್ತು ಇದರಲ್ಲಿ ಅನ್ನವನ್ನಿಟ್ಟು ಪಾಂಚಾಲಿಯು ಕೈಯಲ್ಲಿ ತೆಗೆದುಕೊಂಡುದಾದರೆ ಆ ಅನ್ನವು ತಾನು ಊಟಮಾಡದಿರುವವರೆಗೂ ಅಕ್ಷಯವಾಗುತ್ತಿರುವುದೆಂದು ಹೇಳಿ ಅಂತರ್ಧಾನನಾದನು. ಧರ್ಮಜನು ಕೊಂಚವಾಗಿ ಅನ್ನವನ್ನು ಪಾಕಮಾಡಿಸಿ ಪಾಂಚಾಲಿಯುಕೈಯಲ್ಲಿದ್ದ ಆ ಪಾತ್ರೆಯಲ್ಲಿ ಡಲು ಆ ಅನ್ನವು ಅಕ್ಷಯವಾಗುತ್ತಿರಲು ಅದರಿಂದ ತನ್ನೊಡನೆ ಬಂದಿದ್ದ ಬ್ರಾಹ್ಮಣರನ್ನೆಲ್ಲಾ ತೃಪ್ತಿಗೊಳಿಸಿ ತನ್ನ ತಮ್ಮಂದಿರೂ ಊಟಮಾಡಿದ ಬಳಿಕ ತಾನೂ ಭುಜಿಸುತ್ತಿದ್ದನು. ಹೀಗೆ ಎಲ್ಲರೂ ಭೋಜನಮಾಡಿದ ತರುವಾಯ ಉಳಿದ ಅನ್ನವನ್ನು ದ್ರೌಪದಿಯು ಭುಜಿಸಲು ಆ ಪಾತ್ರೆಯು ಬರಿದಾಗುತ್ತಿತ್ತು. ಹೀಗೆ ಪಾಂಡವರು ಅರಣ್ಯವಾಸಮಾಡಿದಷ್ಟುಕಾಲವು ಆ ಪಾತ್ರೆಯಿಂದಲೇ ತಾವೂ ತಮ್ಮಲ್ಲಿ ಬಂದವರೂ ಭೋಜನವನ್ನು ಮಾಡುತ್ತಾ ಕಷ್ಟವನ್ನು ಅರಿಯ ದಿದ್ದರು. ಅನ್ನವೆಲ್ಲವೂ ಸೂರ್ಯನಿಂದಲೇ ಉಂಟಾಗುವುದು. (ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂತತಃ ಪ್ರಜಾಃ) ಸೂರ್ಯನ ತೇಜಸ್ಸಿನ ಶಾಖವು ಭೂಮಿ ಯಮೇಲೂ ವಾಯುವಿನಮೇಲೂ ಪ್ರಸರಿಸಿ ಅದರಿಂದಲೇ ಬೀಜವು ಮೊಳೆತು ಪೈರಾಗಿ ಫಲಹೊಂದಿ ಬೆಳೆದು ಈರೀತಿಯಲ್ಲಿ ಅನೇಕರೂಪಗಳಿಂದ ಅನ್ನವಾಗು ವುದು. ಅಪೇಕ್ಷಿಸಿದಲ್ಲಿ ಸೂರ್ಯನು ಈ ಕಾರ್ಯವನ್ನು ಜಾಗ್ರತೆಯಲ್ಲಿಯೇ ಮಾಡ ಬಲ್ಲನು. ಯಾರಾದರೂ ತನ್ನ ಭಕ್ತರು ಇತರರನ್ನು ಕಾಪಾಡುವುದಕ್ಕಾಗಿ ಅನ್ನ ವನ್ನು ಕೋರಿದುದಾದರೆ ಅಂತಹ ಸಂದರ್ಭದಲ್ಲಿ ಲೋಕಬಾಂಧವನು ಬೇಗಬೇಗನೆ ಅನ್ನವನ್ನು ಕಲ್ಪಿಸಿಕೊಡುವನು.

ಈಪ್ರಕಾರ ಕಷ್ಟಯುಕ್ತವಾದ ಅರಣ್ಯವಾಸವು ಪಾಂಡವರಿಗೆ ಆರಂಭವಾ ಯಿತು. ಈ ಸಮಯದಲ್ಲಿ ವಿದುರನು ಅವರುಗಳನ್ನು ನೋಡಲು ಕಾಡಿಗೆಬಂದನು. "ನಾನು ದುರ್ಯೋಧನನನ್ನು ತ್ಯಜಿಸಿ ಪಾಂಡವರನ್ನು ಕರೆಸೆಂದು ಧೃತರಾಷ್ಟ್ರನನ್ನು ಬೇಡಿಕೊಂಡೆನು. ಆತನು ಕೋಪಿಸಿ ನನ್ನನ್ನು ಹೊರಟುಹೋಗೆಂದು ಅಪ್ಪಣೆಮಾಡಿ

ದನು. ಪರರು ತನಗೆ ಮಾಡಿದ ಅಪಕಾರಗಳನ್ನು ತಾಳ್ಮೆಯಿಂದ ಸಹಿಸಿದ ಬುದ್ಧಿವಂತನು ಕೊನೆಗೆ ವಿಜಯವನ್ನು ಹೊಂದುವನೆಂಬುದು ನಿಶ್ಚಯವಾದುದರಿಂದ ನೀನು ತಾಳ್ಮೆಯನ್ನು ಬಿಡದಿರು'' ಎಂದು ವಿದುರನು ಹೇಳಿದನು. ಧರ್ಮಜನು ನೀನು ಹೇಳಿದಂತೆಯೇ ನಡೆಸುವೆನೆಂದುಹೇಳಿದನು. ಅನಂತರದಲ್ಲಿ ಧೃತರಾಷ್ಟ್ರನು ಚೆನ್ನಾಗಿ ಆಲೋಚಿಸದೇ ಮಾಡಿದ ಕೆಲಸಕ್ಕಾಗಿ ಚಿಂತೆಪಟ್ಟು ವಿದುರನನ್ನು ಕರೆಕಳುಹಿಸಿ ಆತನು ಪರಮ ವಿಧೇಯನಾದುದರಿಂದ ಪುನಃ ಅಲ್ಲಿಗೆ ಹೋಗಿ ವಿಶ್ವಾಸದೊಡನೆ ಕೂಡಿ ಅಣ್ಣನನ್ನು ನೋಡಿ ನನಗೆ ನಿನ್ನ ಮಕ್ಕಳೂ ಪಾಂಡವರಂತೆಯೇ ಪ್ರೀತಿಪಾತ್ರರು; ಆದರೂ ಪಾಂಡವರು ಈಗ ತೊಂದರೆಗಳನ್ನನುಭವಿಸುತ್ತಿರುವುದರಿಂದ ನನ್ನ ಮನಸ್ಸಿನಲ್ಲಿ ಅವರ ವಿಷಯದಲ್ಲಿ ಕೇವಲ ಕಾರುಣ್ಯವುಂಟಾಯಿತೆಂದು ಹೇಳಿದನು. ಅಷ್ಟರಲ್ಲಿ ಕರ್ಣನಿಂದ ಪ್ರೇರಿತನಾದ ದುರ್ಯೋಧನನು ತಮ್ಮಂದಿರೊಡಗೂಡಿ ಪಾಂಡವರಿದ್ದಸ್ಥಳಕ್ಕೆ ಹೋಗಿ ಅವರನ್ನು ಕೊಲ್ಲಲು ಯತ್ನಿಸಿದನು. ಭಗವಂತನಾದ ವ್ಯಾಸನು ತನ್ನ ದಿವ್ಯದೃಷ್ಟಿಯಿಂದ ಅದನ್ನು ತಿಳಿದು ಅವರಲ್ಲಿಗೆ ಬಂದು ಆ ಕೆಲಸವು ತಪ್ಪೆಂದು ನಿವಾರಿಸಿ ಅವರನ್ನು ಹಿಂತಿರುಗಿಸಿ ಧೃತರಾಷ್ಟ್ರನ ಬಳಿಗೆ ಹೋಗಿ ಹೀಗೆಂದನು. ನೀನು ನಿನ್ನ ಮಗನನ್ನು ದೌಷ್ಟ್ಯದಿಂದ ಬಿಡಿಸು, ಇಲ್ಲದಿದ್ದರೆ ನಿಮಗೆ ನಾಶವುಂಟಾಗುವುದು. ಕೌರವರೆಲ್ಲರೂ ಸುಖವಾಗಿರಬೇಕೆಂದು ಅಪೇಕ್ಷಿಸುವಿಯಾದರೆ ದುರ್ಯೋಧನನನ್ನು ಪಾಂಡವರೊಡನೆ ಸ್ನೇಹಮಾಡಲು ಕಳುಹಿಸು ಎಂದು ಹೇಳಿ ವ್ಯಾಸನು ಅದೃಶ್ಯನಾದನು. ಅನಂತರದಲ್ಲಿ ಮೈತ್ರೇಯನೆಂಬ ಮಹರ್ಷಿಯು ಅಲ್ಲಿಗೆ ಬಂದು ಆ ಅಂಧನೃಪತಿಯನ್ನು ನೋಡಿ ಹೀಗೆಂದನು. ನಿನ್ನ ಮಕ್ಕಳು ಇಂತಹ ಅಕೃತ್ಯಗಳನ್ನು ಮಾಡುತಿರಲು ನೀನು ಸುಮ್ಮನಿರುವುದು ನ್ಯಾಯವೇ? ಪರಮಚಂಡಾಲನು ಮಾಡುವ ಕೃತ್ಯಗಳಂತಹ ಈ ಪಾಪಕೃತ್ಯಗಳಿಂದಲೇ ನಿನ್ನನ್ನು ದೊಡ್ಡವರು ಮನ್ನಿಸದಿರುವರು ಎಂದು ಹೇಳಿ ದುರ್ಯೋಧನನ ಕಡೆಗೆ ತಿರುಗಿ ಮೃದುವಚನಗಳಿಂದ ಪಾಂಡವರೊಡನೆ ಕಲೆತು ಮೈತ್ರಿಯಿಂದಿರೆಂದು ಬೇಡಿಕೊಂಡನು. ದುರ್ಯೋಧನನು ಆ ಮಹರ್ಷಿಯ ಮಾತುಗಳನ್ನು ಲಕ್ಷ್ಯಮಾಡದೆ ತೊಡೆಯನ್ನಪ್ಪಳಿಸುತ್ತ ಆತನನ್ನು ಪರಿಹಾಸಮಾಡಲು ಆ ಮುನೀಂದ್ರನು ಅದಕ್ಕಾಗಿ ಕೋಪಿಸಿ ಆ ದುರಾತ್ಮನನ್ನು ನೋಡಿ ನೀನು ಮಾಡಿದ ಅಪರಾಧಗಳಿಗಾಗಿ ಮುಂದೆ ಆಗುವ ಮಹಾಯುದ್ಧದಲ್ಲಿ ಭೀಮನು ಉದ್ದಾಮಬಲದಿಂದ ಮೆರೆಯುತ್ತ ತನ್ನ ಗದೆಯಿಂದ ನಿನ್ನ ತೊಡೆಯು ಮುರಿಯುವಂತೆ ಹೊಡೆಯುವ ಸಮಯದಲ್ಲಿ ಈ ಪಾಪಕೃತ್ಯದ ಫಲವನ್ನು ಅನುಭವಿಸುವಿಯೆಂದು ಶಾಪಕೊ

ಟ್ಟನು. ಧೃತರಾಷ್ಟ್ರನು ಆ ಶಾಪದಿಂದ ಅನುಗ್ರಹಿಸಬೇಕೆಂದು ಆ ಮುನಿನಾಥನನ್ನು ಬೇಡಿಕೊಳ್ಳಲು ಆತನು ದುರ್ಯೋಧನನು ಪಾಂಡವರೊಡನೆ ಸಂಧಿಮಾಡಿಕೊಂಡಲ್ಲದೆ ಅದು ನಿವೃತ್ತಿಯಾಗಲಾರದೆಂದು ಹೇಳಿ ತನ್ನ ಹಿತೋಕ್ತಿಗಳನ್ನು ಅನಾದರಣೆಮಾಡಿದುದಕ್ಕಾಗಿ ಅವರೊಡನೆ ಪುನಃ ಏನನ್ನೂ ಮಾತನಾಡದೆ ಹೊರಟುಹೋದನು. ಈ ಪ್ರಕಾರ ದುರ್ಯೋಧನನಿಗೆ ಬುದ್ಧಿವಾದವನ್ನು ಹೇಳುವುದಕ್ಕಾಗಿ ಬಂದವರೆಲ್ಲರೂ ಹೇಗೆ ಅಕೃತಕೃತ್ಯರಾಗಿ ಹಿಂತಿರುಗಿಹೋದರೋ ಅದೇರೀತಿಯಲ್ಲಿ ಮೈತ್ರೇಯಮಹರ್ಷಿಯೂ ಸಹ ಹಿಂತಿರುಗಿಹೋದನು.

ಇತ್ತ ಶ್ರೀಕೃಷ್ಣನು ಪಾಂಡವರಬಳಿಗೆ ಬಂದು ಜೂಜಾಡುವ ಸಮಯದಲ್ಲಿ ತಾನು ಧೃತರಾಷ್ಟ್ರನ ಸಭೆಗೆಬಂದು ಅದನ್ನು ನಿವಾರಣೆ ಮಾಡದಿರಲು ಕಾರಣವನ್ನು ತಿಳಿಸಲುಪಕ್ರಮಿಸುವಷ್ಟರಲ್ಲಿ ದ್ರೌಪದಿಯು ಆತನ ಪಾದಗಳಿಗೆ ನಮಸ್ಕರಿಸಿ ಗೊಳೋ ಎಂದು ಅಳುತ್ತಾ ಹೀಗೆಂದಳು. ಮಧುಸೂದನ! ನನಗೆ ಪತಿಯರೂ ಮಕ್ಕಳೂ ಬಂಧುಗಳೂ ಸಹೋದರರೂ ತಂದೆಯೂ ನೀನೂ ಇಲ್ಲದಂತೆಯೇ ಆಯಿತು. ಹಾಗಲ್ಲದಿದ್ದರೆ ನನ್ನನ್ನು ಕೌರವರು ಆ ಸಭೆಯಲ್ಲಿ ಅವಮಾನಪಡಿಸುವಾಗ ನೀವೆಲ್ಲರೂ ಸುಮ್ಮನೆ ನೋಡುತ್ತಿದ್ದಿರಾ ? ಎಂದು ಕೋಪಿಸಿರುವ ಆಕೆಯನ್ನು ಆ ಸ್ವಾಮಿಯು ಸಮಾಧಾನಪಡಿಸುತ್ತಾ ಇಂತೆಂದನು. ‹‹ತಾಯೆ! ಚಿಂತಿಸಬೇಡ, ಎಂದಿನಂತೆ ನೀನು ರಾಜರಿಗೆ ರಾಣಿಯಾಗಿ ಪ್ರಕಾಶಿಸುವಿ. ಆಕಾಶವು ಬಿದ್ದಾಗ್ಯೂ ಹಿಮವತ್ಪರ್ವತವು ಒಡೆದುಹೋದಾಗ್ಯೂ ಭೂಮಿಯು ಕುಸಿದುಹೋದಾಗ್ಯೂ ಸಮುದ್ರವು ಬತ್ತಿಹೋದಾಗ್ಯೂ ನನ್ನ ಮಾತು ವ್ಯರ್ಥವಾಗಲಾರದು.' ಎಂದು ಸಮಾಧಾನಪಡಿಸಿದಾಗ್ಯೂ ದ್ರೌಪದಿಯು ಶಾಂತಿಯನ್ನು ಪಡೆಯದೆ ಧರ್ಮನಂದನನನ್ನು ನೋಡಿ ನಮಗೆ ಕೌರವರು ಮಾಡಿದ ಅಪಕಾರಗಳಿಗೆ ತಡಮಾಡದೆ ಜಾಗ್ರತೆಯಾಗಿ ಅವರೊಡನೆ ಯುದ್ಧಕ್ಕೆ ಹೊರಡುವವನಾಗೆಂದು ಪ್ರಾರ್ಥಿಸಲು ಯುಧಿಷ್ಠಿರನು ಕ್ಷಮಾಪಣೆಯ ವಿಷಯವಾಗಿ ಈ ಪ್ರಕಾರ ಪ್ರಸಂಗಮಾಡಿದನು. ದ್ರೌಪದೀ! ಕೇಳು, ಪರರು ತನ್ನನ್ನು ಬೈದರೆ ಪುನಃ ಅವರನ್ನು ಬೈದರೂ ಪರರಿಂದ ಅವಮಾನಿಸಲ್ಪಟ್ಟು ತಾನು ಅವರನ್ನು ಅಗೌರವಿಸಿದರೂ ಪರರು ತನ್ನನ್ನು ಹೊಡೆದಾಗ ತಾನು ಅವರನ್ನು ಹೊಡೆದದ್ದಾದರೂ ತಂದೆಗಳು ಮಕ್ಕಳನ್ನೂ ಮಕ್ಕಳು ತಂದೆಗಳನ್ನೂ ಕೊಲ್ಲುವುದಾದರೂ ಪತಿಯರು ಭಾರ್ಯೆಯರನ್ನೂ ಭಾರ್ಯೆಯರು ಪತಿಯರನ್ನೂ ಕಾಡುವುದಾದರೂ ಈ ರೀತಿಯಲ್ಲಿ ಲೋಕವು ಕ್ರೋಧಕ್ಕೆ ಆಶ್ರಯವಾಗುವುದಾದರೆ ಅಲ್ಲಿ ಪ್ರಜೋತ್ಪತ್ತಿಯು

ಹೇಗುಂಟಾಗುವುದು. ಪುರುಷನು ಎಂತಹ ಕಷ್ಟದಲ್ಲಾದರೂ ಸೈರಣೆಯನ್ನು ತಾಳ ಬೇಕು. ಬಲವಂತನಾದವನು ತನ್ನನ್ನು ಬೈದರೂ ಹೊಡೆದರೂ ಕೋಪವುಂಟಾಗು ವಂತೆ ಮಾಡಿದರೂ ಕೋಪವನ್ನು ಗೆದ್ದವನೇ ನಿಜವಾಗಿಯೂ ವಿದ್ವಾಂಸನೂ ಪುರು ಷಶ್ರೇಷ್ಠನೂ ಎನ್ನಿಸಿಕೊಳ್ಳುವನು. ಕ್ಷಮೆಯೇ ಬ್ರಹ್ಮ, ಕ್ಷಮೆಯೇ ಸತ್ಯ, ಕ್ಷಮೆ ಯೇ ತಪಃಫಲ, ಕ್ಷಮೆಯೇ ತಪಸ್ಸನ್ನು ರಕ್ಷಿಸುವುದು, ಕ್ಷಮೆಯೇ ತಪಸ್ಸು, ಕ್ಷಮೆಯೇ ಪವಿತ್ರತೆಯು, ಕ್ಷಮೆಯಿಂದಲೇ ಪ್ರಪಂಚವು ನಿಂತಿರುವುದು. ಬುದ್ಧಿವಂ ತನು ಸದಾಕ್ಷಮೆಯನ್ನು ಅಭ್ಯಸಿಸಬೇಕು. ಎಲ್ಲರನ್ನೂ ಕ್ಷಮಿಸುವ ಪುರುಷನು ಬ್ರ ಹ್ಮಪದವನ್ನು ಹೊಂದುವನು. ಎಂದು ಉಪದೇಶಿಸಿದಾಗ್ಯೂ ದ್ರೌಪದಿಯು ಕೋಪಾ ವಿಷ್ಟಚಿತ್ತೆಯಾಗಿ ಲೋಕಪ್ರವರ್ತನೆಯನ್ನು ದೂರುತ್ತ ಇಂತೆಂದಳು. ಮಗುವು ತನ್ನ ಇಷ್ಟಬಂದಂತೆ ಬೊಂಬೆಯನ್ನು ಮಾಡಿ ಪುನಃ ಒಡೆದುಹಾಕುವ ತೆರದಲ್ಲಿ ಈಶ್ವರನು ತಾನು ಸೃಷ್ಟಿಸುವ ಪ್ರಾಣಿಗಳೊಡನೆ ಆಟವಾಡುತ್ತಿರುವನು. ಸತ್ಪುರುಷರು ಕಷ್ಟಗ ಳಿಗೀಡಾಗಿ ಕುಂದುತಿರಲು ದುರ್ಜನರು ಕ್ಷೇಮವುಳ್ಳವರಾಗಿರುತ್ತಿರುವಲ್ಲಿ ಧರ್ಮ ದಿಂದ ಪ್ರಯೋಜನವೇನು ? ಎನ್ನಲು ಯುಧಿಷ್ಠಿರನು ಆ ಲಲನೆಯು ಹೇಳಿದ ವಿಚಿ ತ್ರವಾದ ವಚನಗಳನ್ನೂ ಮನೋಹರವಾದ ಮಾತುಗಳ ಸೊಬಗನ್ನೂ ಸ್ತೋತ್ರಮಾ ಡುತ್ತ ಮತ್ತು ಅಕೆಯನ್ನು ಕುರಿತು ಹೀಗೆಂದನು. ತರುಣೀಮಣಿ! ನಿನ್ನ ಮಾತುಗಳು ಯುಕ್ತಿಯುಕ್ತಗಳಾಗಿದ್ದರೂ ಅವು ನಾಸ್ತಿಕ್ಯವನ್ನು ಬೋಧಿಸುವುವು. ಫಲಾಕಾಂಕ್ಷೆ ಯಿಂದ ನಾನು ಯಾವಾಗಲೂ ಕರ್ಮಗಳನ್ನು ಮಾಡಿದವನಲ್ಲ. ದಾನಮಾಡತಕ್ಕುದು ಯುಕ್ತವಾದುದರಿಂದ ದಾನವನ್ನು ಮಾಡುವೆನು. ಧರ್ಮಫಲಗಳನ್ನು ಹೊಂದಬೇ ಕೆಂದು ಕೋರದೆ ವೇದವಿಧಿಗಳನ್ನು ಮೀರಲಾಗದೆಂಬ ಯೋಚನೆಯಿಂದಲೂ ಸತ್ಪು ರುಷರ ಆಚರಣೆಗಳನ್ನು ನೋಡುವುದರಿಂದಲೂ ಧರ್ಮವನ್ನಾಚರಿಸುವೆನು. ಯಜ್ಞ ಮಾಡುವುದು ವಿಧಿವಿಹಿತವಾದುದರಿಂದ ಯಜ್ಞವನ್ನು ಮಾಡುವೆನು. ನನ್ನ ಮನಸ್ಸು ಪ್ರಯತ್ನವಿಲ್ಲದೆ ತಾನಾಗಿಯೇ ಧರ್ಮವನ್ನಾಚರಿಸುವ ಸ್ವಭಾವವುಳ್ಳುದು. ಫಲಾಪೇ ಕ್ಷೆಯಿಂದ ಧರ್ಮವನ್ನಾಚರಿಸುವವನು ಧರ್ಮವನ್ನು ವಿಕ್ರಯಮಾಡುವ ನೀಚಮನು ಷ್ಯನೆನಿಸುವನು. ಅವನನ್ನು ಸತ್ಪುರುಷರೊಂದಿಗೆ ಗಣಿಸಲಾಗದು. ಆದರೂ ಕರ್ಮ ಗಳಿಗೆ ತಕ್ಕ ಫಲಗಳೇನೋ ಉಂಟು. ಧರ್ಮಾಚರಣೆಯಿಂದ ಕಡೆಗೆ ಸಂಪತ್ತುಂಟಾ ಗುವುದು ದೇವರ ಕಟ್ಟಳೆಯೇ. ಆದರೆ ಪ್ರಾಜ್ಞರೂ ಶಾಂತಮನಸ್ಕರೂ ಪರಿಶುದ್ಧಾ ತ್ಮರೂ ಮಾತ್ರ ಆ ದೇವರ ಕಟ್ಟಳೆಯ ವಿವರವನ್ನು ಅರಿತಿರುವರು. ಆದುದರಿಂದ

ಧರ್ಮದಫಲವು ನಿನಗೆ ಪ್ರಕೃತದಲ್ಲಿ ಕಾಣದಿದ್ದಾಗ್ಯೂ ಈಶ್ವರನಲ್ಲಿಯೂ ಶಾಸ್ತ್ರದಲ್ಲಿಯೂ ನಿನಗೆ ಸಂಶಯವುಂಟಾಗಬಾರದು. ಆದುದರಿಂದ ಯಜ್ಞಗಳನ್ನು ಮನಃಪೂರ್ವಕವಾಗಿಯೂ ನಮ್ರತೆಯಿಂದಲೂ ಆಚರಿಸಬೇಕು. ಈ ಲೋಕದಲ್ಲಿ ಕರ್ಮಗಳಿಗೆ ತಕ್ಕ ಫಲಗಳಿರುವುವು. ಧರ್ಮವು ಶಾಶ್ವತವಾದುದು. ಬ್ರಹ್ಮನು ಇದನ್ನು ತಾನೇ ತನ್ನ ಪುತ್ರರಿಗೆ ಉಪದೇಶಿಸಿದನೆಂದು ಕಶ್ಯಪವಚನವಿರುವುದು. ಆದುದರಿಂದ ನಿನ್ನ ಹೃದಯದಲ್ಲಿ ಸಂದೇಹಗಳು ಸೂರ್ಯೋದಯವಾದಮೇಲೆ ಮಂಜಿನತೆರದಲ್ಲಿ ತೊಲಗಿ ಹೋಗಲಿ. ಇದೆಲ್ಲವನ್ನೂ ತಿಳಿದು ನಾಸ್ತಿಕ್ಯವನ್ನು ಬಿಟ್ಟು ಆಸ್ತಿಕ್ಯವನ್ನು ಮನಸ್ಸಿನಲ್ಲಿ ಸ್ಥಿರಗೊಳಿಸು. ಸರ್ವಭೂತಗಳಿಗೆ ಒಡೆಯನಾದ ಈಶ್ವರನನ್ನು ನಿಂದಿಸಬೇಡ. ಆತನನ್ನು ತಿಳಿಯುವುದಕ್ಕೆ ಪ್ರಯತ್ನಿಸು. ಆತನನ್ನು ನಮಸ್ಕರಿಸು. ಈ ತೆರದ ಬುದ್ಧಿಯು ನಿನಗೆ ಉಂಟಾಗದಿರಲಿ. ಯಾರ ಅನುಗ್ರಹದಿಂದ ಆತನ ಭಕ್ತನಾದ ಮನುಷ್ಯನು ಅಮೃತತ್ವವನ್ನು ಪಡೆಯುವನೋ ಅಂತಹ ಪರಮೇಶ್ವರನನ್ನು ಒಂದುವೇಳೆಯಾದರೂ ಅವಹೇಳನ ಮಾಡಬೇಡ. ಎಂದು ಧರ್ಮಜನು ಬೋಧಿಸಲು ದ್ರೌಪದಿಯು ಪುನಃ ಆತನನ್ನು ಕುರಿತು ನಿನ್ನ ರಾಜ್ಯವನ್ನು ಅವರು ತೆಗೆದುಕೊಂಡಲ್ಲಿ ಪುನಃ ಅತನಿಂದ ನೀನು ತೆಗೆದುಕೊಳ್ಳತಕ್ಕುದೂ ನ್ಯಾಯವಲ್ಲವೇ, ಎಂದು ಕ್ರೋಧಾವಿಷ್ಟಳಾಗಿ ಕೇಳಿದಳು. ಭೀಮನು ಕೋಪವುಕ್ಕುತಿರಲು ಅಣ್ಣನನ್ನು ನೋಡಿ ಇಂತಹ ನಮ್ಮಗಳ ದುರವಸ್ಥೆಗೆ ನೀನೇ ಕಾರಣನೆಂದು ಕಾಠಿಣ್ಯದಿಂದ ಹೇಳುತ್ತಾ ಹೀಗೆಂದನು. ‘ಧರ್ಮವೊಂದಿದ್ದರೆ ಪ್ರಯೋಜನವಿಲ್ಲ. ಕ್ಷತ್ರಿಯರು ಪರಾಕ್ರಮವನ್ನು ತೋರಿಸಿ ಯುದ್ಧ ಮಾಡುವುದೇ ಯುಕ್ತ. ನಾವು ಹೊರಟು ಯುದ್ಧಮಾಡಿ ದುರ್ಯೋಧನನಿಂದ ರಾಜ್ಯವನ್ನು ತೆಗೆದುಕೊಳ್ಳೋಣ.’ ಎನ್ನಲು ಧರ್ಮತನಯನು ಸ್ಥೈರಣೆಯಿಂದ ಕೂಡಿ ಇಂತೆಂದನು. ‘ನಾನೇನೋ ನಿಂದಾರ್ಹನೇ ಅಹುದು, ನೀನು ಮುಳ್ಳುಗಳಿಗೆ ಸಮಾನವಾದ ಇಂತಹ ಮಾತುಗಳಿಂದ ನನ್ನನ್ನು ಚುಚ್ಚಿ ನೋಯಿಸುವೆಯಾದರೂ ನಿನ್ನನ್ನು ನಾನು ನಿಂದಿಸಲಾರೆನು, ಏಕೆಂದರೆ ಜೂಜಾಡುವ ಸಮಯದಲ್ಲಿ ನಾನು ಪರವಶಹೊಂದಿದ ನಿಮಿತ್ತ ನಿಮ್ಮೆಲ್ಲರಿಗೂ ಇಂತಹ ಕೇಡು ತಂದೆನು. ಆದರೂ ದಾಳಗಳನ್ನು ಹಾಕುವ ಸಮಯದಲ್ಲಿ ವನವಾಸಕ್ಕೆ ಒಡಂಬಟ್ಟೆನಾದುದರಿಂದ ಆ ಕರಾರನ್ನು ಈಗ ಮೀರಲಾರೆನು. ನೀನು ಇದಕ್ಕೆ ಸಮ್ಮತಿಸದಿರುವವನಾದರೆ ಆಗಲೇ ಇದಕ್ಕೆ ವಿಘ್ನಮಾಡಿರಬೇಕಾಗಿತ್ತು. ನಾನು ಮಾತನ್ನುಕೊಟ್ಟಮೇಲೆ ಈಗ ಅದನ್ನು ತಪ್ಪುವುದು ಯೋಗ್ಯವಲ್ಲ.

ನನ್ನ ಮಾತು ಯಾವಾಗಲೂ ಅಸತ್ಯವಾಗಲಾರದು. ಪ್ರಾಣಕ್ಕಿಂತಲೂ ಸ್ವರ್ಗಸುಖಕ್ಕಿಂತಲೂ ಧರ್ಮವೇ ಶ್ರೇಷ್ಠವೆಂದು ನಾನು ತಿಳಿಯುವೆನು. ರಾಜ್ಯ, ಪುತ್ರರು, ಕೀರ್ತಿ, ಸಂಪತ್ತು ಎನ್ನುವವುಗಳೆಲ್ಲವೂ ಸತ್ಯದ ಷೋಡಶಾಂಶಕ್ಕೆ ಸರಿಬರಲಾರವು', ಎಂದು ಹೇಳಲು ವಾಯುಪುತ್ರನು ಶಾಂತಿಪಡೆಯದೆ ಯುದ್ಧಮಾಡುವುದೇ ಯುಕ್ತವೆಂದು ಒತ್ತಿಹೇಳುತ್ತಿದ್ದನು. ಅನಂತರ ಯುಧಿಷ್ಠಿರನು ಬೇಸರಗೊಂಡು ಅವನ ಸ್ವಭಾವಕ್ಕೆ ತಕ್ಕ ರೀತಿಯಲ್ಲಿ ಹೀಗೆಂದನು. ನೀನು ಯುದ್ಧಕ್ಕೆ ನಿಂತರೆ ಭೀಷ್ಮ ದ್ರೋಣ ಕೃಪ ಕರ್ಣರು ನಿನಗೆ ಇದುರಾಗುವರು. ನೀನು ಅವರನ್ನು ಜಯಿಸಬಲ್ಲೆಯಲ್ಲವೇ ? ಎಂದು ಹೇಳಲು ಭೀಮನು ಏನನ್ನೂ ಹೇಳದೆ ಖಿನ್ನಮನಸ್ಕನಾಗಿ ಸುಮ್ಮನಾದನು. ಅಷ್ಟರಲ್ಲಿ ವ್ಯಾಸಋಷಿಯು ಅಲ್ಲಿಗೆ ಬಂದು ಧರ್ಮಜನನ್ನು ಪ್ರತ್ಯೇಕವಾಗಿ ಕರೆದು ದೇವತೆಗಳಿಂದ ಅಸ್ತ್ರಗಳನ್ನು ಹೊಂದುವುದಕ್ಕಾಗಿ ಅರ್ಜುನನನ್ನು ಕಳುಹಿಸಬೇಕೆಂದು ಹೇಳಿದನು. ಅಲ್ಲದೆ ಶಕ್ತ್ಯಸ್ತ್ರಗಳ ವಿದ್ಯೆಯನ್ನು ಧರ್ಮರಾಯನಿಗೆ ಬೋಧಿಸಿ ಇದನ್ನು ನೀನು ಅರ್ಜುನನಿಗೆ ಕಲಿಸಿಕೊಡೆಂದು ಹೇಳಿದನು. ಅಲ್ಲದೆ ಅರ್ಜುನನು ಅಸ್ತ್ರಾರ್ಥವಾಗಿ ನಿಮ್ಮನ್ನು ಬಿಟ್ಟುಹೋದಾಗ ನೀವು ನಾಲ್ವರೂ ಪುಣ್ಯಕ್ಷೇತ್ರಗಳಿಗೆ ತಿರುಗುತ್ತಿರಿ ಎಂದು ಹೇಳಿ ಹೊರಟುಹೋದನು.

ಕೂಡಲೆ ವ್ಯಾಸನು ಕೊಟ್ಟ ಅಸ್ತ್ರವಿದ್ಯೆಯನ್ನು ಧರ್ಮತನಯನು ಇಂದ್ರತನಯನಿಗೆ ಉಪದೇಶಿಸಿ ನೀನು ಇಂದ್ರನಬಳಿಗೆ ಹೋಗಿ ದಿವ್ಯಾಸ್ತ್ರಗಳನ್ನು ಪಡೆಯುವುದೆಂದು ಕಳುಹಿಸಿದನು. ಅರ್ಜುನನು ಅಣ್ಣತಮ್ಮಂದಿರನ್ನೂ ದ್ರೌಪದಿಯನ್ನೂ ಬಿಟ್ಟು ಹೊರಟು ಬ್ರಾಹ್ಮಣರ ಆಶೀರ್ವಾದಗಳನ್ನು ಕೈಗೊಂಡು ಒಂಟಿಯಾಗಿಹೊರಟು ಅನೇಕದೂರ ಪ್ರಯಾಣಮಾಡಿ ಹಿಮಾಲಯಪ್ರಾಂತ್ಯವನ್ನುಸೇರಿ ಅದನ್ನೂ ದಾಟಿ ಇಂದ್ರಕೀಲಪರ್ವತವನ್ನು ಸೇರಲು ಅಲ್ಲಿ 'ನಿಲ್ಲು' ಎಂದು ಒಂದು ಧ್ವನಿಯು ಕೇಳಬಂದಿತು. ಅದೇನೆಂದುಯೋಚಿಸಿ ಸುತ್ತುಮುತ್ತುನೋಡಿ ಒಂದುಮರದಕೆಳಗೆ ವಿರಾಜಮಾನನಾಗಿ ಕುಳಿತಿದ್ದ ಒಬ್ಬ ತಾಪಸಶ್ರೇಷ್ಠನನ್ನು ನೋಡಿದನು. ಆ ತಾಪಸೋತ್ತಮನು ಅರ್ಜುನನನ್ನು ಕುರಿತು ಇದು ಅತ್ಯಂತಶಾಂತಿಯಿಂದ ಕೂಡಿದ ತಪೋವನವು, ನಿನ್ನ ಬಿಲ್ಲನ್ನು ಬಿಸಾಡೆಂದು ಎಷ್ಟುವಿಧಗಳಿಂದ ಹೇಳಿದರೂ ಅರ್ಜುನನು ಹಾಗೆ ಮಾಡಲಿಷ್ಟಪಡಲಿಲ್ಲ. ಅನಂತರ ಆ ತಾಪಸೋತ್ತಮನು ತನ್ನ ನಿಜರೂಪವನ್ನು ತೋರ್ಪಡಿಸಿ 'ನಾನು ಇಂದ್ರನು,ನೀನುಕೋರಿದ ವರಗಳನ್ನು ಕೊಡುವೆನು,ಬೇಡು, ಎನ್ನಲು ಕುಂತೀಪುತ್ರನು ನಮ್ರತೆಯೊಡನೆ ನಮಸ್ಕರಿಸಿ ಎಲೈ ದೇವನೇ, ನಿನ್ನ ಅಸ್ತ್ರಗಳನ್ನು ನನಗೆ ಕೊಡೆಂದು

ಬೇಡಿದನು. ಇಂದ್ರನು ಮಂದಹಾಸದಿಂದ ಕೂಡಿ ಅದಕ್ಕೆ ಬದಲಾಗಿ ಎಂತಹ ಉತ್ತಮಲೋಕವನ್ನಾದರೂ ಕೊಡುವೆನೆನ್ನಲು ಅರ್ಜುನನು ‘ ನನ್ನ ಸಹೋದರರು ಅರಣ್ಯದಲ್ಲಿ ಅನೇಕ ಕಷ್ಟಗಳನ್ನು ಅನುಭವಿಸುತ್ತಿರಲು ನನಗೆ ಸುಖದ ಮಾತೇತಕ್ಕೆ ’ ಎಂದು ಹೇಳಿದನು. ಆತನ ಧರ್ಮಕ್ಕೂ ನಿಶ್ಚಯಕ್ಕೂ ಮೆಚ್ಚಿ ಇಂದ್ರನಿಂತೆಂದನು. ‘ಮಗು! ನೀನು ತ್ರಿಣೇತ್ರನೂ ಶೂಲಪಾಣಿಯೂ ಸರ್ವಭೂತೇಶ್ವರನೂ ಆದ ಪಾರ್ವತೀ ಪತಿಯನ್ನು ನೋಡಿದ ಸಮಯದಲ್ಲಿ ನನ್ನ ದಿವ್ಯಾಯುಧಗಳನ್ನೆಲ್ಲಾ ನಿನಗೆ ಕೊಡುವೆನು. ಆದಕಾರಣ ನೀನು ಪರಮೇಶ್ವರನ ಸಂದರ್ಶನವುಂಟಾಗುವುದಕ್ಕಾಗಿ ಪ್ರಯತ್ನಮಾಡು. ಆ ದೇವನನ್ನು ನೋಡಿದ ತರುವಾಯ ನಿನ್ನ ಕೋರಿಕೆಗಳು ಲಭಿಸುವುವು.’ ಎಂದು ಹೇಳಿ ಇಂದ್ರನು ಅಂತರ್ಧಾನನಾದನು. ಅರ್ಜುನನು ಉಗ್ರವಾದ ತಪಸ್ಸನ್ನಾಚರಿಸುತ್ತಾ ಆ ಸ್ಥಳದಲ್ಲೇ ನಿಂತನು.

ಖಾಂಡವವೆಂಬ ಅರಣ್ಯವು ಸುಟ್ಟುಹೋದ ತರುವಾಯ ಪಾಕಶಾಸನನು ಅರ್ಜುನನಿಗೆ ಪ್ರತ್ಯಕ್ಷನಾಗಿ ಆತನು ಮಹಾದೇವನ ಅನುಗ್ರಹವನ್ನು ಹೊಂದಿದಬಳಿಕ ದಿವ್ಯಾಸ್ತ್ರಗಳನ್ನು ಕೊಡುವೆನೆಂದು ಮಾತುಕೊಟ್ಟಿದ್ದ ವೃತ್ತಾಂತವು ನಿಮಗೆ ಜ್ಞಾಪಕಬರುವುದಲ್ಲವೇ, ಆ ಮಾತನ್ನು ನಡೆಯಿಸಲು ಈಗ ಸಮಯವೊದಗಿತು. ಆದರೆ ಇದಕ್ಕಾಗಿ ಅರ್ಜುನನು ಮೊದಲು ತನ್ನ ಭಾಗದ ಕರಾರನ್ನು ಸಲ್ಲಿಸುವುದು (ಕರ್ತವ್ಯವನ್ನೆಸಗುವುದು) ಅವಶ್ಯಕವಾಗಿದ್ದಿತು. ಆದುದರಿಂದ ಮಹಾದೇವನನ್ನು ನೋಡುವ ಸಾಮರ್ಥ್ಯವು ತನಗೆ ಉಂಟಾಗುವುದಕ್ಕೋಸ್ಕರ ತನ್ನಲ್ಲಿರತಕ್ಕ ಕಲ್ಮಷವನ್ನು ಕಳೆದುಕೊಳ್ಳುವ ನಿಮಿತ್ತದಿಂದ ಅರ್ಜುನನು ಕಠಿಣವಾದ ತಪಸ್ಸನ್ನು ಕೈಕೊಂಡನು. ಇದಕ್ಕಾಗಿ ಮೊದಲು ಮೊದಲು ಎಲೆಗಳನ್ನೂ ಹಣ್ಣುಗಳನ್ನೂ ತಿನ್ನುತ್ತಾ ಕ್ರಮವಾಗಿ ಅನ್ನವನ್ನು ಕಡಿಮೆಮಾಡುತ್ತಾ ಮೂರುತಿಂಗಳಾಗುವಾಗ್ಯೆ ನಿರಶನವ್ರತವನ್ನು ಕೈಗೊಂಡನು. ಈ ಕಾಲದ ಜನಗಳಂತೆ ತನ್ನ ಹೊಟ್ಟೆಗೆ ತಾನೇ ದಾಸನಾಗದೇ ಅದಕ್ಕೆ ತಾನೊಡೆಯನಾಗಿ ಪ್ರಾಣಧಾರಣೆಗೆ ಆಹಾರವೇ ಮುಖ್ಯವಲ್ಲವೆಂದು ತಿಳಿದಿದ್ದನು. ಕೆಲವು ಕಾಲದಲ್ಲಿ ಮಹಾದೇವನು ಬೇಡರವನ ವೇಷವನ್ನು ತಾಳಿ ಅರ್ಜುನನಿದ್ದೆಡೆಗೆ ಬಂದು ಅಲ್ಲಿ ಒಬ್ಬ ರಾಕ್ಷಸನು ಹಂದಿಯವೇಷವನ್ನು ಧರಿಸಿಕೊಂಡಿರುತ್ತಿರಲು ಅದನ್ನು ಹೊಡೆಯಲೆತ್ನಿಸಲು ವ್ಯಾಧನು ಓಹೋ! ನಿಲ್ಲು, ಇದಕ್ಕೆ ನಾನು ಮೊದಲೇ ಬಿಲ್ಲೇರಿಸಿರುವೆನೆಂದು ಗರ್ಜಿಸಿದನು. ಅರ್ಜುನನು ಅಷ್ಟಕ್ಕೆ ಸುಮ್ಮನಾಗದೇ ಅದರ

ಮೇಲೆ ಬಾಣವನ್ನು ಪ್ರಯೋಗಿಸಲು ವ್ಯಾಧನು ಹೊಡೆದ ಬಾಣವೂ ಇದೂ ಏಕಕಾಲದಲ್ಲಿ ಅದಕ್ಕೆ ತಗಲಿ ಅದು ನೆಲಕ್ಕೆ ಬಿದ್ದು ಸತ್ತಿತು. ಆಗ ಅರ್ಜುನನು ಆ ವ್ಯಾಧನನ್ನು ಕುರಿತು ‹ ಈ ಹಂದಿಯು ನನ್ನದು, ಬೇಟೆಯ ಕಟ್ಟಳೆಯನ್ನು ನೀನು ಮೀರುವೆಯಾದರೆ ನಿನ್ನನ್ನೇ ಕೊಲ್ಲುವೆನು' ಎಂದು ಅವನನ್ನು ಧಿಕ್ಕರಿಸಿದನು. ಕಿರಾತನು ಕಿರುನಗೆಯಿಂದ ‹ ಈ ಹಂದಿಯನ್ನು ಕೊಂದಿರುವನು ನಾನು, ನಿನ್ನೊಡನೆ ಯುದ್ಧಮಾಡಲು ಸಿದ್ಧನಾಗಿರುವೆನು.' ಎಂದನು. ಅರ್ಜುನನು ಗಾಂಡೀವವನ್ನೆತ್ತಿ ಆತನಮೇಲೆ ಬಾಣಗಳನ್ನು ಪ್ರಯೋಗಮಾಡುತ್ತಾ ಬರಲು ಆ ವ್ಯಾಧನು ‹ ನಿನ್ನ ಪೂರ್ಣಸಾಹಸದಿಂದಲೂ ಬಾಣವನ್ನು ಹೊಡೆ' ಎಂದು ಹೇಳಿದನು. ಅರ್ಜುನನು ತನ್ನ ಬಾಣಗಳನ್ನು ಅವನು ಲಕ್ಷ್ಯಮಾಡದಿದ್ದುದನ್ನು ನೋಡಿ ಅವನಮೇಲೆ ಬಾಣವೃಷ್ಟಿಯನ್ನು ಕರೆದನು. ಅವನ ಅಕ್ಷಯತೂಣೀರವೂ ಕೂಡ ಬರಿದಾಗಿ ಇವನಿಗೆ ಬಾಣವಿಲ್ಲದಂತಾಯಿತು. ಬಿಲ್ಲಿನಿಂದ ಆತನನ್ನು ತಿವಿಯುವುದಕ್ಕಾಗಿ ಆ ಕಿರಾತನಮೇಲೆ ಹಾರಲು ಆತನು ಅದನ್ನೇ ಹಿಡಿದುಕೊಂಡು ತಿರುಚಿಬಿಟ್ಟನು. ಅರ್ಜುನನು ಕತ್ತಿಯಿಂದ ಹೊಡೆಯಲು ಆ ಕತ್ತಿಯು ಮುರಿದುಹೋಯಿತು. ಕಲ್ಲುಗಳನ್ನೂ ಮರಗಳನ್ನೂ ಬಿಸುರಿ ಹೊಡೆಯಲು ಅದೆಲ್ಲವನ್ನೂ ಆ ವ್ಯಾಧನು ಸಹಿಸಿಕೊಂಡು ಶಾಂತನಾಗಿದ್ದನು. ಅನಂತರ ಆ ಪಾರ್ಥನು ಅವನಮೇಲೆ ಬಿದ್ದು ಮುಷ್ಟಿಯಿಂದ ಹೊಡೆಯಲು ವ್ಯಾಧನೂ ಅರ್ಜುನನ ಮೇಲೆ ಬಿದ್ದು ಹೊಡೆದು ನೆಲದಮೇಲೆ ತಳ್ಳಿದನು. ಇದರಿಂದ ಅರ್ಜುನನು ಮೂರ್ಛಿತನಾದನು. ಸ್ವಲ್ಪಹೊತ್ತಿನಮೇಲೆ ಅರ್ಜುನನು ಚೇತರಿಸಿಕೊಂಡೆದ್ದು ಅವನ ಮೇಲೆ ಕಾದುವುದನ್ನು ನಿಲ್ಲಿಸಿ ಮೃಣ್ಮಯವಾದ ಲಿಂಗವನ್ನು ಮಾಡಿ ಪೂಜಿಸುತ್ತಾ ಆ ಲಿಂಗದಲ್ಲಿ ಮಹೇಶ್ವರನನ್ನು ಆವಾಹನೆಮಾಡಿ ಪುಷ್ಪಮಾಲಿಕೆಯನ್ನು ಸಮರ್ಪಿಸಿದನು. ಕೂಡಲೆ ಆ ಪುಷ್ಪಮಾಲೆಯು ಆ ಕಿರಾತನ ಕೊರಳಿನಲ್ಲಿದ್ದುದನ್ನು ಅರ್ಜುನನು ಕಂಡು ಆಶ್ಚರ್ಯಪಟ್ಟು ಈತನೇ ಪರಮೇಶ್ವರನಾಗಿರಬಹುದೆಂದು ಯೋಚಿಸಿ ಆತನಬಳಿಗೆ ಹೋಗಿ ಸಾಷ್ಟಾಂಗಪ್ರಣಾಮಮಾಡಲು ಆ ಈಶ್ವರನು ಆತನಿಗೆ ತನ್ನ ಸ್ವರೂಪವು ತಿಳಿಯುವಂತೆ ದಿವ್ಯದೃಷ್ಟಿಯನ್ನಿತ್ತನು. ಅರ್ಜುನನು ಆತನ ದಿವ್ಯಸ್ವರೂಪವನ್ನು ನೋಡಿ, ಸ್ವಾಮಿ, ನಿನ್ನೊಡನೆ ನಾನು ಯುದ್ಧಮಾಡಿದ ನನ್ನ ಅಪರಾಧವನ್ನು ಕ್ಷಮಿಸಿ ಕಾಪಾಡಬೇಕೆಂದು ಪ್ರಾರ್ಥಿಸಲು, ಮಹೇಶನು ಕರುಣಾಪೂರಿತವಾದ ದೃಷ್ಟಿಯಿಂದ ಆತನನ್ನು ನೋಡಿ ಅರ್ಜುನನ ಪೂರ್ವಚರಿತ್ರೆಗಳನ್ನೂ ಅಂತಹ ಉತ್ತಮವಾದ ಮಹಿಮೆಗಳನ್ನೂ ಚೆನ್ನಾಗಿ ತಿಳಿಯುವಂತೆ ಹೇಳಿದನು. ಅನಂತರ

ಅರ್ಜುನನು ತನಗೆ ದಿವ್ಯಾಸ್ತ್ರಗಳನ್ನು ಕೊಟ್ಟು ಅನುಗ್ರಹಿಸಬೇಕೆಂದು ಪ್ರಾರ್ಥಿಸಲು ಶಂಕರನು ತನ್ನ ಪಾಶುಪತಾಸ್ತ್ರವನ್ನು ಅವನಿಗೆ ಅದರ ಪ್ರಯೋಗೋಪ ಸಂಹಾರೋಪದೇಶದೊಡನೆಯೂ ಅದರ ಮಂತ್ರದೊಡನೆಯೂ ಅನುಗ್ರಹಿಸಿ ಕೊಡಲು ದೇವೇಂದ್ರನಿಗೆ ತಿಳಿಯದಿದ್ದ ಆ ಅಸ್ತ್ರವು ಈಶ್ವರನಿಗೆ ಹೇಗೋ ಹಾಗೆ ಅರ್ಜುನನಿಗೆ ವಶವಾಯಿತು. ಪರಮೇಶ್ವರನು ಪುನಃ ಗಾಂಡೀವವನ್ನು ಕೊಟ್ಟು ಸ್ವರ್ಗಲೋಕಕ್ಕೆ ಹೋಗುವುದೆಂದು ಆತನಿಗೆ ಅಪ್ಪಣೆ ಮಾಡಿ ತಾನೂ ಅಂತರ್ಧಾನವನ್ನು ಹೊಂದಿದನು.

ಹೀಗೆ ಅರ್ಜುನನು ಪರಮೇಶ್ವರನ ಸಂದರ್ಶನದಿಂದ ಮನಸ್ಸಿನಲ್ಲಿ ಅತ್ಯಂತ ಆನಂದಪಡುತ್ತಿರುವಲ್ಲಿ ಇಂದ್ರವರುಣ ಕುಬೇರ ಯಮರು ಇತರ ದೇವತೆಗಳೊಡನೆ ಕೂಡಿದವರಾಗಿ ಅಲ್ಲಿಗೆ ಬಂದರು. ಯಮನು ತನ್ನ ಗದೆಯನ್ನೂ ವರುಣನು ತನ್ನ ಪಾಶವನ್ನೂ ಕುಬೇರನು ಶತ್ರುಗಳಿಗೆ ನಿದ್ರೆಬರುವಂತೆ ಮಾಡುವ ಶಕ್ತಿಯುಳ್ಳ ತನ್ನ ಆಯುಧವನ್ನೂ ಅವನಿಗೆ ಕೊಟ್ಟರು. ಇಂದ್ರನು ತನ್ನ ರಥವನ್ನು ಹತ್ತಿ ಸ್ವರ್ಗಕ್ಕೆ ಬರಬೇಕೆಂದು ಅಪ್ಪಣೆಮಾಡಿದನು. ಅನಂತರ ಆ ದೇವತೆಗಳು ಅದೃಶ್ಯರಾಗಲು ದಿವ್ಯ ವಿಮಾನವು ಸ್ವರ್ಗದಿಂದ ಅಲ್ಲಿಗಿಳಿದು ಬರಲು ಅರ್ಜುನನು ಸ್ನಾನಾಹ್ನಿಕಗಳನ್ನುಮಾಡಿ ತಾನು ವಾಸಮಾಡುತ್ತಿದ್ದ ಪರ್ವತಶಿಖರವನ್ನು ಕುರಿತು ನಮಸ್ಕರಿಸಿ ಪ್ರಕಾಶಮಾನವಾಗಿದ್ದ ಆ ದಿವ್ಯರಥವನ್ನು ಹತ್ತಿ ಅಂತರಿಕ್ಷದಲ್ಲಿ ಪ್ರಯಾಣಮಾಡುತ್ತಾ ಬಹು ಎತ್ತರದಲ್ಲಿ ಸಂಚರಿಸುತ್ತಿದ್ದುದರಿಂದ ಭೂಮಿಯಮೇಲಿದ್ದವರಿಗೆ ನಕ್ಷತ್ರದೋಪಾದಿಯಲ್ಲಿ ಕಾಣಬರುತ್ತಾ ಕಾಂತಿಯುಕ್ತಗಳಾಗಿರುವ ಪ್ರದೇಶಗಳನ್ನು ನೋಡುತ್ತಾ ಮುಂದೆಹೊರಟು ಇಂದ್ರನ ಪಟ್ಟಣವಾದ ಅಮರಾವತಿಯನ್ನು ಸೇರಿದನು. ಹೀಗೆ ಸೇರಿ ಪಟ್ಟಣವನ್ನು ಪ್ರವೇಶಿಸಿ ದೇವಗಣಪರಿವೃತನಾಗಿ ಮುಂದಕ್ಕೆಹೊರಟು ಇಂದ್ರನ ಸಭೆಯನ್ನು ಪ್ರವೇಶಿಸಿ ಆತನ ಸಿಂಹಾಸನದ ಬಳಿಗೆ ಹೋಗಿ ತಂದೆಯಾದ ಆತನಿಗೆ ನಮಸ್ಕಾರಮಾಡಲು ಇಂದ್ರನು ಅವನನ್ನೆತ್ತಿ ತನ್ನ ಸಿಂಹಾಸನದಲ್ಲಿ ಕೂಡಿಸಿಕೊಂಡು ತನ್ನ ವಜ್ರಾಯುಧವನ್ನು ಆತನಿಗೆ ಕೊಟ್ಟು ಹೀಗೆಂದನು - ಬಾಲಕನೇ! ನೀನು ಇಲ್ಲಿ ಕೆಲವುಕಾಲ ನಿಂತು ಗಂಧರ್ವಪತಿಯಾದ ಚಿತ್ರಸೇನನಿಂದ ಗಾನವಿದ್ಯೆಯನ್ನೂ ನೃತ್ಯವನ್ನೂ ವಾದ್ಯವಿಶೇಷಗಳನ್ನೂ ನಾದಾನುಸಂಧಾನ ಅಥವಾ ನಾದಬಿಂದು ಕಳಾಶಕ್ತಿಗಳನ್ನೂ ಕಲಿತುಕೋ ಎಂದು ಅಪ್ಪಣೆಮಾಡಿದನು. ಅರ್ಜುನನು ವಿಧೇಯತೆಯೊಡನೆ ಅಲ್ಲಿಯೇ ಐದು ಸಂವತ್ಸರಗಳು ನಿಂತು ತಂದೆಯು ಹೇಳಿದುದೆಲ್ಲವನ್ನೂ ಚೆನ್ನಾಗಿ

ಕಲಿತು ಭೂಲೋಕದಲ್ಲಿ ವನವಾಸದ ಕಷ್ಟಗಳನ್ನು ಅನುಭವಿಸುತ್ತಿರುವ ತನ್ನ ಅಣ್ಣ
ತಮ್ಮಂದಿರನ್ನು ಸ್ಮರಿಸಿ ಆ ಕಡೆ ಹೊರಡಲು ಮನಸ್ಸುಮಾಡಿದನು. ಆತನು ಅಲ್ಲಿಂದ
ಹೊರಡುವ ಪೂರ್ವವೇ ಅವನ ಶರೀರದಂತೆಯೇ ಅವನ ಮನಸ್ಸೂ ಸಹ ಸ್ಥಿರವಾದು
ದಹುದೋ ಅಲ್ಲವೋ ಎಂಬುದನ್ನು ಪರೀಕ್ಷಿಸುವುದಕ್ಕಾಗಿ ಇಂದ್ರನು ಒಂದು ತಂತ್ರ
ವನ್ನು ಮಾಡಿ ಅಲ್ಲಿದ್ದ ಊರ್ವಶಿಯನ್ನು ಅವನ ಬಳಿಗೆ ಕಳುಹಿಸಿದನು. ಆ ಕಾಮಿ
ನಿಯು ಸೌಂದರ್ಯಲಾವಣ್ಯಗಳ ಸೊಬಗಿನಿಂದ ಮೆರೆಯುತ್ತಾ ಅವನಬಳಿಗೆ ಹೋಗಿ
ತನ್ನೊಡನೆ ರಮಿಸಬೇಕೆಂದು ಪ್ರಾರ್ಥಿಸಲು ಅರ್ಜುನನು ಊರ್ವಶಿಯ ವಂಶಸ್ಥಳಾದುದ
ರಿಂದ ಜನನೀಭಾವವನ್ನಿಟ್ಟು ಆಕೆಯನ್ನು ಭಕ್ತಿಯಿಂದ ನಮಸ್ಕರಿಸಿ ಆಕೆಯ ಇಷ್ಟಕ್ಕೆ
ವಿರೋಧವಾಗಿ ಹೇಳಲು ಊರ್ವಶಿಯು ಆದಕ್ಕೆ ಸಿಟ್ಟುಗೊಂಡು ನೀನು ನಪುಂಸಕ
ನಾಗಿ ಸ್ತ್ರೀಯರ ಗೋಷ್ಠಿಯಲ್ಲಿರುವಿ ಎಂದು ಶಪಿಸಿದಳು. ಅರ್ಜುನನು ಚಿತ್ರಸೇನನ
ಬಳಿಗೆ ಹೋಗಿ ಆ ಸಂಗತಿಯನ್ನು ತಿಳಿಸಿ ಆತನೊಡನೆ ಇಂದ್ರನಬಳಿಗೆ ಬರಲು ಆತ
ನಿಂತೆಂದನು. ಮಗು! ನೀನು ಶಾಂತಿದಾಂತಿಗುಣಗಳಿಂದ ಋಷಿಗಳನ್ನೂ ಮೀರಿಸಿ
ರುವಿ. ವನವಾಸಾನಂತರದಲ್ಲಿ ಹದಿಮೂರನೆಯವರ್ಷ ಅಜ್ಞಾತವಾಸಮಾಡುವ ಸಮ
ಯದಲ್ಲಿ ನಿನಗೀಶಾಪ ಫಲಿಸುವುದಾದುದರಿಂದ ಇದನ್ನು ನಿಜವಾಗಿಯೂ ಅನುಗ್ರಹ
ವೆಂದೇ ಭಾವಿಸು' ಎಂದು ಹೇಳಿ ಲೋಮಶನೆಂಬ ಮುನಿಯನ್ನು ಕರೆದು ಹೀಗೆ
ಹೇಳಿದನು. ನೀನು ಭೂಲೋಕಕ್ಕೆ ಹೋಗಿ ಅರ್ಜುನನ ಕ್ಷೇಮಸಮಾಚಾರಗಳನ್ನು
ಆತನ ಸಹೋದರರಿಗೆತಿಳಿಸಿ ಪುಣ್ಯತೀರ್ಥಯಾತ್ರೆಗಳನ್ನು ಮಾಡುವಂತೆ ಅವರಿಗೆ ಹೇಳು
ವುದಲ್ಲದೆ ಅರ್ಜುನನು ತನ್ನ ಸಹೋದರರ ಬಳಿಗೆ ಹೋಗುವುದಕ್ಕೆ ಮುಂಚೆ ಕೆಲವು
ರಾಕ್ಷಸರನ್ನು ಸಂಹರಿಸಬೇಕಾಗಿದೆ ಎಂದೂ ಹೇಳಿಕಳುಹಿಸಿದನು. ಲೋಮಶನು
ಹೊರಟು ಭೂಲೋಕವನ್ನು ಸೇರಿದನು. ಅನಂತರದಲ್ಲಿ ಇಂದ್ರನು ಅರ್ಜುನನನ್ನು
ಕರೆದು ನನ್ನಲ್ಲಿ ಕಲಿತ ಅಸ್ತ್ರವಿದ್ಯೆಗೆ ಗುರುದಕ್ಷಿಣೆಯನ್ನು ಕೊಡಬೇಕಲ್ಲವೆ? ಇದ
ಕ್ಕಾಗಿ ನೀನು ನನ್ನ ಶತ್ರುಗಳಾದ ನಿವಾತಕವಚರನ್ನೂ ಕಾಲಿಕೇಯರನ್ನೂ ಸಂಹರಿ
ಸೆಂದು ಹೇಳಿ ಅವನಿಗೆ ದಿವ್ಯವಾದ ಕಿರೀಟವನ್ನು ಕೊಟ್ಟು ತನ್ನ ರಥವನ್ನೇರಿಸಿ
ಯುದ್ಧಕ್ಕೆ ಕಳುಹಿಸಿದನು. ನಿವಾತಕವಚರು ಮತ್ತು ಕಾಲಿಕೇಯರೆಂಬ ರಾಕ್ಷ
ಸರು ಪಡೆದಿದ್ದ ವರಬಲದಿಂದ ಇಂದ್ರನು ಸ್ವಯಂ ಅವರನ್ನು ಗೆಲ್ಲಲಾರದವನಾಗಿ
ದ್ದನು. ಇದನ್ನು ತಿಳಿದು ಆ ರಾಕ್ಷಸರು ದೇವತೆಗಳನ್ನು ಬಹಳವಾಗಿ ಬಾಧೆಪಡಿಸು
ತ್ತಿದ್ದರು. ಆದುದರಿಂದ ಅರ್ಜುನನಿಗೆ ದಿವ್ಯಾಸ್ತ್ರವನ್ನು ಕಲಿಸಿದ್ದರಿಂದ ಇಂದ್ರನಿಗೆ

ಸ್ವಪ್ರಯೋಜನವೂ ಕೂಡ ಆಯಿತು. ಆಜ್ಞಾನುಸಾರ ಅರ್ಜುನನು ರಥವನ್ನೇರಿ ಪಾತಾಳಕ್ಕೆ ಹೋಗಿ ಅಲ್ಲಿ ತನ್ನ ಗಾಂಡೀವಧ್ವನಿಯನ್ನು ಮಾಡಲಾಗಿ ಅದನ್ನು ಕೇಳಿ ನಿವಾತಕವಚರು ಹೊರಕ್ಕೆಹೊರಟು ಬರಲು ಅರ್ಜುನನು ತಾನೊಬ್ಬನೇ ಅವರನ್ನು ದಿವ್ಯಾಸ್ತ್ರಗಳಿಂದ ಸಂಹಾರಮಾಡಿದನು; ಮತ್ತು ಕಾಲಿಕೇಯರೊಂದಿಗೂ ಸಹ ಯುದ್ಧಮಾಡಿ ಪಾಶುಪತಾಸ್ತ್ರದಿಂದ ಅವರು ವಾಸಮಾಡುತ್ತಿದ್ದ ಹಿರಣ್ಯಪರ್ವತವನ್ನೇ ಭಸ್ಮಮಾಡಿ ಅಮರಾವತಿಗೆ ಹೋಗಿ ವೃತ್ತಾಂತವನ್ನು ಇಂದ್ರನಿಗೆ ತಿಳಿಸಿ ಅವನಿಂದ ಅಪ್ಪಣೆಯನ್ನು ಪಡೆದು ಭೂಲೋಕಕ್ಕೆ ತೆರಳಿದನು.

ಇತ್ತ ಅರ್ಜುನನ ಕುಶಲವೃತ್ತಾಂತಗಳನ್ನೂ ಆತನು ದಿವ್ಯಾಸ್ತ್ರಗಳನ್ನು ಹೊಂದಿದ ಸಂಗತಿಯನ್ನೂ ಲೋಮಶನಿಂದ ಕೇಳಿ ಪಾಂಡವರು ಬಹಳವಾಗಿ ಆನಂದಪಟ್ಟರೆಂದು ಬೇರೆ ಹೇಳತಕ್ಕದ್ದೇನಿದೆ. ದೇವೇಂದ್ರನು ಹೇಳಿಕಳುಹಿಸಿದ ರೀತಿಯಲ್ಲಿ ಯುಧಿಷ್ಠಿರನು ಪುಣ್ಯತೀರ್ಥಗಳ ಯಾತ್ರೆಗಾಗಿ ಸಂತೋಷದಿಂದ ಒಪ್ಪಿ ತಮ್ಮಂದಿರನ್ನೂ ದ್ರೌಪದಿಯನ್ನೂ ಕೂಡಿ ಲೋಮಶನನ್ನು ಕರೆದುಕೊಂಡು ತೀರ್ಥಯಾತ್ರೆಗಳನ್ನು ಕುರಿತು ಹೊರಟನು. ಹೀಗೆ ಹೊರಟವರು ಅನೇಕ ಪುಣ್ಯತೀರ್ಥಗಳಲ್ಲಿ ಸ್ನಾನಮಾಡುತ್ತಾ ಮುಂದೆಮುಂದೆ ಹೊರಟು ಹಿಮಾಲಯದ ಸಮೀಪಕ್ಕೆ ಹೋಗಿ ಕೈಲಾಸದಲ್ಲಿ ನರನಾರಾಯಣರು ವಾಸಿಸಿದ ಸ್ಥಳವನ್ನು ಹೊಂದಿ ಅಲ್ಲಿ ಕೆಲವುಕಾಲ ಸೌಖ್ಯವಾಗಿ ವಾಸಿಸಿದರು. ಇಲ್ಲಿರುವಾಗ ಒಂದುದಿನ ಈಶಾನ್ಯದಿಕ್ಕಿನಿಂದ ಬಲವಾಗಿ ಗಾಳಿಯುಬೀಸಿ ಸಹಸ್ರಪತ್ರಗಳಿಂದ ಕೂಡಿದ ಒಂದು ಮನೋಹರವಾದ ಕಮಲವನ್ನು ಹೊಡೆತಂದು ಭೂಮಿಯಮೇಲೆ ಹಾಕಿತು. ದ್ರೌಪದಿಯು ಆಪುಷ್ಪದ ಸುವಾಸನೆಗೂ ಅಂದಕ್ಕೂ ಹೃದಯದಲ್ಲಿ ಹೆಚ್ಚು ಆನಂದವನ್ನು ತಾಳಿದವಳಾಗಿ ಭೀಮಸೇನನನ್ನು ನೋಡಿ ಇಂತಹ ಕೆಲವು ಹೂಗಳನ್ನು ತಂದು ಕೊಡಬೇಕೆಂದು ಬೇಡಲು ಮಾರುತಾತ್ಮಜನು ಆಕೆಯ ಕೋರಿಕೆಯನ್ನು ನೆರವೇರಿಸುವ ಉದ್ದಿಶ್ಯ ಅನೇಕಪರ್ವತಗಳನ್ನು ದಾಟಿ ಈಶಾನ್ಯದಿಕ್ಕಿಗೆ ಹೊರಟನು. ಹೀಗೆ ಹೊರಡುತ್ತಾ ಆ ಪವನಾತ್ಮಜನು ಬಳಿಯಲ್ಲಿದ್ದ ದುಷ್ಟಮೃಗಗಳಲ್ಲಿ ದಾರಿಗೆ ಅಡ್ಡಲಾಗಿ ಎದುರಿಗೆ ಬಂದವುಗಳನ್ನು ಗದೆಯಿಂದ ಪ್ರಹರಿಸುತ್ತಾ ಚೇಷ್ಟೆಮಾಡುತ್ತಾ ತರಮುತ್ತಾ ಮುಂದೆಮುಂದೆ ಹೊರಟು ಒಂದು ಬಾಳೆಯತೋಟವನ್ನು ನೋಡಿ ಅಲ್ಲೊಂದು ಸಣ್ಣದಾರಿ ಹೋಗುತ್ತಿರುವುದನ್ನು ಕಂಡು ಅದರಲ್ಲಿ ಹೊರಟನು. ಈ ದಾರಿಯು ಮನುಷ್ಯಗಮ್ಯವಲ್ಲದುದಾ

ಗಿತ್ತು. ಆ ತೋಟದೊಳಕ್ಕೆ ಯಾರೂ ಬರದಿರುವಹಾಗೆ ಮಾರುತಪುತ್ರನಾದ ಹನುಮಂತನು ಭೀಮನಿಗೆ ಹಿತವನ್ನು ಮಾಡಲೋಸ್ಕರವೇ ಆ ದಾರಿಯ ಮಧ್ಯದಲ್ಲಿ ಮಲಗಿದ್ದನು. ಭೀಮನು ಎಂದಿನಂತೆಯೇ ಜಗಳವಾಡಲು ಸಿದ್ಧನಾಗಿ ಆ ಸ್ಥಳಕ್ಕೆ ಬಂದು ದಾರಿಯಲ್ಲಿ ನಿದ್ರಿಸುತ್ತಿರುವಂತೆ ಮಲಗಿರುವ ಕೋತಿಯನ್ನು ನೋಡಿ ಎಲೋ ವಾನರವೇ ಎದ್ದು ಆಚೆಕಡೆಗೆ ಹೋಗೆಂದು ಕೂಗಿದನು. ಹನುಮಂತನು ಮೆಲ್ಲಗೆ ಕಣ್ಣುಗಳನ್ನು ಬಿಟ್ಟು ಅವನನ್ನು ನೋಡಿ ಹೀಗೆಂದನು ‘ಇದೇನು, ನಿದ್ರೆಮಾಡುತ್ತಿರುವ ನನ್ನನ್ನು ಹೀಗೆ ಮೂರ್ಖತನದಿಂದ ಎಚ್ಚರಪಡಿಸಬಹುದೇ ? ಅದೂಅಲ್ಲದೆ ಇದು ದೇವತೆಗಳು ತಿರುಗಾಡುವ ಸ್ಥಳವು, ತಪೋನಿರತರನ್ನು ಬಿಟ್ಟು ಮಿಕ್ಕವರು ಇಲ್ಲಿ ಹೋಗಲಾಗದು’ ಎನ್ನಲು ಭೀಮಸೇನನಿಂತೆಂದನು. ನೀನುಯಾರು ? ನಿನ್ನ ಹೆಸರೇನು ? ನಾನು ಪಾಂಡುಪುತ್ರನಾದ ಭೀಮಸೇನನು, ಎನ್ನಲು ಹನುಮಂತನು ಅವನನ್ನು ಲಕ್ಷ್ಯಮಾಡದೇ ನಾನೊಬ್ಬಕೋತಿಯು; ನಿನ್ನ ಪ್ರಾಣಗಳಮೇಲೆ ಆಶೆಯುಳ್ಳವನಾದರೆ ಹಿಂದಿರುಗಿ ಹೊರಡೆನ್ನಲು, ಭೀಮಸೇನನು ಎಲೋ ತಿಮ್ಮಾ, ನನ್ನ ದಾರಿಯಲ್ಲಿರದೇ ಹೊರಡೆಂದು ಬೆದರಿಸಿದನು. ಹನುಮಂತನು ನಾನು ವ್ಯಾಧಿಗ್ರಸ್ತನಾಗಿರುವುದರಿಂದ ಏಳಲಾರೆನೆಂದನು. ಪುನಃ ಭೀಮನು ಅವನನ್ನು ಎದ್ದು ಹೋಗೆಂದು ಕೋಪದಿಂದ ಹೇಳಲು ಹನುಮಂತನು ಅಯ್ಯಾ, ನಾನು ಹೋಗಲೊಲ್ಲೆ; ನಿನಗಿಷ್ಟವಿದ್ದಲ್ಲಿ ನನ್ನ ಬಾಲವನ್ನು ಆ ಕಡೆಯಿಟ್ಟು ಮುಂದೆ ಹೋಗೆನ್ನಲು ಭೀಮನು ಇದೆಷ್ಟರಕೆಲಸವೆಂದು ಆ ತೋಕೆಯನ್ನು ಎಡಗೈಯಿಂದ ಹಿಡಿದೆಳೆಯಲು ಅದು ಕದಲಲಿಲ್ಲ. ಭೀಮನು ತನ್ನ ಎರಡುಕೈಗಳಿಂದಲೂ ಭದ್ರವಾಗಿ ಹಿಡಿದೆತ್ತಿದನು. ಆ ಬಾಲವು ಮೊದಲಿನಂತೆಯೇ ಇದ್ದಿತು. ಅನಂತರ ಭೀಮನು ತನ್ನ ಬಲವೆಲ್ಲವನ್ನೂ ವ್ಯಯಮಾಡಿ ಆ ಬಾಲವನ್ನು ಗಟ್ಟಿಯಾಗಿ ಹಿಡಿದು ತನ್ನ ಶರೀರವೆಲ್ಲವೂ ಬೆವರುವತನಕ ಎಳೆದರೂ ಆ ಬಾಲವು ಅಲ್ಲಾಡದಿರುವುದನ್ನು ನೋಡಿ ಭೀಮನು ನಾಚಿಕೆಪಟ್ಟು ಆ ವಾನರ ಶ್ರೇಷ್ಠನಿಗೆ ನಮಸ್ಕರಿಸಿ, ಮಹಾತ್ಮಾ ! ನೀನು ಯಾರೋ ತಿಳಿಸಬೇಕೆಂದು ಬೇಡಲು ಹನುಮಂತನಿಂತೆಂದನು. ನಾನು ಪವಮಾನನಂದನನಾದ ಹನುಮಂತನು, ವಿಷ್ಣುವಿನ ಅವತಾರವಾದ ಶ್ರೀರಾಮನೊಡನೆ ಸ್ನೇಹಮಾಡಿದವನು. ಎಂದು ಹೇಳಲು ಆ ಅಣ್ಣತಮ್ಮಂದಿರು ಸ್ವಲ್ಪಕಾಲ ಒಬ್ಬರೊಬ್ಬರು ಮಾತನಾಡುತ್ತಿದ್ದರು. ಆ ಕೂಡಲೆ ಆಂಜನೇಯನು ಕೌಂತೇಯನಿಗೆ ಮಾರ್ಗವನ್ನು ತಿಳಿಸಿ ತಾನು ಮರೆಯಾದನು. ಭೀಮನು ಹೊರಟು ಒಂದು ನದಿಯನ್ನೂ ಕೊಳವನ್ನೂ ನೋಡಿ ಅಲ್ಲಿ ಉತ್ತಮವಾದ

ತಾವರೆಗಳು ಅರಳಿ ಸುವಾಸನೆಯಿಂದ ಕೂಡಿರಲು ಆ ಕುಸುಮಗಳನ್ನು ಕುಯ್ಯಲು ಪ್ರಯತ್ನಮಾಡಿದನು. ಆಗ ಅನೇಕಮಂದಿ ರಾಕ್ಷಸರು ಅಲ್ಲಿಗೆ ಬಂದು ಹೀಗೆಂದರು. ಅಯ್ಯಾ ಈ ಸರೋವರವು ಕುಬೇರನದು. ಆದುದರಿಂದ ಆತನ ಅಪ್ಪಣೆಯಿಲ್ಲದೆ ಈ ಕುಸುಮಗಳನ್ನು ಕೊಯ್ಯಲಾಗದು, ಎಂದು ಅಡ್ಡಿಮಾಡಿದರು. ಅದಕ್ಕೆ ಭೀಮನು ನಾನು ಕ್ಷತ್ರಿಯನು, ಯಾರನ್ನೂ ಯಾಚಿಸುವುದು ಕ್ಷತ್ರಿಯಧರ್ಮವಲ್ಲ, ಎಂದು ಹೇಳಿ ಆ ಕೊಳವನ್ನು ಪ್ರವೇಶಿಸುತ್ತಿರುವಲ್ಲಿ ಕೊಳದ ಕಾವಲಿನವರು ಅವನಮೇಲೆ ಬಿದ್ದು ಹೋರಲೆತ್ನಿಸಿದರು. ಭೀಮನು ಉದ್ದಾಮವಾದ ತನ್ನ ಗದೆಯಿಂದ ಹೊಡೆದು ಅವರಲ್ಲಿ ಕೆಲವರನ್ನು ಕೊಲ್ಲಲು ಉಳಿದ ರಾಕ್ಷಸರು ಜಾಗ್ರತೆ ಓಡಿಹೋಗಿ ಕುಬೇರನನ್ನು ಮರೆಹೊಕ್ಕರು. ವೈಶ್ರವಣನು ಸಂಗತಿಯೆಲ್ಲವನ್ನೂ ತಿಳಿದು ಮಂದಹಾಸದಿಂದ ಭೀಮನು ದ್ರೌಪದಿಗ ಬೇಕಾದಷ್ಟು ಹೂಗಳನ್ನು ತೆಗೆದುಕೊಂಡು ಹೋಗಲೆಂದು ಹೇಳಿ ಅವರುಗಳನ್ನು ಸಮಾಧಾನಪಡಿಸಿ ಕಳುಹಿಸಿದನು. ಆ ಸ್ಥಳಕ್ಕೆ ಧರ್ಮರಾಯನು ಮಾದ್ರೀಸುತರೊಡನೆ ದ್ರೌಪದಿಯನ್ನು ಕರೆದುಕೊಂಡು ಭೀಮನಪುತ್ರನಾದ ಘಟೋತ್ಕಚನ ಸಹಾಯದಿಂದ ಆಕಾಶಮಾರ್ಗದಲ್ಲಿ ಹೊರಟು ಭೀಮನಬಳಿಗೆ ಬಂದು ಸೇರಲು ಎಲ್ಲರೂ ಕೂಡಿ ಆ ಗಂಧಮಾದನಗಿರಿಯ ಶಿಖರದಲ್ಲಿ ಅತ್ಯಂತ ಮನೋಹರವಾದ ಪ್ರದೇಶಗಳಲ್ಲಿ ಕೆಲವು ದಿನಗಳವರಿಗೆ ಅರ್ಜುನನ ಆಗಮನ ನಿರೀಕ್ಷಣೆಯಿಂದ ವಾಸಿಸಿದರು. ಕೂಡಲೇ ಅವರು ನರನಾರಾಯಣಸ್ಥಾನಕ್ಕೆ ಪುನಃ ಬಂದು ಲೋಮಶನ ಇಷ್ಟಾನುಸಾರ ಅಲ್ಲಿಂದ ಎರಡು ಪುಣ್ಯಾಶ್ರಮಗಳನ್ನು ನೋಡಬೇಕೆಂದು ಹೊರಡಲುದ್ಯುಕ್ತಿಸಿ ಆತನು ತೋರಿಸಿದ ಮಾರ್ಗದಲ್ಲಿ ತೆರಳುತ್ತಾ ದಾರಿಯಲ್ಲಿ ಸಾಹಸಕಾರ್ಯಗಳನ್ನು ಮಾಡುತ್ತಾ ಹೊರಟು ಮೇರುಪರ್ವತವನ್ನು ಸೇರಿ ಅಲ್ಲಿ ಅರ್ಜುನನ ಆಗಮನ ನಿರೀಕ್ಷಣೆಯಿಂದ ಮನಸ್ಸಿನಲ್ಲಿ ತುಂಬಾ ಸಂತೋಷವುಳ್ಳವರಾಗಿ ವಾಸಿಸುತ್ತಿದ್ದರು. ಅನಂತರ ಒಂದುದಿನ ಅವರು ಪಾರ್ಥನನ್ನು ಧ್ಯಾನಿಸುತ್ತಾ ಇರುವಲ್ಲಿ ಅಂತರಿಕ್ಷದಿಂದ ದಿವ್ಯರಥವು ಪ್ರಕಾಶಿಸುತ್ತ ಬರುತ್ತಿರಲು ಅರ್ಜುನನು ತಂದೆಯು ಕೊಟ್ಟ ಕಿರೀಟಕವಚಗಳನ್ನು ಧರಿಸಿ ಆ ರಥದಿಂದಿಳಿದು ಧೌಮ್ಯ ಧರ್ಮಜ ಭೀಮರಿಗೆ ನಮಸ್ಕರಿಸಲು ಅವನ ವಿಯೋಗದಿಂದ ಕುಂದುತ್ತಿದ್ದ ಧರ್ಮಪುತ್ರಾದಿಗಳು ಆತನು ಹಿಡಿದ ಕೆಲಸವನ್ನು ಸಾಧಿಸಿಕೊಂಡು ಪುನಃ ಬರಲು ತಮ್ಮ ಮನಸ್ಸುಗಳಲ್ಲಿ ಅತ್ಯಾನಂದ ಹೊಂದಿದವರಾದರು.

ಬಳಿಕ ಪಾಂಡವರು ಅಲ್ಲಿ ನಾಲ್ಕುವರ್ಷಗಳು ವಾಸಿಸಿದರು. ಮೊದಲು ಕಳೆದ ಆರು ಸಂವತ್ಸರಗಳೂ ಸೇರಿ ಅದುವರೆಗೆ ಹತ್ತುವರುಷಗಳು ಕಳೆಯಲು ಅನಂತರ ಒಂದು ಸಂವತ್ಸರ ಸುಖವಾಗಿ ಪರ್ವತಗಳಲ್ಲಿ ತಿರುಗುತ್ತಾ ಸರಸ್ವತೀತೀರವನ್ನು ಹೊಂದಿ ಅಲ್ಲಿ ಕೆಲವು ದಿನಗಳು ನಿಂತರು. ಹನ್ನೆರಡನೆಯ ಸಂವತ್ಸರವೂ ಕಳೆಯುತ್ತಿರಲು ಅವರು ಕಾಮ್ಯಕವನಕ್ಕೆ ಬಂದರು. ವಾಸುದೇವನು ಅವರನ್ನು ನೋಡಲು ಆ ಸ್ಥಳಕ್ಕೆ ದಯಮಾಡಿ ಧರ್ಮಜನ ಚಿತ್ತವನ್ನು ಪರೀಕ್ಷಿಸಲಿಚ್ಛಿಸಿ ಆತನೊಡನಿಂತೆಂದನು. ಧರ್ಮತನಯನೇ! ನಿನ್ನ ಪಕ್ಷವಾಗಿ ಹೋರಲಿಚ್ಛಿಸುವ ಜನಗಳನ್ನು ನಮ್ಮಣ್ಣನಾದ ಬಲರಾಮನ ಆಜ್ಞಾನುಸಾರ ದುರ್ಯೋಧನನಿಗೆ ಎದುರಾಗಿ ಯುದ್ಧಮಾಡುವಂತೆ ಕಳುಹಿಸು, ಎನ್ನಲು ಧರ್ಮರಾಯನು ಸವಿನಯನಾಗಿ ದೇವಕೀನಂದನನೊಡನಿಂತೆಂದನು. ದೇವಾ! ನಾವು ಹನ್ನೆರಡುಸಂವತ್ಸರಗಳು ಪೂರ್ತಿಯಾಗುವವರೆಗೂ ಅಡವಿಗಳಲ್ಲಿ ವಾಸಮಾಡಿ ಒಂದು ಸಂವತ್ಸರ ಅಜ್ಞಾತವಾಸವನ್ನು ಪೂರ್ತಿಮಾಡಿ ಅನಂತರ ನಿನ್ನ ಅನುಗ್ರಹವನ್ನು ಕೋರುವೆವು. ನಾವು ನಿನ್ನೊಡನೆ ಸಾಂಗತ್ಯವುಳ್ಳವರಾದುದರಿಂದ ಧರ್ಮವಿರುದ್ಧವಾಗಿ ನಡೆಯುವುದು ಹೇಗೆ? ಪಾಂಡುನಂದನರು ಸತ್ಯಮಾರ್ಗವನ್ನು ಬಿಡಲಾರರು, ನೀನು ಕಾಪಾಡುತ್ತಿರಲಾಗಿ ಪೃಥಾಸೂನುಗಳು ದಾನಧರ್ಮಗಳನ್ನು ಕ್ರಮವಾಗಿ ನಡೆಯಿಸುತ್ತಾ ಪ್ರಜೆಗಳು ಪತ್ನಿಯರು ಬಂಧುಗಳೊಡನೆ ಕೂಡಿ ಸೌಖ್ಯಹೊಂದುವರು. ಹೀಗೆ ಆ ಇಬ್ಬರೂ ಮಾತನಾಡುತ್ತಿರುವ ಸಮಯಕ್ಕೆ ಮುನಿಚಂದ್ರನಾದ ಮಾರ್ಕಂಡೇಯನು ಬರಲು ಅವನಿಗೆ ಅರ್ಘ್ಯಪಾದ್ಯಾದ್ಯುಪಚಾರಗಳನ್ನು ನಡೆಸಲು ಗೋವಿಂದನು ಆತನನ್ನು ನೋಡಿ ದೊರೆಗಳೂ ಸ್ತ್ರೀಯರೂ ಋಷಿಗಳೂ ನಡೆಯಿಸಬೇಕಾದ ಉತ್ತಮವಾದ ಸನಾತನಧರ್ಮಗಳನ್ನು ನಮಗೆ ಉಪದೇಶಿಸಬೇಕೆಂದು ಬೇಡಲು ಆ ಋಷಿಶ್ರೇಷ್ಠನು ಅವರುಗಳಿಗೆ ಅನೇಕವಿಷಯಗಳನ್ನು ಉಪನ್ಯಸಿಸಿದನು. ಅವುಗಳಲ್ಲಿ ಕೆಲವನ್ನು ನಾವು ತಿಳಿಯೋಣ.

ಧರ್ಮಜನು ಮಾರ್ಕಂಡೇಯನನ್ನು ನೋಡಿ ನಾನು ಎಂತಹ ಧರ್ಮಗಳನ್ನಾಚರಿಸಬೇಕೆಂದು ಕೇಳಲು ಆ ಮುನೀಂದ್ರನಿಂತೆಂದನು. ‘ ಸರ್ವಭೂತಗಳಲ್ಲಿಯೂ ಅನುರಾಗವನ್ನು ತೋರಿಸು. ಯಾವುದನ್ನಾದರೂ ತಿರಸ್ಕಾರಮಾಡಬೇಡ. ಸತ್ಯವನ್ನೇ ನುಡಿ. ನಮ್ರನಾಗಿರು. ಇಂದ್ರಿಯಗಳನ್ನು ಜಯಿಸು. ಪ್ರಜಾಸಂರಕ್ಷಣೆಯಲ್ಲಿ ಆಸಕ್ತನಾಗಿರು. ಧರ್ಮವನ್ನೇ ಆಚರಿಸು. ಅಧರ್ಮವನ್ನು ದೂರಮಾಡು. ಪಿತೃಗಳನ್ನೂ

ದೇವತೆಗಳನ್ನೂ ಪೂಜಿಸು. ಅಜ್ಞಾನದಿಂದಾಗಲೀ ಪ್ರಮಾದದಿಂದಾಗಲೀ ಮಾಡಿದ ಪಾಪಗಳನ್ನು ದಾನಮಾಡುವುದರಿಂದ ಹೋಗಲಾಡಿಸಿಕೋ. ಗರ್ವವನ್ನು ಬಿಡು. ವಿನಯಸೌಶೀಲ್ಯಗಳನ್ನು ಹೊಂದು. ಭೂಮಿಯೆಲ್ಲವನ್ನೂ ಜಯಿಸಿ ಸಂತೋಷದಿಂದಲೂ ಸುಖದಿಂದಲೂ ಇರು. ಇಂತಹ ವರ್ತನವು ಧರ್ಮಾನುಸಾರವಾಗಿರುವುದು.' ಎಂದು ಹೇಳಿ ಆ ತಾಪಸೋತ್ತಮನು ಪುನಃ ತಪಸ್ಸಿನ ಕ್ರಮವೆಂತಹುದೆಂಬುದನ್ನು ಹೇಳಲುಪಕ್ರಮಿಸಿದನು. ತ್ರಿದಂಡಧಾರಣವೂ ಮೌನವ್ರತವೂ ಜಟಾಭಾರವೂ ಶಿರೋಮುಂಡನವೂ ವಲ್ಕಲಾಜಿನಧಾರಣೆಯೂ ವ್ರತಾಚರಣೆಯೂ ಸ್ನಾನಗಳೂ ಅಗ್ನಿಹೋತ್ರವೂ ವನವಾಸವೂ ಶರೀರಶೋಷಣೆಯೂ ಇವೆಲ್ಲವೂ ಚಿತ್ತಶುದ್ಧಿಯಿಲ್ಲದಿದ್ದಲ್ಲಿ ಅಸಾರ್ಥಕಗಳು. ವಾಕ್ಕರ್ಮಮನೋಬುದ್ಧಿಗಳಿಂದ ಪಾಪವನ್ನಾಚರಿಸದಿರುವ ಮಹಾತ್ಮರೇ ತಪಸ್ವಿಗಳೇ ಹೊರತು ವ್ರತೋಪವಾಸಗಳಿಂದ ಶರೀರಶೋಷಣೆ ಮಾಡತಕ್ಕವರು ತಪಸ್ವಿಗಳಲ್ಲ. ಶರೀರವು ಶುದ್ಧವಾಗಿದ್ದರೂ ಬಂಧುಗಳಲ್ಲಿ ಅನುರಾಗವಿಲ್ಲದವನು ಪಾಪರಹಿತನಾಗಲಾರನು, ಅಂತಹ ಚಿತ್ತಕಾಠಿಣ್ಯತೆಯೇ ಅವನ ತಪಸ್ಸಿಗೆ ಶತ್ರುವು. ವಿಷಯಗಳಲ್ಲಿ ಪರಾಙ್ಮುಖತೆಯಿದ್ದಮಾತ್ರಕ್ಕೆ ತಪಸ್ಸಾಗಲಾರದು. ಯಾವಾಗಲೂ ಶುಚಿಯಾಗಿ ಸುಗುಣಗಳಿಂದ ಮೆರೆಯುತ್ತಾ ಯಾವಜ್ಜೀವವೂ ದಯಾವಂತನಾಗಿರತಕ್ಕವನು ಮನೆಯಲ್ಲಿ ವಾಸಿಸುತ್ತಿದ್ದಾಗ್ಯೂ ಋಷಿಯೇ ಆಗಿರುವನು. ಅಂತಹವನು ಸಮಸ್ತ ಪಾಪಗಳಿಂದಲೂ ವಿಮುಕ್ತನು. ಅನಶನಾದಿವ್ರತಗಳು ಮಾಂಸರಕ್ತಮಯವಾದ ಶರೀರವನ್ನು ಶೋಷಿಸುತ್ತವಲ್ಲದೆ ಪಾಪಗಳನ್ನು ಹೋಗಲಾಡಿಸಲಾರವು. ಮನಶ್ಶುದ್ಧಿ ಇಲ್ಲದವನು ವ್ರತಗಳ ತತ್ವಾರ್ಥವನ್ನು ತಿಳಿಯಲಾರದವನಾಗಿ ಅವುಗಳನ್ನಾಚರಿಸಿ ಕ್ಲೇಶಗಳನ್ನು ಮಾತ್ರ ಹೊಂದುವನು. ಅಂತಹ ಕರ್ಮಗಳಿಂದ ಅವನೆಂದಿಗೂ ಪಾಪರಹಿತನಾಗಲಾರನು. ವಿಚಕ್ಷಣೆಯಿಂದ ಮಾಡಿದ ದಾನವು ಯಜ್ಞಕ್ಕಿಂತಲೂ ಶ್ರೇಷ್ಠವಾದುದು. ಹಸಿವಿನಿಂದ ಆತುರನಾಗಿರುವವನಿಗೆ ಅನ್ನವನ್ನಿಡುವವನೂ ಅನ್ನಸತ್ರಗಳನ್ನು ಕಟ್ಟಿಸಿ ಅಲ್ಲಿ ಬಂದ ಅತಿಥಿಗಳಿಗೆ ಆತಿಥ್ಯ ನಡೆಯಿಸುವುದಕ್ಕಾಗಿ ತಕ್ಕವರನ್ನು ನಿಯಮಿಸಿರುವವನೂ ಸರ್ವಯಜ್ಞಫಲಗಳನ್ನೂ ಹೊಂದುವರು. ಈ ರೀತಿಯಾಗಿ ಮಾರ್ಕಂಡೇಯನು ಉಪನ್ಯಾಸ ಮಾಡಿದನು. ಸ್ವಕೀಯಗಳಾದ ಉತ್ತಮ ಗ್ರಂಥಗಳಲ್ಲಿ ಪವಿತ್ರತಮವಾದ ಇಂತಹ ನೀತಿಗಳು ಒಪ್ಪುತ್ತಿರಲು ಹಿಂದೂಬಾಲಕರು ಉತ್ತಮಜ್ಞಾನಕ್ಕಾಗಿ ಅನ್ಯಮತಗಳಿಗೆ ಸೇರಲೇಕೆ ?

ಇಂತಹ ಸಂಭಾಷಣೆಗಳಿಂದಲೂ ಧರ್ಮವ್ಯಾಧನು ಕೌಶಿಕನೆಂಬ ಬ್ರಾಹ್ಮಣನಿಗೆ ಹೇಳಿದ ನೀತಿಗಳು, ಮೊದಲಾದ ಅನರ್ಘ್ಯಗಳಾದ ಅನೇಕ ವೃತ್ತಾಂತಗಳನ್ನು ಕೇಳುವುದರಿಂದಲೂ ಪಾಂಡವರು ಕಾಲವನ್ನು ಕಳೆಯುತ್ತಿದ್ದರು.

[ಧರ್ಮವ್ಯಾಧೋಪಾಖ್ಯಾನ — ಪೂರ್ವಕಾಲದಲ್ಲಿ ಕೌಶಿಕನೆಂಬ ಉಗ್ರತಪಸ್ವಿಯೂ ವೇದಾಧ್ಯಯನಸಂಪನ್ನನೂ ಆದ ಬ್ರಾಹ್ಮಣಶ್ರೇಷ್ಠನೊಬ್ಬನಿದ್ದನು. ಒಂದಾನೊಂದು ದಿವಸ ಈತನು ಒಂದು ಮರದ ಕೆಳಗೆ ಕೂತುಕೊಂಡು ವೇದಾಧ್ಯಯನ ಮಾಡುತ್ತಿರುವ ಕಾಲದಲ್ಲಿ ಮರದಮೇಲೆ ಕೂತಿದ್ದ ಒಂದು ಬಕಪಕ್ಷಿಯು ಇವನ ದೇಹದಮೇಲೆ ಮಲೋತ್ಸರ್ಜನವನ್ನು ಮಾಡಿತು. ಇದರಿಂದ ಬಹಳ ಕೋಪಗೊಂಡವನಾಗಿ ಈ ಬಕಪಕ್ಷಿಗೆ ಕೇಡನ್ನುಂಟುಮಾಡಬೇಕೆಂಬ ಯೋಚನೆಯಿಂದ ತನ್ನ ಕ್ರೂರ ದೃಷ್ಟಿಯಿಂದ ಆ ಪಕ್ಷಿಯನ್ನು ನೋಡಲಾಗಿ ಅದು ಕೂಡಲೆ ಮೃತಪಟ್ಟು ಭೂಮಿಗೆ ಬಿದ್ದಿತು. ಅನಂತರ ಈ ಬ್ರಾಹ್ಮಣನು ಒಂದು ಗ್ರಾಮ ಪ್ರವೇಶವನ್ನು ಮಾಡಿ ಭಿಕ್ಷಾರ್ಥವಾಗಿ ತನಗೆ ತಿಳಿದಿದ್ದ ಒಬ್ಬ ಶಿಷ್ಟಬ್ರಾಹ್ಮಣನ ಮನೆಯ ಬಾಗಲಿನಲ್ಲಿ ನಿಂತು 'ಭವತೀ ಭಿಕ್ಷಾಂ ದೇಹಿ' ಎಂದು ಕೂಗಲು ಮನೆಯ ಯಜಮಾನಿತಿಯು ಸ್ವಾಮಿ, ಸ್ವಲ್ಪ ನಿಲ್ಲಬೇಕು ಎಂದು ಹೇಳಿ ಭಿಕ್ಷಾನ್ನವನ್ನು ತರುವುದಕ್ಕೆ ಅವಳು ಪಾತ್ರೆಯನ್ನು ಸಿದ್ಧಪಡಿಸುತ್ತಿರುವ ವೇಳೆಯಲ್ಲಿ ಅವಳ ಗಂಡನು ಹಸಿವಿನಿಂದ ಪೀಡಿತನಾಗಿ ಮನೆಗೆ ಬಂದನು. ಗಂಡನನ್ನೇ ಪರದೈವವೆಂದು ಭಾವಿಸಿ ಸೇವಿಸುತ್ತಿದ್ದ ಆ ಪತಿವ್ರತಾಶಿರೋಮಣಿಯು ಮಾಡುತ್ತಿದ್ದ ಕೆಲಸವನ್ನು ಬಿಟ್ಟು ಗಂಡನಿಗೆ ಪಾದೋದಕವನ್ನು ಕೊಟ್ಟು ಅನ್ನವನ್ನೂ ಸಹ ಬಡಿಸಿ ಅನಂತರ ಭಿಕ್ಷಾನ್ನವನ್ನು ತೆಗೆದುಕೊಂಡು ಕೌಶಿಕನ ಬಳಿಗೆ ಹೋಗಲಾಗಿ ಆತನು ತುಂಬಾ ಕೋಪಗೊಂಡು 'ನೀನು ಭಿಕ್ಷಾನ್ನಕ್ಕೆ ಬಂದ ಬ್ರಾಹ್ಮಣರನ್ನು ನಿರಾಕರಿಸಬಹುದೇ? ಬ್ರಾಹ್ಮಣರು ಅಗ್ನಿಸಮಾನರು. ತಮ್ಮ ಕೋಪದಿಂದ ಪೃಥ್ವಿಯನ್ನೇ ಸುಡಬಲ್ಲರು. ಎಂದು ಕ್ರೂರದೃಷ್ಟಿಯಿಂದ ಅವಳನ್ನು ನೋಡಿದನು. ಅದಕ್ಕಾ ನಾರೀಮಣಿಯು 'ನಾನು ಬಕಪಕ್ಷಿಯಲ್ಲ; ಬ್ರಾಹ್ಮಣನಾದ ನಿನಗೆ ಈಕೋಪವು ಉಚಿತವಲ್ಲ. ನಿನ್ನ ಕ್ರೂರದೃಷ್ಟಿಯಿಂದ ನನ್ನನ್ನು ನೀನು ಏನೂಮಾಡಲಾರೆ; ನಾನು ತಪ್ಪುಮಾಡಿದ್ದರೆ ಅದನ್ನು ಮನ್ನಿಸುವುದು ಸಹಜ' ಎಂದು ಹೇಳಲು, ಇದು ನಿನಗೆ ಹೇಗೆತಿಳಿಯಿತು ಎಂದು ಕೇಳಲಾಗಿ, ಇಗೋ ನೋಡು ಪತಿ ಪರಾಯಣತೆಯಿಂದಲೇ ನಿನ್ನ ಕೋಪ

ದಿಂದ ನೀನು ಒಂದು ಬಕಪಕ್ಷಿಯನ್ನು ಕೊಂದಿರುತ್ತಿ ಎಂಬುದನ್ನು ನಾನು ತಿಳಿದಿರುತ್ತೇನೆ. ಮನುಷ್ಯನಿಗೆ ತನ್ನ ಕೋಪಕ್ಕಿಂತಲೂ ಪ್ರಬಲವಾದ ಶತ್ರುವಿಲ್ಲ. ಆದುದರಿಂದ ನಿನ್ನ ಕೋಪವನ್ನು ಬಿಡು; ಧರ್ಮವನ್ನು ತಿಳಿದುಕೊ. ಇದನ್ನು ತಿಳಿಯುವುದು ಕಷ್ಟ. ಇದರಗತಿಯು ಅತಿಸೂಕ್ಷ್ಮ. ಮಿಥಿಲಾಪಟ್ಟಣದಲ್ಲಿರುವ ಧರ್ಮವ್ಯಾಧನ ಬಳಿಗೆ ನೀನು ಹೋದುದೇ ಆದರೆ ಅವನು ನಿನಗೆ ಧರ್ಮದ ರಹಸ್ಯವನ್ನು ತಿಳಿಸುವನು; ಎಂದು ಹೇಳಿದಳು.

ಆಕೆಯು ಮಾತನ್ನು ಕೇಳಿ ಬ್ರಾಹ್ಮಣನು ತಾನು ಮಾಡಿದ್ದು ತಪ್ಪೆಂದು ತಿಳಿದುಕೊಂಡು ಮಿಥಿಲಾಪಟ್ಟಣಕ್ಕೆ ಈ ದಿವಸವೇ ಹೋಗಿ ಧರ್ಮವ್ಯಾಧನಿಂದ ಧರ್ಮದ ಮರ್ಮವನ್ನು ತಿಳಿಯುವೆನೆಂದು ಹೊರಟನು. ಅನೇಕ ಅರಣ್ಯಗಳನ್ನೂ ಪಟ್ಟಣಗಳನ್ನೂ ದಾಟಿ ಮಿಥಿಲಾಪಟ್ಟಣಕ್ಕೆ ಬಂದು ಕಟುಕರ ಬೀದಿಯಲ್ಲಿ ಹೋಗಿ ಮಾಂಸವಿಕ್ರಯವನ್ನು ಮಾಡುತ್ತಿದ್ದ ಧರ್ಮವ್ಯಾಧನ ಅಂಗಡಿಗೆ ಎದುರಾಗಿ ನಿಂತುಕೊಂಡನು. ವ್ಯಾಧನು ಕೂಡಲೆ ಬ್ರಾಹ್ಮಣನು ತನ್ನಲ್ಲಿ ಕಾರ್ಯಾರ್ಥಿಯಾಗಿ ಬಂದಿದಾನೆಂದು ತಿಳಿದುಕೊಂಡು ತನ್ನ ಸ್ಥಾನದಿಂದ ಎದ್ದು ಬ್ರಾಹ್ಮಣನಿದ್ದೆಡೆಗೆ ಹೋಗಿ ಅವನನ್ನು ಅಭಿವಂದಿಸಿ 'ಎಲೈ ಬ್ರಾಹ್ಮಣಶ್ರೇಷ್ಠನೇ, ಪತಿವ್ರತಾಶಿರೋಮಣಿಯು ನಿನಗೆ ಹೇಳಿದ ವ್ಯಾಧನು ನಾನೇಯೇ. ಅವಳು ಏತಕ್ಕೆ ಕಳುಹಿಸಿದಾಳೆ ಎಂಬುದನ್ನೂ ಸಹ ನಾನು ಬಲ್ಲೆನು. ಈ ನಿಂತಿರುವ ಸ್ಥಳವು ನಿನ್ನ ವರ್ಣದವರಿಗೆ ಯೋಗ್ಯವಾದುದಲ್ಲ. ಆದುದರಿಂದ ನನ್ನ ಮನೆಗೆ ಹೋಗೋಣ' ವೆಂದು ಹೇಳಿ ಕರೆದುಕೊಂಡು ಹೋಗಿ ತಾನು ಮಾತಾಪಿತೃಗಳಿಗೆ ಮಾಡಿದ ಶಿಶ್ರೂಷೆಯಿಂದ ಈ ಜ್ಞಾನವನ್ನು ಪಡೆದನೆಂತಲೂ ಹೇಳಿದನು. ಅಲ್ಲದೆ "ನಾನು ಯಾವಾಗ್ಯೂ ಸತ್ಯವನ್ನು ಹೇಳುತ್ತೇನೆ. ಯಾರ ವಿಷಯದಲ್ಲಿಯೂ ಅಸೂಯೆಪಡುವದಿಲ್ಲ. ನನ್ನ ಶಕ್ತ್ಯನುಸಾರ ಪರೋಪಕಾರ ಮಾಡುತ್ತೇನೆ. ಅತ್ಯಂತ ಅಲ್ಪಪ್ರಾಣಿಯನ್ನೂ ಕೂಡ ತುಚ್ಛವಾಗಿ ಎಣಿಸುವುದಿಲ್ಲ. ಇವೇ ಮೊದಲಾದ ಪರೋಪಕಾರಕಾರ್ಯಗಳಿಂದ ಜ್ಞಾನವನ್ನು ಹೊಂದಬಹುದೇ ಹೊರತು ದೇಹಶೋಷಕವಾದ ಉಪವಾಸಾದಿವ್ರತಾದಿಗಳಿಂದಲಾಗಲೀ ಮರ್ಮತಿಳಿಯದ ತೀರ್ಥಯಾತ್ರೆಗಳಿಂದಲಾಗಲೀ ವಿಚಕ್ಷಣೆಯಿಲ್ಲದ ದಾನಗಳಿಂದಾಗಲೀ ಜ್ಞಾನವುಂಟಾಗುವದಿಲ್ಲ" ಎಂದು ಹೇಳಿದನು.]

* [ ] ಈ ಗುರ್ತಿನ ಮಧ್ಯೆ ಇರತಕ್ಕುದು ಇಂಗ್ಲೀಷಿನಲ್ಲಿ ಮೂಲಪುಸ್ತಕದಲ್ಲಿಲ್ಲ. ಈ ಕನ್ನಡ ಭಾಷಾಂತರದಲ್ಲಿ ಹೆಚ್ಚಾಗಿ ಸೇರಿಸಿದೆ.

ಅತ್ತ ಶಕುನಿಕರ್ಣರು ದುರ್ಯೋಧನನನ್ನು ನೋಡಿ ನೀನು ಪಾಂಡವರಿರುವೆಡೆಗೆ ಹೊರಟು ನಿನ್ನ ಐಶ್ವರ್ಯಾದಿಗಳನ್ನು ತೋರಿಸಿಕೊಳ್ಳುವುದರಿಂದ ಅರಣ್ಯದಲ್ಲಿ ಕಷ್ಟಪಡುತ್ತಿರುವ ಪಾಂಡವರಿಗೆ ಸಂಕಟವುಂಟಾಗುವಂತೆ ಮಾಡೆಂದು ಆತನಿಗೆ ಪ್ರೋತ್ಸಾಹಿಸಿದರು. ಧೃತರಾಷ್ಟ್ರನು ಅದಕ್ಕೆ ಅಡ್ಡಿಮಾಡದಿರುವುದಕ್ಕಾಗಿ ದ್ವೈತವನದ ಸಮೀಪದಲ್ಲಿರುವ ಹಸುಗಳ ಮಂದೆಗಳನ್ನು ನೋಡಲು ಹೋಗುವ ನೆಪದಿಂದ ಹೊರಡಬೇಕೆಂದು ಕರ್ಣನು ಉಪಾಯವನ್ನು ಹೇಳಿದನು. ಆಗ ಪಾಂಡವರು ದ್ವೈತವನದಲ್ಲಿ ವಾಸಮಾಡುತ್ತಿದ್ದರು. ಧೃತರಾಷ್ಟ್ರನು ಅದನ್ನು ತಿಳಿದವನಾದುದರಿಂದ ದುರ್ಯೋಧನನನ್ನು ಕುರಿತು ಆ ಸ್ಥಳಕ್ಕೆ ನೀನು ಹೋಗದೆ ಬೇರೆ ಯಾರನ್ನಾದರೂ ಕಳುಹಿಸುವುದೆಂದು ಹೇಳಲು ಶಕುನಿಯು ಪಾಂಡವರನ್ನು ನೋಡಬೇಕೆಂಬ ಉದ್ದೇಶವು ನಮಗಿಲ್ಲ ; ಅವರಿರುವ ಪ್ರದೇಶಕ್ಕೆ ನಾವು ಹೋಗುವುದಿಲ್ಲವೆಂದು ಭಾಷೆಮಾಡಿ ಸುಳ್ಳು ಹೇಳಿದುದರಿಂದ ಕೊನೆಗೆ ಆ ಅಂಧನೃಪತಿಯು ಅವರ ಪ್ರಯಾಣಕ್ಕೆ ಮನಸ್ಸಿಲ್ಲದೆ ಅಪ್ಪಣೆ ಕೊಟ್ಟನು. ದುರ್ಯೋಧನನು ದೊಡ್ಡ ಸೈನ್ಯವನ್ನೂ ಅನೇಕ ಅನುಚರರನ್ನೂ ಜತೆಯಲ್ಲಿ ಕರೆದುಕೊಂಡು ಹೊರಟು ಅನೇಕ ವಿಧಗಳಿಂದ ಬೇಟೆಯಾಡುತ್ತಾ ಮಂದೆಗಳಲ್ಲಿರುವ ಗೋವುಗಳನ್ನು ಲೆಕ್ಕಿಸುತ್ತಾ ಹೊರಟು ದ್ವೈತವನದಲ್ಲಿ ಪಾಂಡವರು ವಾಸಿಸುತ್ತಿದ್ದ ಪವಿತ್ರವಾದ ಸರೋವರದ ಬಳಿಗೆ ಹೋದರು. ಆ ಭಟರ ಸಮೂಹವು ಆ ಸರೋವರದ ಬಳಿಯಿದ್ದ ಆರಾಮವನ್ನು ಪ್ರವೇಶಿಸುತ್ತಿರಲು ಗಂಧರ್ವಾಧಿಪತಿಯು ಅಲ್ಲಿಗೆ ಯಾರನ್ನೂ ಪ್ರವೇಶಮಾಡಿಸದಿರಿ ಎಂದು ಆಜ್ಞೆಮಾಡಿದ್ದುದರಿಂದ ಕೆಲವರು ಗಂಧರ್ವರು ಅವರನ್ನು ಅಡ್ಡಿಮಾಡಿದರು. ದುರ್ಯೋಧನನು ಬಲಾತ್ಕಾರವಾಗಿ ಪ್ರವೇಶಕ್ಕೆ ಯತ್ನಿಸಲು ಆಗ ಉಭಯರಿಗೂ ಘೋರವಾದ ಯುದ್ಧವು ಜರುಗಿತು. ಆಗ ಕೌರವರು ಪರಾಜಿತರಾಗಿ ಓಡಿದರು. ಪರ್ವತದಂತೆ ಚಲಿಸದೆ ಮಹಾ ಪರಾಕ್ರಮದಿಂದ ಕಾದಿದ ಕರ್ಣನೂ ಕೊನೆಗೆ ಬೆನ್ನುಕೊಟ್ಟು ಓಡಿದನು. ದುರ್ಯೋಧನನು ಓಡದಿದ್ದುದನ್ನು ನೋಡಿ ಗಂಧರ್ವರು ಅವನನ್ನೂ ದುಶ್ಶಾಸನಾದಿಗಳನ್ನೂ ಹಿಡಿದು ಸಂಕೋಲೆಗಳನ್ನು ಹಾಕಿ ತೆಗೆದುಕೊಂಡು ಹೋದರು. ಆ ಸ್ಥಳದಲ್ಲಿ ಓಡಿದ ಕೌರವಭಟರು ಜಾಗ್ರತೆಯಾಗಿ ಪಾಂಡವರಬಳಿಗೆ ಹೋಗಿ ದುಃಖಾರ್ತರಾಗಿ ಆ ವೃತ್ತಾಂತವನ್ನು ತಿಳಿಯಪಡಿಸಿ ದುರ್ಯೋಧನಾದಿಗಳನ್ನು ಕಾಪಾಡಬೇಕೆಂದು ಪ್ರಾರ್ಥಿಸಲು ಭೀಮನು ಕೋಪದಿಂದ ಕೂಡಿದ ಮನಸ್ಸುಳ್ಳವನಾಗಿ ಅವರುಗಳನ್ನು

ನಿಂದಿಸುತ್ತಾ ಆ ಖೂಳರಿಗೆ ಸಹಾಯಮಾಡೆವೆಂದು ಹೇಳಲು ಧರ್ಮತನಯನು ಆತ ನನ್ನು ಕುರಿತು ಇಂತೆಂದನು. 'ಭೀಮಾ! ಕಠಿನೋಕ್ತಿಗೆ ಇದು ಸಮಯವಲ್ಲ. ಒಂದು ಸಮಯದಲ್ಲಿ ಒಬ್ಬೊಬ್ಬರಿಗೆ ಮನಸ್ತಾಪವೊದಗಿದ್ದಾಗ್ಯೂ ಆ ವಂಶಕ್ಕೆ ಮತ್ತೆಯಾರಾ ದರೂ ತೊಂದರೆಯನ್ನುಂಟುಮಾಡುತಿರುವಲ್ಲಿ ಅದರ ಮೇಲ್ಮೆಯು ಕೆಡದಿರುವಂತೆ ಎಲ್ಲರೂ ಕಾಪಾಡಬೇಕಾದುದೇ ಸರಿ' ಎಂದು ಹೇಳಿ ತಮ್ಮಂದಿರನ್ನು ನೋಡಿ ನೀವೆ ಲ್ಲರೂ ಆಯುಧಪಾಣಿಗಳಾಗಿ ಹೊರಟು ದುರ್ಯೋಧನಾಧಿಗಳನ್ನು ಸೆರೆಯಿಂದ ಬಿಡಿಸಿ ಕಳುಹಿಸಿರೆಂದಪ್ಪಣೆಮಾಡಲು ಅವರು ಹೋಗಿ ಒಳ್ಳೆಯಮಾತಿನಿಂದಲೇ ಕೌರ ವರನ್ನು ಬಿಟ್ಟು ಕಳುಹಿಸಿರೆಂದು ಗಂಧರ್ವರನ್ನು ಕೇಳಲು ಅವರು ಬಿಡದೇಹೋದರು. ಪಾಂಡವರು ಅತ್ಯಂತ ಪರಾಕ್ರಮದಿಂದ ಅವರೊಡನೆ ಯುದ್ಧಮಾಡುತಿರಲು ಗಂಧರ್ವ ಪತಿಯೂ ಯುದ್ಧಕ್ಕೆ ಬಂದವನಾಗಿ ಅರ್ಜುನನನ್ನುನೋಡಿ 'ನಾನು ನಿನ್ನ ಸ್ನೇಹಿತನಾದ ಚಿತ್ರಸೇನನಯ್ಯಾ' ಎಂದು ತಿಳಿಯಪಡಿಸಿದನು. ಅರ್ಜುನನು ಆತನನ್ನು ಮರ್ಯಾದೆ ಯಿಂದ ಗೌರವಿಸಿ ದುರ್ಯೋಧನನನ್ನು ನೀವು ಏತಕ್ಕಾಗಿ ಹಿಡಿದಿರುವಿರೆಂದು ಕೇಳಲು ಚಿತ್ರಸೇನನು 'ನೀವು ಈರೀತಿಯಲ್ಲಿ ಕಷ್ಟಗಳನ್ನನುಭವಿಸುತಿರಲು ಇವನು ನಿಮ್ಮನ್ನು ಅವಮಾನಪಡಿಸಬೇಕೆಂದು ಬಂದವನಾದುದರಿಂದ ಇವನನ್ನು ದಂಡಿಸಿದೆ'ನೆಂದು ಹೇಳಿ ಸಂಕೋಲೆಗಳ ಸಮೇತರಾದ ಅವರನ್ನು ಧರ್ಮರಾಯನ ಬಳಿಗೆ ಕರೆದುಕೊಂಡು ಹೋಗಿ ಆ ಪಾಪಾತ್ಮರು ಮಾಡಿದ್ದ ಯೋಚನೆಯನ್ನು ಆತನಿಗೆ ತಿಳಿಸಿ ಇಂತಹ ನೀಚ ರನ್ನು ನಿನಗಿಷ್ಟಬಂದಂತೆಮಾಡೆಂದು ಹೇಳಿದನು. ಯುಧಿಷ್ಠಿರನು ಗಂಧರ್ವರನ್ನು ಸ್ತುತಿಸಿ ಆ ಕ್ಷಣವೇ ಅವರ ಸಂಕೋಲೆಗಳನ್ನು ಬಿಡಿಸಿ ಗಂಧರ್ವರನ್ನು ಹೊಗಳುತ್ತಾ ದುರ್ಯೋಧನನನ್ನು ಕುರಿತು ಇಂತು ಹೇಳಿದನು. 'ಬಾಲಕನೇ! ಇನ್ನು ಯಾವಾ ಗಲೂ ಇಂತಹ ದುಷ್ಕೃತ್ಯಗಳನ್ನು ಮಾಡಬೇಡ. ಎಚ್ಚರಿಕೆಯಿಂದ ಕಾರ್ಯಗಳನ್ನು ನಡೆಸುವವನು ಸುಖಹೊಂದುವನು. ಕುರುಕುಮಾರಕನೇ! ನೀನು ನಿನ್ನ ತಮ್ಮಂದಿ ರೊಡಗೂಡಿ ಸುಖದಿಂದಿರು; ಇನ್ನು ಭಯಪಡದೇ ನಿನ್ನಿಷ್ಟಬಂದರೀತಿಯಲ್ಲಿ ಪುನಃ ನೀನಿದ್ದಸ್ಥಳಕ್ಕೆ ಸೇರಳು.' ಎಂದು ಈ ರೀತಿಯಲ್ಲಿ ಧರ್ಮಜನು ದುರ್ಯೋಧನನು ತನ್ನ ವನಾದುದೊಂದನ್ನೇ ಯೋಚಿಸಿ ಆತನಿಗಿಂತಹ ಕಷ್ಟ ಪ್ರಾಪ್ತವಾಯಿತೇ ಎಂದು ಪಶ್ಚಾ ತ್ತಾಪಪಟ್ಟನು.

ಬಳಿಕ ದುರ್ಯೋಧನನು ತನ್ನ ಗೌರವಕ್ಕೂ ಪಾಂಡವರು ತನ್ನನ್ನು ಬಿಡಿಸಿದು ದಕ್ಕೂ ಹೃದಯದಲ್ಲಿ ಅತ್ಯಂತ ವ್ಯಥೆಯುಳ್ಳವನಾಗಿ ಹೊರಟು ಒಂದು ಸ್ಥಳದಲ್ಲಿ

ತಲೆಬೊಗ್ಗಿಸಿಕೊಂಡು ಚಿಂತಿಸುತ್ತಾ ಕುಳಿತಿದ್ದನು. ಕರ್ಣನು ಬಂದು ಆ ದೊರೆಯು ಜಯಹೊಂದಿರುವನೆಂದು ತಿಳಿದು ನಾನು ಸೋತಾಗ್ಯೂ ನೀನು ವಿಜಯಹೊಂದಿದೆ ಯಲ್ಲಾ ಅದಕ್ಕಾಗಿ ನಾನು ತುಂಬಾಸಂತೋಷಪಡುವೆನೆಂದನು. ಆ ಮಾತುಗಳನ್ನು ಕೇಳಿ ದುರ್ಯೋಧನನು ನಿಶ್ಚಯವನ್ನು ಅವನಿಗೆ ತಿಳಿಸಿ ಹೀಗೆಂದನು—ನಮ್ಮ ಆಲೋ ಚನೆಯು ಹೊರಬಿದ್ದುದಲ್ಲದೆ ಧರ್ಮರಾಯನು ನಮ್ಮನ್ನು ಬಿಡಿಸಿ ಕಳುಹಿಸಿದನು. ನಾನು ಯಾರಿಗೆ ಅಪಕಾರಮಾಡಿದ್ದೆನೋ ಅಂತಹ ಶತ್ರುಗಳಿಂದಲೇ ನನ್ನ ಪ್ರಾಣ ವುಳಿಯಿತು. ಇಂತಹ ಪ್ರಾಣಗಳನ್ನು ನಾನು ಇನ್ನುಮೇಲೆ ಧರಿಸಿರಲಾರೆನು. ದುಶ್ಯಾ ಸನನಿಗೆ ಪಟ್ಟವನ್ನು ಕಟ್ಟಿ ನಾನು ಪ್ರಾಯೋಪವೇಶವನ್ನು ಮಾಡುವೆನು, ಎನ್ನಲು ದುಶ್ಯಾಸನನು ವ್ಯಸನಯುಕ್ತನಾಗಿ ಅಣ್ಣನ ಪಾದಗಳಮೇಲೆ ಬಿದ್ದು ನಾನು ದೊರೆ ತನಮಾಡಲೊಲ್ಲೆನು; ಈ ಚಿಂತೆಯನ್ನು ಬಿಟ್ಟು ಎಂದಿನಂತೆ ಕುರುಕುಲಾಧಿಪತಿಯಾಗಿ ರಾಜ್ಯಭಾರಮಾಡೆಂದು ಬೇಡಿಕೊಂಡನು. ರಾಧೇಯನು ಗಾಂಧಾರೇಯನ ದುರ್ಮಂ ತ್ರವನ್ನು ದೂಷಿಸುತ್ತಾ ಪಾಂಡವರು ತಮಗೆ ದೊರೆಯಾದ ನಿನ್ನ ವಿಷಯದಲ್ಲಿ ತಮ್ಮ ಕರ್ತವ್ಯಧರ್ಮವನ್ನು ಮಾತ್ರ ಮಾಡಿದಾರೆಂತಲೂ ಅದಕ್ಕಾಗಿ ನೀನು ವ್ಯಸನ ಪಡು ವುದಕ್ಕೂ ಖಿನ್ನ ಮನಸ್ಕನಾಗಿರುವುದಕ್ಕೂ ಕಾರಣವಿಲ್ಲವೆಂತಲೂ ಹೇಳಿದನು. ಶಕು ನಿಯು ಆತನನ್ನು ನೋಡಿ ಪಾಂಡವರೊಡನೆ ಸ್ನೇಹಮಾಡಿ ಅವರು ಮಾಡಿದ ಉಪ ಕಾರಕ್ಕೆ ಪ್ರತಿಯಾಗಿ ಪಿತ್ರಾರ್ಜಿತವಾದ ಅವರ ರಾಜ್ಯವನ್ನು ಅವರಿಗೆ ಕೊಡೆಂದು ಹೇಳಿದನು. ಆ ಮಾತುಗಳನ್ನೆಲ್ಲಾ ಕೇಳಲೊಲ್ಲದೆ ದುರ್ಯೋಧನನು ಸಾವನ್ನೇ ನಿಶ್ಚ ಯಮಾಡಿ ಕುಶಾಸ್ತರಣದಲ್ಲಿ ಕುಳಿತು ಮೌನಹೊಂದಿ ಪ್ರಾಣತ್ಯಾಗಮಾಡುವುದಕ್ಕೆ ಪ್ರಯತ್ನಿಸುತ್ತಿದ್ದನು. ಆ ಸಮಯದಲ್ಲಿ ಭಯಂಕರರಾದ ದೈತ್ಯಗಣಗಳು ದುರ್ಯೋ ಧನನು ಸತ್ತಲ್ಲಿ ತಮಗೆ ದೇವತೆಗಳೊಡನೆ ಮುಂದಕ್ಕೆ ಪ್ರಾಪ್ತವಾಗುವ ಯುದ್ಧದಲ್ಲಿ ತಾವು ಬಲಹೀನರಾಗುವೆವೆಂಬ ಭೀತಿಯಿಂದ ಆ ದೊರೆಯನ್ನು ತಮ್ಮ ಮಾಯಾಬಲ ದಿಂದ ತಮ್ಮಲ್ಲಿಗೆ ಸೂಕ್ಷ್ಮದೇಹದಲ್ಲಿ ಬರಮಾಡಿಕೊಂಡು ಆತ್ಮಹತ್ಯಮಾಡಿಕೊಳ್ಳುವುದು ಅಯುಕ್ತವೆಂದು ಆತನಿಗೆ ತಿಳಿಸಿ ಹೀಗೆಂದರು—ಪಾಂಡವರೊಡನೆ ನೀನು ಯುದ್ಧಮಾ ಡುವವೇಳೆ ನಾವು ನಿನಗೆ ಸಹಾಯಮಾಡಿ ನಿನಗೆ ಜಯವುಂಟಾಗುವಂತೆ ಮಾಡುವೆವು. ಮಹೇಶ್ವರನ ಅನುಗ್ರಹದಿಂದ ನಾವು ನಿನ್ನನ್ನು ಪಡೆದಿರುವೆವು. ನಿನ್ನಕಡೆ ಯುದ್ಧಮಾ ಡುವುದಕ್ಕೆ (ತ್ವದರ್ಥೇ ತ್ಯಕ್ತಜೀವಿತಾಃ) ಅನೇಕ ದಾನವರು ಅವತರಿಸಿರುವರು.

ಕರ್ಣನು ಇಂದ್ರತನಯನನ್ನು ಕೊಲ್ಲತಕ್ಕವನು. ನೀನು ಭೂಮಂಡಲವನ್ನೆಲ್ಲಾ ಆಳತ ತಕ್ಕವನು. ದೇವತೆಗಳಿಗೆ ಪಾಂಡವರು ಹೇಗೋ ಹಾಗೆ ನೀನು ದಾನವರಿಗೆ ಆಶ್ರಯ ನಾಗಿರುವಿ, ಎಂದು ಹೇಳಿ ದುರ್ಯೋಧನನನ್ನು ಮೊದಲಿದ್ದ ಸ್ಥಳಕ್ಕೆ ಕರೆದುಕೊಂಡು ಹೋಗಿಬಿಡಲು ಆತನು ಅವರುಗಳ ವಚನಗಳನ್ನು ಮನನಮಾಡುತ್ತಾ ನಿದ್ರೆಯಿದ್ದೆದ್ದಂತೆ ಎದ್ದು ಸೈನಿಕರೊಡನೆ ಕೂಡಿ ಹಸ್ತಿನಾಪಟ್ಟಣಕ್ಕೆ ತೆರಳಿದನು. ಅನಂತರದಲ್ಲಿ ಕರ್ಣನು ವಿಜಯಯಾತ್ರೆಹೊರಟು ಅನೇಕ ಅನೇಕದೇಶಗಳನ್ನು ಗೆದ್ದು ದುರ್ಯೋಧನನಿಗೆ ಅಧೀ ನಮಾಡಲು ಆತನು ವೈಷ್ಣವನಾಮಕವಾದ ಮಹಾಯಜ್ಞವನ್ನಾಚರಿಸಿ ನೃಪತಿಗಳೊಳ ಗೆಲ್ಲಾ ಶ್ರೇಷ್ಠನೆನಿಸಿಕೊಂಡನು. ಆತನಿಗೆ ರಾಜಸೂಯಯಾಗವನ್ನು ಮಾಡಲಪೇಕ್ಷೆ ಯಿತ್ತಾದಾಗ್ಯೂ ಯುಧಿಷ್ಠಿರನು ಬದುಕಿರುವವರೆಗೂ ತಾನದನ್ನು ಮಾಡಲಾರೆನೆಂದು ಭಾವಿಸಿ ಸುಮ್ಮನಿದ್ದನು. ಸೂತಸೂನುವು ಆ ರಾಜನೊಡನಿಂತೆಂದನು—"ನಾನು ಅರ್ಜುನನನ್ನು ಕೊಲ್ಲುವವರೆಗೂ ಮಾಂಸಾಹಾರಮಾಡುವುದಿಲ್ಲವೆಂತಲೂ ಕಾಲುಗ ಳನ್ನು ತೊಳಿಸಿಕೊಳ್ಳುವುದಿಲ್ಲವೆಂತಲೂ ಪ್ರತಿಜ್ಞೆಮಾಡಿರುವೆನು.''

[ಇದಲ್ಲದೆ ಇತರರು ಕೇಳಿದುದನ್ನು ಕೊಟ್ಟೇ ತೀರುವೆನು ಎಂಬುದೊಂದು ಆತನ ಜನ್ಮವ್ರತವಾಗಿತ್ತು. ಹಿಂದೆ ಒಂದುಸಾರಿ ಅನೇಕದಿವಸಗಳವರಿಗೆ ಹಿಡಿದಮಳೆ ಬಿಡದೆ ಸುರಿಯುತ್ತಿರುವವೇಳೆ ಯಾಗ ಪೂರೈಸುವುದಕ್ಕೋಸ್ಕರ ಯಜ್ಞದೀಕ್ಷೆಯನ್ನು ವಹಿಸಿದ್ದ ಬ್ರಾಹ್ಮಣನೊಬ್ಬನು ಸೌದೆಯಿಲ್ಲದೆ ಬಹಳ ಪೇಚಾಟಪಟ್ಟು ಕೊನೆಗೆ ದುರ್ಯೋಧನನ ಸಮೀಪಕ್ಕೆಬಂದು ಅವನನ್ನು ಯಾಚಿಸಿದನು. ಆಗ ರಾಜನುಎಷ್ಟು ತರದೂದು ಮಾಡಿದರೂ ಸೌದೆಯನ್ನು ತರಿಸುವುದಕ್ಕೆ ಆಗಲಿಲ್ಲವಾದುದರಿಂದ ಎಲೈ ಬ್ರಾಹ್ಮಣೋತ್ತಮನೇ, ಸ್ವಲ್ಪ ಮಳೆ ನಿಂತತರುವಾಯ ನಿನಗೆ ಬೇಕಾದಷ್ಟು ಕಾಷ್ಠ ವನ್ನು ತರಿಸಿಕೊಡುವೆನು. ಈಗ ನಿನ್ನ ಕೋರಿಕೆಯನ್ನು ಪೂರೈಸಲು ಸಾಧ್ಯವಿಲ್ಲ ಎಂದು ಹೇಳಿದನು. ಅನಂತರ ಆ ಬ್ರಾಹ್ಮಣನು ಕರ್ಣನ ಬಳಿಗೆ ಹೋಗಿ ಅಯ್ಯಾ ಕರ್ಣನೇ ಸೌದೆಯಿಲ್ಲದೆ ಯಜ್ಞವನ್ನು ಪೂರೈಸಲು ಸಾಧ್ಯವಿಲ್ಲವಾಗಿದೆ. ಹೋಮಕುಂ ಡದಲ್ಲಿ ಯಜ್ಞೇಶ್ವರನು ಆರಿಹೋಗುತ್ತಾ ಇದಾನೆ. ಸೌದೆಯನ್ನು ಕೊಡಿಸಿಕೊಡ ಬೇಕು, ಎಂದು ಯಾಚಿಸಲಾಗಿ ಕರ್ಣನು ಆಳುಗಳನ್ನು ಕರೆಯಿಸಿ ತನ್ನ ವಿಶಾಲವಾದ ಅರಮನೆಯಲ್ಲಿ ತನ್ನ ವಾಸಕ್ಕಾಗಿ ಒಂದು ತೊಟ್ಟಿಯನ್ನು ಉಳಿಸಿಕೊಂಡು ಉಳಿದಭಾ ಗದಲ್ಲಿನ ಕಂಬ ತೊಲೆ ಮೊದಲಾದ ಸಾಮಾನುಗಳನ್ನೆಲ್ಲಾ ಒಡೆಯಿಸಿ ಗಾಡಿಗಳಲ್ಲಿ

ತುಂಬಿಸಿ ಬ್ರಾಹ್ಮಣನ ಯಜ್ಞಶಾಲೆಗೆ ಕಳುಹಿಸಿಕೊಟ್ಟನು. ಈಪ್ರಕಾರ ತನ್ನ ವ್ರತವನ್ನು ಉಳಿಸಿಕೊಂಡನು. ಆದರೆ ಈತರಹ ಸಂಕಲ್ಪಗಳಿಂದ ಇವನಿಗೆ ಉತ್ತರೋತ್ತರ ಅನೇಕ ಕಷ್ಟಗಳು ಪ್ರಾಪ್ತವಾದವು.]

ಇಂತಹ ಪ್ರತಿಜ್ಞೆಯಿಂದ ಅವನಿಗೆ ತೊಂದರೆ ಪ್ರಾಪ್ತವಾಯಿತು. ಇಂದ್ರನು ಅರ್ಜುನನಿಗೆ ಉಪಕಾರಮಾಡಲೋಸ್ಕರ ಕರ್ಣನಬಳಿಗೆ ಬಂದು ಆತನ ಸಹಜವಾದ ಅಂದರೆ ಆವನ ಜತೆಯಲ್ಲಿ ಹುಟ್ಟಿ ಚರ್ಮದಂತೆ ಮೈಗೆ ಅಂಟಿಕೊಂಡಿದ್ದು ರಕ್ಷಕವಾಗಿದ್ದ ಕವಚಕುಂಡಲಗಳನ್ನು ಯಾಚಿಸಲು ಅವನ್ನು ಆತನಿಗೆ ಕೊಟ್ಟು ತನ್ನ ಪ್ರತಿಜ್ಞೆಯನ್ನು ನೆರವೇರಿಸಿಕೊಂಡನು. ಅವು ಇವನನ್ನು ಎಲ್ಲಾಕೇಡಿನಿಂದಲೂ ರಕ್ಷಿಸುತ್ತಿದ್ದವು. ಅವು ಮೈಮೇಲೆ ಇದ್ದರೆ ಅರ್ಜುನನು ಇವನನ್ನು ಕೊಲ್ಲುವುದಕ್ಕೆ ಆಗುತ್ತಿರಲಿಲ್ಲ.

[ಮತ್ತೊಂದುಕಾಲದಲ್ಲಿ ಅಂದರೆ ಅವಸಾನಕಾಲದಲ್ಲಿ ಇವನ ಹೃದಯದಲ್ಲಿದ್ದು ಇವನನ್ನು ಮರಣದಿಂದ ರಕ್ಷಿಸುತ್ತಿದ್ದ ಅಮೃತಕಲಶವನ್ನು ಶ್ರೀಕೃಷ್ಣನು ವೃದ್ಧಬ್ರಾಹ್ಮಣನ ವೇಷದಲ್ಲಿ ಬಂದು ಯಾಚಿಸಿದನು. ಅದನ್ನೂ ಸಹ ಪ್ರತಿಜ್ಞೆಗೋಸ್ಕರ ಅವನು ತೆಗೆದುಕೊಟ್ಟು ರಕ್ಷೆಯನ್ನು ಕಳೆದುಕೊಂಡನು. ತೊಟ್ಟಬಾಣವನ್ನು ತೊಡುವುದಿಲ್ಲ. ಇಟ್ಟಗುರಿಯನ್ನು ಇಡುವುದಿಲ್ಲ ಎಂಬ ಪ್ರತಿಜ್ಞೆಗಳನ್ನು ಕುಂತೀದೇವಿಗೆ ಇವನು ಕೊಟ್ಟಿದ್ದನು. ಇದು ಕೂಡ ಇವನಿಗೆ ತೊಂದರೆಯನ್ನು ಉಂಟುಮಾಡಿತು.]

ದುರ್ಯೋಧನನು ಪುನಃ ಪಾಂಡವರಿಗೆ ಕೇಡನ್ನು ಮಾಡತಕ್ಕವನಾಗಿದ್ದರೂ ಆತನು ಮಾಡಿದ ಯುಕ್ತಿಯೊಂದೂ ಫಲಿಸಲಿಲ್ಲ. ಅದುವರೆಗೆ ಹನ್ನೆರಡು ಸಂವತ್ಸರಗಳು ಕಳೆಯುವ ಸಮಯವಾಯಿತು. ಅಷ್ಟರಲ್ಲಿ ಧರ್ಮನಂದನನ ಧರ್ಮಬುದ್ಧಿಯನ್ನು ಕುರಿತ ದೊಡ್ಡದಾದ ಪರೀಕ್ಷೆಯೊಂದೊದಗಿತು. ಒಬ್ಬ ಬ್ರಾಹ್ಮಣನು ಅರಣಿಮಂಥನಗಳನ್ನು ಒಂದು ಮರದಕೊಂಬೆಗೆ ತಗಲುಹಾಕಿರಲು ಒಂದು ಹರಿಣವು ಆ ಸ್ಥಳಕ್ಕೆ ಬಂದು ಅವನ್ನು ಕೊಂಬುಗಳಿಂದ ತಿವಿಯಲು ಅವು ಅದರ ಕೊಂಬಿಗೆ ತಗುಲಿಕೊಂಡವು. ಆಗ ಆ ಮೃಗವು ಅವುಗಳೊಡನೆ ಕಾಡಿನಲ್ಲಿ ಓಡಿತು. ಆ ಬ್ರಾಹ್ಮಣನು ಪಾಂಡವರ ಬಳಿಗೆಬಂದು ಆ ಯಜ್ಞೋಪಕರಣಗಳನ್ನು ತಂದುಕೊಡಬೇಕೆಂದು ಬೇಡಲು ಅವರುಗಳು ಜಾಗ್ರತೆಯಾಗಿ ಆ ಮೃಗವನ್ನು ಅಟ್ಟಿಕೊಂಡು ಹೋಗಿ ಅದರ ಮೇಲೆ ಅನೇಕ ಬಾಣಗಳನ್ನು ಹೊಡೆದಾಗ್ಯೂ ಅದು ಏಟಿಗೆಸಿಕ್ಕದೆ ಓಡಿ ಕಾಣಿಸದೇ

ಹೋಯಿತು. ಪಾಂಡವರು ಮಾರ್ಗಾಯಾಸದಿಂದ ಬಳಲಿ ಬಾಯಾರಿರಲು ಯುಧಿಷ್ಠಿರನು ನಕುಲನನ್ನು ನೀರುತರುವುದಕ್ಕಾಗಿ ಕಳುಹಿಸಿದನು. ನಕುಲನು ಹೊರಟು ಒಂದು ಕೊಳವನ್ನು ನೋಡಿ ಅಲ್ಲಿ ನೀರನ್ನು ಕುಡಿಯಲುಬ್ಯುಗಿಸಲು 'ನನ್ನ ಪ್ರಶ್ನೆಗಳಿಗುತ್ತರ ಕೊಡದೆ ನೀನು ಆ ಕೊಳದಲ್ಲಿ ಜಲಪಾನಮಾಡಲಾಗದು' ಎಂಬ ಧ್ವನಿಯು ಕೇಳ ಬಂತು. ನಕುಲನು ಅದನ್ನು ಲಕ್ಷ್ಯಮಾಡದೆ ಕೊಳದಲ್ಲಿಳಿದು ನೀರನ್ನು ಕುಡಿದು ವಿಗತಪ್ರಾಣನಾಗಿ ಬಿದ್ದನು. ಆತನು ಬರುವುದು ಸಾವಕಾಶವಾದುದನ್ನು ತಿಳಿದು ಧರ್ಮಜನು ಸಹದೇವನನ್ನು ಕಳುಹಿಸಲು ಅವನೂ ಅದೇಪ್ರಕಾರ ಆಜ್ಞೆಗೆ ವಿರೋಧವಾಗಿ ನಡೆದು ಅದರಂತೆಯೇ ಬಿದ್ದನು. ಅರ್ಜುನನೂ ಭೀಮನೂ ಹಾಗೆಯೇ ಹೋಗಿ ಜಲಪಾನಮಾಡಿ ಸತ್ತರು. ಅನಂತರದಲ್ಲಿ ಧರ್ಮರಾಯನು ತಾನೇ ಅಲ್ಲಿಗೆ ಹೋಗಿ ನಾಲ್ವರು ತಮ್ಮಂದಿರೂ ಸತ್ತು ಭೂಮಿಯಮೇಲೆ ಬಿದ್ದಿರುವುದನ್ನು ನೋಡಿ ಮನಸ್ಸಿನಲ್ಲಿ ವಿಶೇಷಖೇದಹೊಂದಿ ಇವರುಗಳನ್ನು ಕೊಂದ ಶತ್ರುವು ಯಾರೆಂದು ಕೂಗುತ್ತಾ ಆ ತಟಾಕದಲ್ಲಿಳಿದು ಸ್ನಾನಮಾಡಲೆತ್ನಿಸಲು ನಿನ್ನ ತಮ್ಮಂದಿರನ್ನು ನಾನೇ ಕೊಂದೆನು. ನೀನೂ ಸಹ ನನ್ನ ಪ್ರಶ್ನೆಗಳಿಗೆ ಉತ್ತರಕೊಡದೆ ಇದರಲ್ಲಿ ಜಲವನ್ನು ಪಾನಮಾಡಿದೆಯಾದರೆ ನಿನ್ನ ತಮ್ಮಂದಿರಗತಿಯನ್ನೇ ನೀನೂ ಹಿಡಿಯುವುದು ನಿಜವೆಂಬ ಧ್ವನಿಯು ಕೇಳಬಂತು. ಆ ಮಾತುಗಳನ್ನು ಕೇಳಿ ಧರ್ಮಜನು ಬೆಚ್ಚರಬಿದ್ದು ನೀನು ಯಾರೆಂದು ಕೇಳಲು ಆ ಭೂತವು ಬಕದ ರೂಪವನ್ನು ಧರಿಸಿ ಆತನಿಗೆ ಕಾಣಿಸಿಕೊಂಡು ಹೀಗೆಂದಿತು—ಅಯ್ಯಾ ನಾನೊಬ್ಬಯಕ್ಷನು. ಈ ಕೊಳವು ನನ್ನದು. ನನ್ನ ಪ್ರಶ್ನೆಗಳಿಗುತ್ತರವನ್ನು ಕೊಡದೆ ಇಲ್ಲಿ ಪಯಃಪಾನಮಾಡಲಾಗದು. ಎಂದು ಹೇಳಲು ಆ ಜನನಾಥನು ದಾಂತನಾದುದರಿಂದ ಬಾಯಾರಿಕೆಯನ್ನಡಗಿಸಿಕೊಂಡು ಹೀಗೆಂದನು. ಪರರೊಡವೆಗೆ ನಾನು ಒಂದುದಿನವೂ ಆಶಿಪಡತಕ್ಕವನಲ್ಲ. ನಿನ್ನ ಪ್ರಶ್ನೆಗಳಿಗೆ ನನಗೆ ತಿಳಿದಿರುವಮಟ್ಟಿಗೆ ಉತ್ತರಕೊಡಬಲ್ಲೆನು, ಎಂದು ಹೇಳಿದನು. ಅದನ್ನು ಕೇಳಿ ಯಕ್ಷನು ಅನೇಕ ಪ್ರಶ್ನೆಗಳನ್ನು ಧರ್ಮಜನನ್ನು ಕೇಳಲು ಆತನು ಚಾತುರ್ಯತೋರ್ಪಡುವಂತೆ ತಕ್ಕ ಉತ್ತರಗಳನ್ನು ಕೊಡಲು ಯಕ್ಷನು ಪ್ರಸನ್ನನಾಗಿ ನಿನ್ನ ತಮ್ಮಂದಿರಲ್ಲೊಬ್ಬನನನ್ನು ಬದುಕಿಸುವೆನು, ಕೇಳಿಕೊಳ್ಳೆಂದನು. ಧರ್ಮಜನು ನಕುಲನನ್ನು ಬದುಕಿಸೆಂದು ಕೋರಲು ಯಕ್ಷನು ಭೀಮನನ್ನಾಗಲೀ ಅರ್ಜುನನನ್ನಾಗಲೀ ಕೋರದೆ ನಿನ್ನ ಬಲತಾಯಿಯ ಮಗನನ್ನು ಬದುಕಿಸೆಂದು ಕೇಳುವುದು

ನ್ಯಾಯವೇ ? ಎನ್ನಲು ಧರ್ಮನಂದನನು—ಅಯ್ಯಾ, ಅನೃಶಂಸ್ಯವು ಸರ್ವಧರ್ಮ ಗಳಲ್ಲಿಯೂ ಶ್ರೇಯಸ್ಕರವಾದುದು. ನಮ್ಮ ತಾಯಿಯರಲ್ಲಿ ಒಬ್ಬಳೂ ಸುತವಿಹೀನೆ ಯಾಗಿರಲಾಗದು. ನಮ್ಮ ತಾಯಿಯರಿಬ್ಬರಲ್ಲಿಯೂ ನಾನು ಒಂದೇ ತೆರದಿಂದ ನಡೆಯು ವವನಾದುದರಿಂದ ನಕುಲನನ್ನೇ ಬದುಕಿಸೆನ್ನಲು ಯಕ್ಷನಿಂತೆಂದನು—ಭರತಕುಲಪುಂ ಗವನೇ, ಅರ್ಥಕಾಮಗಳಿಗಿಂತಲೂ ನಿನಗೆ ಅಹಿಂಸೆಯೇ ಪರಮಧರ್ಮವಾದುದರಿಂದ ನಿನ್ನ ತಮ್ಮಂದಿರೆಲ್ಲರೂ ಬದುಕುವರೆಂದು ಅನುಗ್ರಹಿಸಲು ಅವರೆಲ್ಲರೂ ಪುನಃ ಸಜೀವರಾಗಿ ಎದ್ದರು. ಅದಕ್ಕೆ ಧರ್ಮಜನು ಆಶ್ಚರ್ಯಹೊಂದಿ ಬಕರೂಪದಿಂದಿರುವ ನೀನು ಯಕ್ಷಮಾತ್ರದವನಲ್ಲ. ನೀನು ಯಾವದೇವತೆಯೋ ತಿಳಿಸಬೇಕೆಂದು ಬೇಡಲು ಆತನು ನಾನು ಧರ್ಮದೇವತೆಯೆಂದು ನಿಜರೂಪದಿಂದ ಪ್ರತ್ಯಕ್ಷನಾಗಿ ಕರುಣೆಯಿಂದಕೂಡಿ ಆತನೊಡನೆ ನಿನಗಿಷ್ಟವಾದ ವರವನ್ನು ಕೋರು, ಕೊಡುವೆನೆನ್ನಲು ಧರ್ಮಜನು ಬ್ರಾಹ್ಮ ಣನ ಅರಣಿ ಮಂಥನಗಳನ್ನು ಆತನಿಗೆ ಕೊಡಿಸೆಂದು ಪ್ರಾರ್ಥಿಸಲು ಯಮನಿಂತೆಂದನು. ನಿನ್ನ ಮನಸ್ಸನ್ನು ಪರೀಕ್ಷಿಸಬೇಕೆಂದು ನಾನು ಮೃಗರೂಪವನ್ನು ಧರಿಸಿ ಆ ಬ್ರಾಹ್ಮಣನ ಯಜ್ಞೋಪಕರಣವನ್ನು ತೆಗೆದುಕೊಂಡು ಹೋದೆನು; ಅವುಗಳನ್ನು ಕೊಡುವೆನು. ಬೇರೊಂದು ವರವನ್ನು ಕೇಳೆನ್ನಲು ಕೌಂತೇಯಾಗ್ರಜ ನಿಂತೆಂದನು. ನಾವು ಹನ್ನೆರಡು ವರ್ಷಗಳು ವನದಲ್ಲಿ ಸಂಚರಿಸುತ್ತಾ ಕಳೆದೆವು. ಹದಿಮೂರನೆಯ ಸಂವತ್ಸರವು ಪ್ರಾಪ್ತ ವಾಯಿತು. ಆ ಸಮಯದಲ್ಲಿ ನಾವೆಲ್ಲಿಯಾದರೂ ಗೂಢವೃತ್ತಿಯಿಂದ ವಾಸಮಾಡುವಲ್ಲಿ ನಮ್ಮನ್ನು ಇತರರು ತಿಳಿಯದಿರುವಂತೆ ಅನುಗ್ರಹಿಸೆಂದು ಬೇಡಲು ಯಮನು ಆತನು ಕೇಳಿದವರಗಳನ್ನು ಕೊಟ್ಟು ನಿಮ್ಮಿಷ್ಟಬಂದ ರೂಪವನ್ನು ಧರಿಸಿ ವಿರಾಟನಗರದಲ್ಲಿ ವಾಸಿಸಿರೆಂದು ಹೇಳಿ ಅದೃಶ್ಯನಾದನು. ಅನಂತರ ಹನ್ನೆರಡು ವರ್ಷಗಳು ಕಳೆಯಲು ಪಾಂಡವರೈವರೂ ದ್ರೌಪದೀಸಮೇತರಾಗಿ ಧೌಮ್ಯನನ್ನೂ ಬ್ರಾಹ್ಮಣರನ್ನೂ ಬಿಟ್ಟು ಅವರ ಆಶೀರ್ವಾದಗಳನ್ನು ಹೊಂದಿ ವಿರಾಟನಗರಕ್ಕೆ ಹೊರಡಲು ಉದ್ಯುಕ್ತರಾದರು.

ವನಪರ್ವವು ಮುಗಿದುದು.



# ವಿರಾಟಪರ್ವ.

ಹೀಗೆ ವಿರಾಟನು ಪಾಲಿಸುತಿದ್ದ ಮತ್ಸ್ಯದೇಶಕ್ಕೆ ಯುಧಿಷ್ಠಿರನು ಹೊರಡಲೆತ್ನಿಸಿ ತಮ್ಮಂದಿರನ್ನು ನೋಡಿ ನಾನು ದ್ಯೂತವಿದ್ಯೆಯಲ್ಲಿ ಪ್ರವೀಣನಾಗಿ ಬ್ರಾಹ್ಮಣ ವೇಷವನ್ನು ಧರಿಸಿ ಕಂಕನೆಂಬ ಹೆಸರುಳ್ಳವನಾಗಿ ವಿರಾಟನನ್ನು ಸೇವಿಸುತಿರುವೆನು. ನೀವುಗಳು ಯಾವ ವೇಷವನ್ನು ಧರಿಸುವಿರೆಂದು ಕೇಳಲು ಭೀಮನಿಂತೆಂದನು—ನಾನು ಸೂದನಾಗಿಯೂ ಮಲ್ಲವಿದ್ಯೆಯಲ್ಲಿ ದಕ್ಷನಾಗಿಯೂ ಇದ್ದು ವಲಲನೆಂಬ ಹೆಸರಿನಿಂದ ಪ್ರಕಾಶಿಸುವೆನೆಂದನು. ಅರ್ಜುನನು ಊರ್ವಶಿಯು ಕೊಟ್ಟ ಶಾಪವನ್ನೂ ಇಂದ್ರನ ಮಾತನ್ನೂ ಜ್ಞಾಪಕಮಾಡಿಕೊಂಡವನಾಗಿ ನಾನು ಶಿಖಂಡಿಯಾಗಿ ಸ್ತ್ರೀಯರೊಡನೆ ವಾಸಿಸುತ್ತಾ ಕನ್ನಿಕೆಯರಿಗೆ ಆಟಪಾಟಗಳನ್ನು ಕಲಿಸುತ್ತಾ ಬೃಹನ್ನಳೆಯೆಂಬ ಹೆಸರಿನಿಂದ ವರ್ತಿಸುವೆನೆಂದನು. ನಕುಲನು ಗ್ರಂಥಿಕನೆಂಬ ಹೆಸರನ್ನು ಧರಿಸಿ ವಿರಾಟನ ಅಶ್ವಶಿಕ್ಷಕನಾಗಿರುವೆನೆಂದನು. ಸಹದೇವನು ತಂತಿಪಾಲನೆಂಬ ಹೆಸರನ್ನುಹೊಂದಿ ವಿರಾಟನ ಹಸುಗಳನ್ನು ಕಾಪಾಡುತ್ತಾ ಕಾಲವನ್ನು ಕಳೆಯುವೆನೆಂದನು. ದ್ರೌಪದಿಯು ಸೈರಂಧ್ರಿಯೆಂಬ ಹೆಸರಿನಿಂದ ರಾಣಿವಾಸದಲ್ಲಿ ಮುಖ್ಯದಾದಿಯಾಗಿರುವೆನು. ನನಗಾಗಿ ಸ್ವಲ್ಪವೂ ಯೋಚಿಸಬೇಡಿಯೆಂದಳು. ಯುಧಿಷ್ಠಿರನು ಅಗ್ನಿಹೋತ್ರದೊಡನೆ ಧೌಮ್ಯನನ್ನು ದ್ರುಪದನಬಳಿಗೆ ಕಳುಹಿಸಿ ಸೇವಕರನ್ನು ಪಾಂಚಾಲದೇಶಕ್ಕೆ ಕಳುಹಿಸಿಬಿಟ್ಟನು. ತಮ್ಮ ವರ್ತಮಾನವು ಧೌಮ್ಯನವಿನಹ ಮಿಕ್ಕಯಾರಿಗೂ ತಿಳಿದಿರಲಿಲ್ಲ.

ಈ ರೀತಿಯಲ್ಲಿ ಪಾಂಡವರು ಪಾಂಚಾಲಿಯುಸಹಿತರಾಗಿ ಪ್ರಯಾಣಮಾಡಿ ವಿರಾಟನ ಪಟ್ಟಣದ ಸಮೀಪದ ಶ್ಮಶಾನದ ಬಳಿಯಿದ್ದ ಒಂದು ಶಮೀವೃಕ್ಷದಲ್ಲಿ ತಮ್ಮ ಆಯುಧಗಳನ್ನೆಲ್ಲಾ ಇಟ್ಟು ಅಲ್ಲಿಗೆ ಯಾರೂ ಸೇರದಿರುವಂತೆ ಅದಕ್ಕೆ ಒಂದು ಶವವನ್ನು ತೂಗಹಾಕಿದರು. ಧರ್ಮನಂದನನು ಭಕ್ತರ ಪದಾರ್ಥಗಳನ್ನು ಕಳ್ಳತನ ಮಾಡದಿರುವುದಕ್ಕಾಗಿ ದುರ್ಗಾದೇವಿಯನ್ನು ಧ್ಯಾನಮಾಡಲು ಆ ದೇವಿಯು ಆತನಿಗೆ ಪ್ರತ್ಯಕ್ಷಳಾಗಿ ನಾನು ನಿಮ್ಮನ್ನು ಕಾಪಾಡಿ ನಿಮಗೆ ವಿಜಯವುಂಟಾಗುವಂತೆ ಅನುಗ್ರಹಿಸಿರುವೆನೆಂದು ಹೇಳಿ ಅಂತರ್ಧಾನವನ್ನು ಹೊಂದಿದಳು. ಆ ದೇವಿಯ ಅನುಗ್ರಹವನ್ನು ಹೊಂದಿ ಧರ್ಮಜನು ರತ್ನಗಳನ್ನು ಕೆತ್ತಿರುವ ಬಂಗಾರದ ಶಾರಿಕೆಗಳನ್ನು ಕೈಯಲ್ಲಿ ತೆಗೆದುಕೊಂಡು ವಿರಾಟನ ಸಭಾಮಂದಿರವನ್ನು ಪ್ರವೇಶಿಸಲು ಆ ದೊರೆಯು

ಆತನ ಗೌರವವನ್ನು ನೋಡಿ ಪ್ರಸನ್ನನಾಗಿ ಕುಶಲಪ್ರಶ್ನೆಮಾಡಿ ನೀನು ನಮಗೆ ಮಂತ್ರಿಯೂ ಸ್ನೇಹಿತನೂಆಗಿದ್ದು ನಮ್ಮಲ್ಲಿರುವುದೆಂದು ನಿಯಮಿಸಿದನು. ಭೀಮಸೇನನು ಆತನ ಬಳಿಗೆ ಬಂದು ನನ್ನನ್ನು ನಿನ್ನ ಬಾಣಸಿಗ (ಅಡಿಗೆಯವ)ನನ್ನಾಗಿ ಮಾಡಿಕೊಳ್ಳೆಂದು ಬೇಡಲು ಆ ದೊರೆಯು ಅವನನ್ನುನೋಡಿ ನಿನ್ನ ಶರೀರದ ಸೊಬಗನ್ನು ನೋಡಿದರೆ ನೀನು ಅಂತಹ ಕೆಲಸವನ್ನು ಮಾಡತಕ್ಕವನಲ್ಲವೆಂದು ತಿಳಿಯುವೆನು. ಆದರೂ ನನ್ನ ಪಾಕಶಾಲೆಗೆಲ್ಲಾ ಅಧಿಪತಿಯಾಗಿರಬಹುದೆಂದು ಅಪ್ಪಣೆಮಾಡಿದನು. ದ್ರೌಪದಿಯು ಊಳಿಗಮಾಡಲನುಕೂಲವಾದ ವೇಷವನ್ನು ಧರಿಸಿ ಅರಮನೆಯಬಳಿ ಹೋಗುತ್ತಿರುವಲ್ಲಿ ವಿರಾಟನ ರಾಣಿಯು ಆಕೆಯನ್ನು ತನ್ನ ಬಳಿಗೆ ಬರಮಾಡಿಕೊಂಡು ನೀನು ಯಾರೆಂದುಕೇಳಲು ದ್ರೌಪದಿಯು ಅಮ್ಮಾ! ನಾನು ಕೆಲಸವನ್ನು ಕೋರುತ್ತಿರುವಳಾಗಿ ಬಂದಿರುವೆನೆಂದಳು. ಆ ಮಾತುಗಳನ್ನು ಕೇಳಿ ಆ ದೇವಿಯು ಸ್ವಲ್ಪವೂ ಕುಂದಿಲ್ಲದ ಆಕೆಯ ಲಾವಣ್ಯಾತಿಶಯವನ್ನು ನೋಡಿ ನೀನು ದೇವತಾಸ್ತ್ರೀಯಲ್ಲದೆ ಮನುಷ್ಯಸ್ತ್ರೀಯೆ? ನಿನ್ನನ್ನು ಹೇಗೆ ಸೇವಕಳನ್ನಾಗಿ ನಿಯಮಿಸಿಕೊಳ್ಳಲಿ ಎನ್ನಲು ದ್ರೌಪದಿಯು ನಾನು ಅಂತಹವಳಲ್ಲ. ನನ್ನನ್ನು ನಿನ್ನ ದಾಸಿಯನ್ನಾಗಿ ಮಾಡಿಕೊಳ್ಳೆಂದು ಬೇಡಲು ಸುಧೇಷ್ಣೆಯಿಂತೆಂದಳು—ಎಣೆಯಿಲ್ಲದ ನಿನ್ನ ಅಂದಕ್ಕೆ ದೊರೆಯ ಚಿತ್ತವು ಭ್ರಾಂತಿಹೊಂದೀತೆಂದು ನನ್ನ ಹೃದಯವು ತಲ್ಲಣಿಸುತ್ತಿರುವುದು. ನಿನ್ನ ಮೇಲೆ ಪ್ರೀತಿಹೊಂದದಿರುವ ಪುರುಷನೂ ಇರುವನೇ? ಆದುದರಿಂದ ನಿನ್ನನ್ನು ದಾಸಿಯನ್ನಾಗಿ ಮಾಡಿಕೊಳ್ಳಲು ಹೆದರುವೆನು ಎನ್ನಲು ದ್ರೌಪದಿಯು ಹೀಗೆಂದಳು. ನನ್ನ ಪತಿಗಳೈವರು ಗಂಧರ್ವರಿರುವರು. ಆದುದರಿಂದ ಮನುಷ್ಯರು ಯಾರೂ ನನಗೆ ಅವಮಾನಪಡಿಸಲು ಸಾಧ್ಯವಿಲ್ಲ. ಎಂದುಹೇಳಲು ಆ ದೇವಿಯು ಮುದದಿಂದ ಆ ಸ್ತ್ರೀಯನ್ನು ತನ್ನ ಸೇವೆಗಾಗಿ ಇಟ್ಟುಕೊಂಡಳು. ಇವಳಿಂತಹವಳೆಂಬುದನ್ನು ಯಾರೂ ಊಹಿಸಲಾರದೆ ಹೋದರು. ಅಷ್ಟರಲ್ಲಿ ಸಹದೇವನು ಗೋಪಾಲವೇಷವನ್ನು ಧರಿಸಿ ವಿರಾಟನ ಬಳಿಗೆ ಬಂದು ನಾನು ಪಶುಗಳನ್ನು ಕಾಪಾಡುವ ರೀತಿಯನ್ನು ಚೆನ್ನಾಗಿ ಬಲ್ಲೆನು. ನನ್ನನ್ನು ಕಾಪಾಡೆಂದು ಕೇಳಲು ಆ ನರಪತಿಯು ತನ್ನ ಪಶುಗಳನ್ನು ಪರೀಕ್ಷಿಸುವುದಕ್ಕಾಗಿ ಅವನನ್ನು ಕಳುಹಿಸಿದನು. ಕೂಡಲೆ ಅರ್ಜುನನು ಸ್ತ್ರೀಯರತೊಡಿಗೆಗಳನ್ನು ಹಾಕಿಕೊಂಡು ವಿರಾಟನಬಳಿಗೆ ಬಂದು ನಿನ್ನ ಪುತ್ರಿಯಾದ ಉತ್ತರೆಗೆ ನೃತ್ಯಗೀತೆಗಳನ್ನು ಕಲಿಸುವೆನು. ನನ್ನನ್ನು ನಿಯಮಿಸಿಕೊಳ್ಳೆನ್ನಲು ಆ ನೃಪಾಲನು ವಿಸ್ಮಿತನಾಗಿ

ನಿನ್ನ ಆಕಾರವನ್ನು ನೋಡಿದರೆ ನೀನು ವೀರಶ್ರೇಷ್ಠನಾದ ದೊರೆಯಂತೆ ಕಾಣುವಿಯಲ್ಲದೆ ನಪುಂಸಕನಲ್ಲವೆಂದು ತೋರುವುದು, ಎಂದುಹೇಳಿ ಆತನ ಗಾನವಿದ್ಯಾಪ್ರಾವೀಣ್ಯವನ್ನು ಪರೀಕ್ಷಿಸಿ ಕೊನೆಗೆ ಆತನನ್ನು ಕನ್ಯೆಯರಿಗೆ ಆಟವನ್ನು ಕಲಿಸಲು ನಿಯಮಿಸಿದನು. ಕೊನೆಗೆ ನಕುಲನು ಬಂದು ಅಶ್ವಶಿಕ್ಷಣೆಗೆ ನನ್ನನ್ನು ನಿಯಮಿಸಿಕೊಳ್ಳೆಂದು ವಿರಾಟನನ್ನು ಪ್ರಾರ್ಥಿಸಲು ಆ ದೊರೆಯು ಆತನನ್ನು ಅಶ್ವಶಾಲಾಧ್ಯಕ್ಷನನ್ನಾಗಿ ಗೊತ್ತುಮಾಡಿಕೊಂಡನು. ಹೀಗೆ ಪಾಂಡವರು ಹದಿಮೂರನೆಯ ಸಂವತ್ಸರದಲ್ಲಿ ತಾವು ಸೇವೆಮಾಡಬೇಕಾದ ಕಷ್ಟವನ್ನು ಹೊಂದಿದರಾದಾಗ್ಯೂ ಅತ್ಯಂತ ಸೌಖ್ಯದಿಂದ ಮತ್ತೊಬ್ಬರಿಗೆ ತಿಳಿಯದಿರುವಂತೆ ದಿನಗಳನ್ನು ಕಳೆಯುತ್ತಿದ್ದರು.

ಹೀಗೆ ಪಾಂಡವರೂ ದ್ರುಪದಸುತೆಯೂ ವಿರಾಟನ ಬಳಿಯಲ್ಲಿ ವಾಸಿಸುತ್ತಾ ಪ್ರೀತಿಯಿಂದಲೂ ಸಿರಿಯಿಂದಲೂ ಹತ್ತುತಿಂಗಳು ಕಳೆಯಲು ಇವರಿಗೆ ಒಂದು ಅಧಿಕವಾದಕಷ್ಟವು ಪ್ರಾಪ್ತವಾಯಿತು. ಸುದೇಷ್ಣೆಗೆ ಸಹೋದರನೂ ವಿರಾಟನಿಗೆ ಸೇನಾಪತಿಯೂ ಆದ ಕೀಚಕನು ದ್ರೌಪದಿಯನ್ನು ನೋಡಿ ಆಕೆಯ ಲಾವಣ್ಯಕ್ಕೆ ಸೋತಮನವುಳ್ಳವನಾಗಿ ಆ ಸುಂದರೀಮಣಿಯಮೇಲೆ ಆಶೆಪಟ್ಟು ನನಗೆ ರಾಣಿಯಾಗಿ ನನ್ನನ್ನು ಕಾಪಾಡೆಂದು ಆಕೆಯನ್ನು ಬೇಡಲು ಆ ಸ್ತ್ರೀಯು ಗಾಬರಿಯೊಂದಿ ಅವನನ್ನುಕುರಿತು ಹೀಗೆ ಹೇಳಿದಳು — ಹೀಗೆ ಕೋರುವುದು ನಿನಗೆ ತಕ್ಕುದಲ್ಲ. ನನ್ನ ಪತಿಗಳಾದ ಗಂಧರ್ವರು ನೀನು ನನ್ನಲ್ಲಿ ಪ್ರೀತಿಸಿರುವಿ ಎಂದು ತಿಳಿದಲ್ಲಿ ನಿನ್ನನ್ನು ನಾಶಮಾಡಿಯಾರು. ಎಂದು ಎಷ್ಟು ನಿವಾರಿಸಿದರೂ ಕೇಳದವನಾಗಿ ಕೀಚಕನು ಅಕ್ಕನನ್ನು ಕುರಿತು ನೀನು ಮಧುವನ್ನು ತರುವ ನೆಪದಿಂದ ಸೈರಂಧ್ರಿಯನ್ನು ನನ್ನ ಮನೆಗೆ ಕಳುಹಿಸೆಂದು ಗೊತ್ತು ಮಾಡಿದನು. ದ್ರೌಪದಿಯು ಆ ದೇವಿಯನ್ನು ಕುರಿತು ನನ್ನನ್ನು ನಿನ್ನ ತಮ್ಮನ ಮನೆಗೆ ಕಳುಹಿಸಬಹುದೇ? ಕೀಚಕನು ನನ್ನನ್ನು ಅವಮಾನಪಡಿಸಿದುದಾದರೆ ಕೇಡುಸಂಭವಿಸುವುದೆಂದು ಹೇಳಲು ಸುಧೇಷ್ಣೆಯು ತಮ್ಮನಿಗೆ ಪ್ರಿಯಮಾಡಲೋಸ್ಕರ ಸೈರಂಧ್ರಿಯನ್ನು ಕುರಿತು ಒದಲುಹೇಳದೆ ಹೋಗಿ ಮಧುವನ್ನು ತರುವುದೆಂದು ಅಪ್ಪಣೆಮಾಡಿದಳು. ದ್ರೌಪದಿಯು ಯತ್ನವಿಲ್ಲದೇ ಲೋಕಬಾಂಧವನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಹೊರಡಲು ಆ ದೇವನ ಅಪ್ಪಣೆಯಂತೆ ಒಬ್ಬ ರಾಕ್ಷಸನು ಆಕೆಯನ್ನು ಕಾಪಾಡುವುದಕ್ಕಾಗಿ ಆಕೆಗೆ ಕಾಣದಂತೆಯೇ ಸಂಗಡ ಹೋಗುತ್ತಿದ್ದನು. ಕೀಚಕನು ಆ ಮಾನಿನಿಯನ್ನು ನೋಡಿ ಮನಸ್ಸಿನಲ್ಲಿ ಸಂತೋಷವುಕ್ಕುತ್ತಿರಲು ಆಕೆಯನ್ನು ಕುರಿತು

ಕೊಳ್ಳುವುದೆಂದು ಹೇಳಲು ಆಕೆಯು ಅವನ ಮಾತುಗಳನ್ನು ಲೆಕ್ಕಿಸದೇ ನಾನು ರಾಣಿಗೆ ಮಧುವನ್ನು ತೆಗೆದುಕೊಂಡು ಹೋಗುವುದಕ್ಕಾಗಿ ಬಂದಿರುವೆನೇ ಹೊರತು ಬೇರೆಯಲ್ಲವೆಂದು ಆಕಡೆ ತಿರುಗಿನೋಡದೆಯೇ ಉತ್ತರಹೇಳಲು ಆ ನೀಚನು ಆ ವಾಮಲೋಚನೆಯಮೇಲೆ ಬಿದ್ದು ಕೈಯನ್ನು ಹಿಡಿದುಕೊಂಡನು. ದ್ರೌಪದಿಯು ಶಕ್ತಿಯಿಂದ ಅವನ ಕೈಯನ್ನು ಬಿಡಿಸಿಕೊಂಡು ತಪ್ಪಿಸಿಕೊಂಡು ಬೇಗಬೇಗನೆ ಹೊರಟು ಮನಸ್ಸಿನಲ್ಲಿ ಹೆಚ್ಚಾದಭಯವೂ ವ್ಯಾಕುಲವೂ ಉಂಟಾಗಲು ಧರ್ಮಜ ಭೀಮರೊಡನೆ ಸಭೆಯಲ್ಲಿದ್ದ ವಿರಾಟನ ಬಳಿಗೆ ಬಹಳ ಜಾಗ್ರತೆಯಿಂದ ಬಂದಳು. ಕೀಚಕನು ಆಕೆಯ ಹಿಂದೆಯೇ ಓಡಿಬಂದು ಆಕೆಯ ಮುಂದಲೆಯನ್ನು ಹಿಡಿದೆಳದು ಆ ದೊರೆಯು ನೋಡುತ್ತಿರುವಲ್ಲಿಯೇ ಹೊಡೆದು ನೆಲಕ್ಕೆಬೀಳಿಸಲು ಆ ರಾಕ್ಷಸನು ಅವನನ್ನು ಮೂರ್ಛಿತನಾಗುವಂತೆ ಹೊಡೆದುರುಳಿಸಿದನು. ಹೀಗೆ ತಮ್ಮ ಪ್ರಿಯಪತ್ನಿಗುಂಟಾದ ಭಂಗವನ್ನು ನೋಡಿ ಆಕೆಯ ಪತಿಗಳೇನುಮಾಡಬಲ್ಲರು? ಭೀಮನು ರೌದ್ರಾಕಾರನಾಗಿ ಕೆರಳಿ ಆ ದುರ್ಮದಾಂಧನಮೇಲೆ ಬೀಳಲೆದ್ದನಾದರೂ ಹಾಗೆಮಾಡಿದಲ್ಲಿ ಸಮಯಭಂಗವಾಗುವುದಾದುದರಿಂದ ಅದನ್ನು ತಿಳಿದು ಧರ್ಮಜನಿಂತೆಂದನು. ವಲಲಾ! ಅಡಿಗೆಯ ಸೌದೆಗಾಗಿ ಮರಗಳನ್ನು ನೋಡುವಿಯಾ? ಸೌದೆಯು ಬೇಕಾದಲ್ಲಿ ಬೇರೇಸ್ಥಳಗಳಿಗೆ ಹೋಗಿ ಮರಗಳನ್ನು ಮುರಿಯಬಾರದೇ? ಎಂದು ಆತನಿಗೆ ಸಮಯವನ್ನು ತಿಳಿಸಿದನು. ದ್ರೌಪದಿಯು ಸಮಯಭಂಗಮಾಡಲು ಭಯಪಡುತ ಕೋಪವನ್ನಡಗಿಸಿಕೊಂಡು ವಿರಾಟನನ್ನು ಕುರಿತು ನನ್ನನ್ನು ಕೀಚಕನು ಈ ರೀತಿ ಅವಮಾನಪಡಿಸಲು ನೀನು ಸುಮ್ಮನಿರುವುದು ಯೋಗ್ಯವೇ? ಎಂದು ಮೃದುವಚನಗಳಿಂದ ಹೇಳಲು ವಿರಾಟನು ಆಕೆಯಲ್ಲಿ ಕನಿಕರವುಳ್ಳವನಾಗಿ ಅವ್ವಾ! ಈ ಕಲಹವು ಬೇರೇಸ್ಥಳದಲ್ಲಿ ಹುಟ್ಟಿತಾದುದರಿಂದ ಇದರ ನಿಜಾಂಶವನ್ನು ನಾನು ತಿಳಿಯುವೆನೆಂದು ಆಕೆಯನ್ನು ಸಮಾಧಾನಮಾಡಿ ಕಳುಹಿಸಿದನು. ಆ ಸಭೆಯವರು ಆಕೆಯ ಸೊಬಗನ್ನು ಹೊಗಳುತಿರಲು ಧರ್ಮಜನು, ಕೀಚಕನು ಮಾಡಿದ ಭಂಗಕ್ಕಿಂತಲೂ ಆ ಮಾತುಗಳು ತನ್ನ ಮನಸ್ಸಿಗೆ ನೋವನ್ನೂ ಸಂಕಟವನ್ನೂ ಉಂಟುಮಾಡುತ್ತಿದ್ದರೂ ಮೇಲೆ ಶಾಂತಿಯನ್ನು ವಹಿಸಿದವನಾಗಿ ದ್ರೌಪದಿಗಿಂತು ಹೇಳಿದನು—ಸೈರಂಧ್ರೀ! ನೀನು ಇಲ್ಲಿ ಇರತಕ್ಕುದಲ್ಲ. ಸುದೇಷ್ಣಾದೇವಿ ಇರತಕ್ಕ ಸ್ಥಳಕ್ಕೆ ಹೋಗು. ಶೂರಪತ್ನಿಯರು ತಮ್ಮ ಪತಿಗಳಿಗಾಗಿ ತಾಳ್ಮೆಯನ್ನು ಹೊಂದಿ ಕಷ್ಟಗಳನ್ನನುಭವಿಸುತ್ತಾ

ಇಹಲೋಕದಲ್ಲಿ ಪತಿಗಳ ಮೇಲ್ಮೆಗಾಗಿ ಕಷ್ಟವನ್ನೂ ಅವಮಾನವನ್ನೂ ಸಹಿಸಿ ಪರಲೋಕದಲ್ಲಿ ತಮ್ಮ ಪತಿಗಳನ್ನೇ ಸೇರುವರು. ಸೂರ್ಯಸಮಾನತೇಜಸ್ಸುಳ್ಳ ನಿನ್ನ ಗಂಧರ್ವಪತಿಗಳು ನಿನ್ನನ್ನು ಕಾಪಾಡದೆ ಮರೆಯಲ್ಲಿರುವುದನ್ನು ನೋಡಿದರೆ ತಮ್ಮ ಕೋಪವನ್ನು ತೋರಿಸುವುದಕ್ಕೆ ಇದು ಉಚಿತಸಮಯವಲ್ಲವೆಂದು ಎಣಿಸಿದಾರೆಂದು ತೋರುವುದು. ಸೈರಂಧ್ರಿಯೇ, ನೀನು ಕಾಲೌಚಿತ್ಯವನ್ನು ತಿಳಿಯದೇ ನಾಟ್ಯಸ್ತ್ರೀಯಂತೆ ಪ್ರಲಾಪಿಸುತ್ತಿದ್ದಿ; ಮತ್ತು ಮತ್ಸ್ಯರಾಜನ ಸಭೆಯಲ್ಲಿ ಆಟವನ್ನು ಅಡ್ಡಿಮಾಡುತಿದ್ದಿ. ಆದುದರಿಂದ ಸೈರಂಧ್ರಿಯೇ ನೀನು ಅಂತಃಪುರಕ್ಕೆ ಹೋಗು. ಅವರು ಖಂಡಿತವಾಗಿಯೂ ನಿನ್ನ ವ್ಯಸನವನ್ನು ಹೋಗಲಾಡಿಸಿ ನಿನ್ನ ಇಷ್ಟವನ್ನು ನೆರವೇರಿಸುವರು. ನಿನಗವಮಾನ ಮಾಡಿದವನನ್ನು ನಾಶಮಾಡಿ ನಿನಗೆ ಸಂತೋಷವನ್ನು ವುಂಟುಮಾಡುವರು. ಎನ್ನಲು ದ್ರೌಪದಿಯು ಹೆಚ್ಚಾದ ಸಂತಾಪವನ್ನೂ ಕೋಪವನ್ನೂ ಮನಸ್ಸಿನಲ್ಲಿ ಹೊಂದಿದವಳಾಗಿ ಸಮಯವನ್ನು ನೋಡಿ ಹೆದರಿ ಇಂತು ಹೇಳಿದಳು—ನನ್ನನ್ನು ಧರ್ಮಪತ್ನಿಯನ್ನಾಗಿ ಮಾಡಿಕೊಂಡಿರುವ ನನ್ನ ಪತಿಗಳು ನನ್ನಲ್ಲಿ ಪ್ರೀತಿಯನ್ನು ತೋರಿಸತಕ್ಕವರೇ ಅಹುದು. ಅವರಲ್ಲಿ ಮೊದಲನೆಯಾತನು ಜೂದಾಳಿಯಾದುದರಿಂದ ಅವರೆಲ್ಲರೂ ಕಷ್ಟಗಳನ್ನು ಅನುಭವಿಸುವವರಾದರು. ಎಂದು ಹೇಳಿ ಆ ಸಭೆಯನ್ನು ಬಿಟ್ಟು ಹೊರಟು ಸುದೇಷ್ಣೆಯ ಅಂತಃಪುರಕ್ಕೆ ಹೋಗಿ ಆ ದೇವಿಯೊಡನೆ ತನಗುಂಟಾದ ಅವಮಾನಗಳನ್ನೆಲ್ಲಾ ತಿಳಿಯಪಡಿಸಿ ಆ ದಿನ ರಾತ್ರಿ ಭೀಮನಿದ್ದ ಸ್ಥಳಕ್ಕೆ ಹೋಗಿ ಆತನು ನಿದ್ರಿಸುತ್ತಿರಲು ಎಚ್ಚರಪಡಿಸಿ ಗೋಳೋ ಎಂದು ಅಳುತ್ತಾ ತನ್ನ ಮನಸ್ಸಿನ ವ್ಯಥೆಯನ್ನೆಲ್ಲಾ ಹೇಳಿ ಹೀಗೆಂದಳು—ಇಷ್ಟು ತೊಂದರೆಗಳಿಗೂ ಧರ್ಮಜನೇ ಮೂಲವು. ನರಪತಿಗಳಾದ ನನ್ನ ಪತಿಗಳು ನೀಚವಾದ ಕೆಲಸಗಳನ್ನು ಮಾಡುತ್ತಿರಲು ನಾನು ಹೇಗೆ ನೋಡಿ ಸಹಿಸಲಿ. ದೊಡ್ಡವಂಶದಲ್ಲಿ ಹುಟ್ಟಿ ರಾಣಿಯಾಗಿದ್ದ ನಾನು ಈಗ ದಾಸಿಯಾಗಿ ಮತ್ತೊಬ್ಬರಿಗೆ ಗಂಧವನ್ನರೆಯುತ್ತ ಪರಿಚರ್ಯ ಮಾಡುತಿದ್ದೇನಲ್ಲಾ. ಇಗೋ ನೋಡು ಕಲ್ಲುಪತ್ತಿನಲ್ಲಿ ಅರೆದು ನನ್ನ ಕೈಗಳೆಲ್ಲಾ ಕಾಯಿಕಟ್ಟಿಕೊಂಡವು. ಎಂದು ಆತನಿಗೆ ಕರುಣವುಂಟಾಗುವಂತೆ ತನ್ನ ಕೈಚಾಚಿ ತೋರಿಸಿದಳು. ಭೀಮನು ಆಕೆಯ ಕೈಯನ್ನು ತನ್ನ ಎರಡು ಕೈಗಳಿಂದಲೂ ಹಿಡಿದುಕೊಂಡು ತನ್ನ ಮುಖದಮೇಲಿಟ್ಟುಕೊಂಡು ತನ್ನ ಪತ್ನಿಗುಂಟಾದ ಕೇಡುಗಳಿಗಾಗಿ ಕೋಪಹೊಂದಿ ಕಣ್ಣೀರುಸುರಿಸುತ್ತಾ ಆ ಇಂದುವದನೆಯೊಡನಿಂತೆಂದನು. ನನ್ನ

ಪ್ರಿಯತಮೆಯೇ ವ್ಯಥೆಯನ್ನು ಸ್ವಲ್ಪ ಸಹಿಸಿಕೊಂಡಿರು. ನಿನ್ನನ್ನು ಹೀಗೆ ಕಷ್ಟಪಡಿಸಿದವನಿಗೆ ಪ್ರತಿಯನ್ನಾಚರಿಸಲು ಸಮಯಸರಿಯಾಗಿಲ್ಲದುದರಿಂದ ಮನಸ್ಸಿನಲ್ಲಿ ವ್ಯಥೆ ಪಡುತ್ತಿರುವೆನು. ಇನ್ನು ಹದಿನೈದು ದಿನಗಳು ಈ ರೀತಿ ನಡೆಸಿದೆಯಾದರೆ ಅನಂತರ ನೀನು ಸಾರ್ವಭೌಮರಾಣಿಯಾಗುವೆ ಎಂದು ಸಮಾಧಾನಮಾಡಲು ಕೃಷ್ಣೆಯು ನೆಲದಲ್ಲಿ ಬಿದ್ದು ವಿಶೇಷವಾಗಿ ದುಃಖಪಡುತ್ತಾ ನಿಟ್ಟುಸುರುಬಿಡುತ್ತಾ ಆತನೊಡನಿಂತೆಂದಳು—ನೀನು ಕೀಚಕನನ್ನು ಈಗಲೇ ನಾಶಪಡಿಸದಿರುವೆಯಾದರೆ ಆ ನೀಚನಿಂದ ನನ್ನ ಮಾನಹೋಗುವುದೇನೋ ನಿಶ್ಚಯವು. ಅನಂತರ ನಾನು ಪ್ರಾಣಗಳನ್ನು ಧರಿಸಲಾರೆನು, ನೀನು ಆ ನರಾಧಮನನ್ನು ಕೊಲ್ಲದಿರುವೆಯಾದರೆ ನಾನು ಬೇರೆಸ್ಥಳಕ್ಕಾದರೂ ಹೊರಟುಹೋಗಿ ನನ್ನ ಶರೀರವನ್ನು ರಕ್ಷಿಸಿಕೊಳ್ಳುವೆನು. ಎನ್ನಲು ಪವನಸುತನು ಆಕೆಯ ಮಾತಿಗೊಡಂಬಟ್ಟು ಹೀಗೆಂದನು——ನಾಳೆಯರಾತ್ರಿ ಆ ನೀಚನನ್ನು ಒಂದು ಶೂನ್ಯಾಗಾರಕ್ಕೆ ನಿನ್ನಲ್ಲಿಗೆ ಬರುವುದಾಗಿ ಸಂಕೇತಮಾಡಿದೆಯಾದರೆ ನಾನು ಅಲ್ಲಿಗೆ ಹೋಗಿ ಕ್ಷಣಮಾತ್ರದಲ್ಲಿ ಅವನನ್ನು ನಾಶಮಾಡುವೆನು ಎಂದು ಹೇಳಲು ಹಾಗೆಯೇ ಆಗಲೆಂದೊಪ್ಪಿ ಹೊರಟುಹೋಗಿ ಹಾಗೆಯೇ ನಡೆಯಿಸಿದಳು. ವಾಯುಸುತನು ದ್ರೌಪದಿಗೆ ಬದಲಾಗಿ ಸಂಕೇತಸ್ಥಳಕ್ಕೆ ತಾನು ಹೋಗಿ ಅವನ ಆಗಮನವನ್ನೇ ನಿರೀಕ್ಷಿಸುತ್ತಿದ್ದನು. ಅಷ್ಟರಲ್ಲಿ ಕೀಚಕನು ಮನಸ್ಸಿನಲ್ಲಿ ಅತ್ಯಂತ ಆನಂದ ಹೊಂದಿ ಜಾಗ್ರತೆಯಾಗಿ ಆ ಸ್ಥಳಕ್ಕೆ ಬಂದು ಬೆಡಗುಮಾತುಗಳನ್ನಾಡುತ್ತಾ ಭೀಮನಬಳಿಗೆ ಬರಲು ಇವನು ಕೀಚಕನಿಗೆ ಅಸನುರ್ಪಕವಾದ ಉತ್ತರಗಳನ್ನೇ ಹೇಳುತ್ತಾ ಜಾಗ್ರತೆ ಎದ್ದು ಅವನಮೇಲೆ ಬೀಳಲು ಆಗ ಅವರಿಬ್ಬರಿಗೂ ಮಲ್ಲಯುದ್ಧಪ್ರಾಪ್ತವಾಯಿತು. ಕೀಚಕನು ಮಹಾಬಲಶಾಲಿಯಾಗಿದ್ದು ಭೀಮನನ್ನು ಬಹಳವಾಗಿ ನೋಯಿಸಿದರೂ ಭೀಮನು ಅವನನ್ನು ತನ್ನ ಮುಷ್ಟಿಯಿಂದ ಹೊಡೆದು ಹೊಡೆದು ಕೊಂದು ಮುದ್ದೆಯಂತೆ ಮಾಡಿ ದ್ರೌಪದಿಯನ್ನು ಕರೆದು ನಿನಗವಮಾನಮಾಡಿದ ಈ ನೀಚಾತ್ಮನು ಹೇಗಾದನೋ ನೋಡೆಂದು ಹೇಳಿ ಹೊರಟುಹೋದನು. ಆ ತರುಣಿಯು ಅಲ್ಲಿಗೆ ಬಂದು ನೋಡಿ ಪೂರ್ವಾಲೋಚನೆಯಿಲ್ಲದೆ ಅಲ್ಲಿನ ಕಾವಲುಗಾರರನ್ನು ಕರೆದು ನನ್ನ ಪತಿಗಳಾದ ಗಂಧರ್ವರು ಕೀಚಕನನ್ನು ಕೊಂದರೆಂದು ಸಂತೋಷದಿಂದ ಹೇಳಲು, ಅವನ ಮರಣವಾರ್ತೆಯನ್ನು ತಿಳಿದು ಅವನ ಬಂಧುಗಳು ಬಂದು ಈಕೆಗಾಗಿ ಕೀಚಕನು ಮೃತನಾದನೆಂದು ಆ ಶವದೊಡನೆ ಈಕೆಯನ್ನೂ ಸುಟ್ಟುಬಿಡುವುದೆಂದು ಕಟ್ಟಿ

ತೆಗೆದುಕೊಂಡು ಹೋಗುತಿರಲು, ಆ ಭೀರುವು ಮಹಾಭಯಹೊಂದಿ ನನ್ನನ್ನು ಕಾಪಾಡಿ ಕಾಪಾಡಿ ಎಂದು ಗಟ್ಟಿಯಾಗಿ ರೋದಿಸುತ್ತಿದ್ದಳು. ಆ ಶಬ್ದವನ್ನು ಕೇಳಿ ಭೀಮನು ಪರರು ತಿಳಿಯದಿರುವಂತೆ ಪಟ್ಟಣವನ್ನು ಬಿಟ್ಟು ಹೊರಟು ಶ್ಮಶಾನದ ಬಳಿಗೆ ಹೋಗಿ ಒಂದು ಎತ್ತರವಾದ ಮರವನ್ನು ಕಿತ್ತುಕೊಂಡು ಅದರಿಂದ ಅವರೆಲ್ಲರನ್ನೂ ಯಮಪಟ್ಟಣಕ್ಕೆ ಕಳುಹಿಸಿ ದ್ರೌಪದಿಯನ್ನು ಬಿಡಿಸಿ ಕಳುಹಿಸಿದನು. ಇದೆಲ್ಲವನ್ನೂ ತಿಳಿದು ವಿರಾಟನು ಸೈರಂಧ್ರಿಯಿಂದ ಅನೇಕ ದುಃಖಗಳು ಪ್ರಾಪ್ತವಾದುವೆಂದು ತನ್ನ ರಾಣಿಯೊಡನೆ ಈ ಸೈರಂಧ್ರಿಯನ್ನು ಎಲ್ಲಿಗಾದರೂ ಕಳುಹಿಸಿಬಿಡೆಂದು ಅಪ್ಪಣೆಮಾಡಿದನು. ದ್ರೌಪದಿಯು ಇನ್ನು ಹದಿಮೂರುದಿನಗಳು ಮಾತ್ರ ನಾನಿಲ್ಲಿರುವೆನು; ಅದುವರೆಗೆ ನನ್ನನ್ನು ಇಲ್ಲಿರುವಂತೆ ಅನುಜ್ಞೆಮಾಡಿ, ಅನಂತರ ನಾನು ಎಲ್ಲಿಯಾದರೂ ಹೊರಟುಹೋಗುವೆನೆಂದು ಹೇಳಿ ಅವರ ಸಮ್ಮತಿಹೊಂದಿದಳು.

ಆ ಸಮಯದಲ್ಲಿ ದುರ್ಯೋಧನನ ಬೇಹಿನವರು ಪಾಂಡವರನ್ನು ಹುಡುಕಿ ಹುಡುಕಿ ಬೇಸರಹೊಂದಿ ಪಾಂಡವರನ್ನು ಕಾಣದೇ ಹಸ್ತಿನಾಪುರಕ್ಕೆ ಸೇರಿ ಆತನೊಡನೆ ‹ ನಾವು ಪಾಂಡವರನ್ನು ಎಲ್ಲಿಯೂ ಕಾಣಲಿಲ್ಲ; ಆದರೂ ವಿರಾಟನ ಸೇನಾಧಿಪತಿಯಾದ ಕೀಚಕನು ಹತನಾದನು; ಎಂದು ಹೇಳಿದರು. ಆಗ ಸುಶರ್ಮನೆಂಬರಾಜನು ದುರ್ಯೋಧನನನ್ನು ಕುರಿತು ನಾನು ಮತ್ಸ್ಯದೇಶದಮೇಲೆ ದಂಡೆತ್ತಿಹೊರಟು ವಿರಾಟನ ಪಶುಗಳನ್ನು ಹಿಡಿದುಕೊಳ್ಳುವೆನು; ಇದಕ್ಕೆ ನೀನು ಸಮ್ಮತಿಸಿ ಸಹಾಯಮಾಡಬೇಕೆನ್ನಲು ಆತನು ಒಪ್ಪಿ ಹಾಗೆಯೇಮಾಡಿದನು. ಪಾಂಡವರು ಅಜ್ಞಾತವಾಸಮಾಡುವ ಹದಿಮೂರನೆಯ ಸಂವತ್ಸರದ ಕಡೆಯಪಕ್ಷದ ಅಷ್ಟಮಿಯದಿನ ಕೌರವರು ವಿರಾಟನ ದೇಶದಮೇಲೆ ಸೈನ್ಯದೊಡನೆ ಹೊರಟರು. ಅದಕ್ಕೆ ಮೊದಲನೆಯದಿನ ಸುಶರ್ಮನು ತ್ರಿಗರ್ತಸೈನ್ಯದೊಡನೆ ತೆರಳಲು ವಿರಾಟನು ತನ್ನ ಸೈನ್ಯಗಳೊಡನೆ ಯುಧಿಷ್ಠಿರ ಭೀಮ ನಕುಲಸಹದೇವರುಗಳನ್ನು ಕರೆದುಕೊಂಡು ತ್ರಿಗರ್ತರೊಡನೆ ಯುದ್ಧಮಾಡುತ್ತಾ ಮಹಾಪರಾಕ್ರಮವನ್ನು ತೋರಿಸುತ್ತಿರಲು, ಸುಶರ್ಮನು ತನ್ನ ಪರಾಕ್ರಮದಿಂದ ವಿರಾಟನನ್ನು ಹಿಡಿದುಕೊಂಡು ಕಟ್ಟಿ ತನ್ನ ರಥದಮೇಲಿಟ್ಟುಕೊಂಡು ಹೊರಡುತ್ತಿದ್ದನು. ಅದನ್ನು ನೋಡಿ ಪಾಂಡವರು ಸುಶರ್ಮನಮೇಲೆ ಯುದ್ಧಮಾಡಿ ಅವನನ್ನು ಸೋಲಿಸಿದರು. ಭೀಮನು ಸುಶರ್ಮನನ್ನು ಹಿಡಿದು ಕಟ್ಟಿ ವಿರಾಟನನ್ನು ಬಿಟ್ಟುಕಳುಹಿಸಿದನು. ಅಷ್ಟರಲ್ಲಿ ಕೌರವರುಬಂದು ವಿರಾಟನ ಪಶುಗಳನ್ನು ಹಿಡಿದುಕೊಂಡು ಹೋ

ಗುತ್ತಿರಲು ಗೋಪಾಲಕರು ಊರಿಗೆ ಓಡಿಬಂದು ಶತ್ರುಗಳು ಪಶುಗಳನ್ನು ಹಿಡಿದು ಕೊಂಡು ಹೋಗುತ್ತಿರುವರು; ಬೇಗ ಕಾಪಾಡಿರೆಂದು ಕೂಗಿಟ್ಟರು. ಆ ಸಮಯದಲ್ಲಿ ಪಟ್ಟಣದಲ್ಲಿ ಉತ್ತರನೆಂಬ ಬಾಲಕನಹೊರತು ಇತರರು ಯಾರೂ ಇಲ್ಲದಿದ್ದುದರಿಂದ ಉತ್ತರನು ನನಗೆ ಸಾರಥಿಯಿದ್ದಿದ್ದರೆ ನಾನು ಅವರಮೇಲೆ ಯುದ್ಧಮಾಡಿ ಅವರನ್ನು ಓಡಿಸುತ್ತಿದ್ದೆನೆಂದು ಪೌರುಷವನ್ನು ಹೇಳಿಕೊಳ್ಳುತ್ತಿದ್ದನು.

ದ್ರೌಪತಿಯು ಆತನನ್ನುನೋಡಿ ಈ ಬೃಹನ್ನಳೆಯು ಪೂರ್ವದಲ್ಲಿ ಅರ್ಜುನನಿಗೆ ಸಾರಥಿಯಾಗಿದ್ದನು. ಆತನನ್ನು ನಿನ್ನ ಸಾರಥಿಯನ್ನಾಗಿ ಮಾಡಿಕೊಂಡು ಹೊರಡೆನ್ನಲು ಉತ್ತರನು ಹಾಗೆಯೇ ಮಾಡಿದನು. ಅರ್ಜುನನು ಕೌರವರ ಬಳಿಗೆ ಹೊರಟು ಹಗ್ಗಗಳನ್ನು ಕೈಯಲ್ಲಿಹಿಡಿದುಕೊಂಡು ಕುದುರೆಗಳನ್ನು ಶುತ್ರುಸೈನ್ಯದ ಕಡೆಗೆ ನುಗ್ಗಿಸಿದನು. ಉತ್ತರನು ಮನಸ್ಸಿನಲ್ಲಿ ತಲ್ಲಣಗೊಂಡು ರಥವನ್ನು ನಿಲ್ಲಿಸೆಂದು ಸಾರಥಿಯನ್ನು ಬೇಡಿಕೊಂಡನು. ಅರ್ಜುನನು ನಿಲ್ಲದೆ ಆ ಬಾಲಕನ ಮಾತನ್ನು ತಿರಸ್ಕರಿಸಿ ಹೋಗುತ್ತಿರಲು ಉತ್ತರನು ಬಹಳಭಯಹೊಂದಿ ಮನಸ್ಸಿನಲ್ಲಿ ಬಹಳ ಕಳವಳಪಟ್ಟು ಬಿಲ್ಲನ್ನು ಬಿಸಾಟು ರಥದಿಂದ ಭೂಮಿಯಮೇಲಕ್ಕೆ ಧುಮುಕಿ ಓಡಿಹೋಗುತ್ತಿದ್ದನು. ಅದನ್ನು ನೋಡಿ ಅರ್ಜುನನು ಅವನನ್ನು ದೂರುತ್ತಾ ಹಗ್ಗಗಳನ್ನುಕಟ್ಟಿ ಅವನ ಹಿಂದೆ ಓಡಿ ಜುಟ್ಟನ್ನು ಹಿಡಿದು ಅವನನ್ನು ನಿಲ್ಲಿಸಿ ನನಗೆ ಸಾರಥ್ಯವನ್ನುಮಾಡೆಂದು ಅವನನ್ನು ರಥಕ್ಕೆ ಹತ್ತಿಸಿ ಜಾಗ್ರತೆಯಾಗಿ ತರುಮಿಕೊಂಡು ತಮ್ಮ ಆಯುಧಗಳನ್ನಿಟ್ಟಿದ್ದ ಮರದಬಳಿಗೆ ಹೋಗಿ ಉತ್ತರನನ್ನು ಕುರಿತು ನಿನ್ನಬಿಲ್ಲುಗಳು ಬಹು ಲಘುವಾದವು. ನನ್ನ ಪರಾಕ್ರಮಕ್ಕೆ ತಕ್ಕಂತೆ ಇಲ್ಲ. ಈ ಮರವನ್ನು ಹತ್ತಿ ಇದರಲ್ಲಿರುವ ಅರ್ಜುನನ ಗಾಂಡೀವವನ್ನು ತೆಗೆದುಕೊಂಡು ಬಾ ಎಂದು ಹೇಳಲು ಉತ್ತರನು ಹಾಗೆಯೇ ಮಾಡಿದನು. ಧನಂಜಯನು ಆನಂದದಿಂದ ತನ್ನ ಬಿಲ್ಲನ್ನು ತೆಗೆದುಕೊಂಡು ಮಿಕ್ಕ ಆಯುಧಗಳ ಲಕ್ಷಣಗಳನ್ನು ಹೇಳುತ್ತಾ ಅವು ಯಾರವೆಂಬುದನ್ನು ಆತನಿಗೆ ತಿಳಿಯ ಹೇಳಿ ತಾನು ಅರ್ಜುನನೆಂಬ ಸಂಗತಿಯನ್ನು ತಿಳಿಸಿದನು. ಉತ್ತರನು ಬಹುವಾಗಿ ಸಂತೋಷಹೊಂದಿ ಭಯವನ್ನುಬಿಟ್ಟು ರಥಕ್ಕೆ ಕಟ್ಟಿದ್ದ ಹಗ್ಗಗಳನ್ನು ಕೈಯಲ್ಲಿ ಹಿಡಿದು ರಥವನ್ನು ನಡೆಯಿಸಲು ರಥಚಕ್ರಧ್ವನಿಯೂ ಗಾಂಡೀವಗುಣಧ್ವನಿಯೂ ಒಂದಾಗಿ ಕಿವಿಗಳನ್ನು ಕಿವುಡುಮಾಡುತ್ತಿರಲು ರಣರಂಗವನ್ನು ಪ್ರವೇಶಿಸಿದನು. ಹೀಗೆ ಪ್ರವೇಶಿಸಿದ ಭೀಭತ್ಸುವು ಮೊದಲುಕರ್ಣನನ್ನು ಇದುರಿಸಿ ಅವನ ಶರೀರವು

ಛಿದ್ರವಾಗಿ ರಕ್ತಸೋರುವಂತೆ ಮಾಡಿ ಓಡಿಸಿ ಅನಂತರ ಕೃಪಾಚಾರ್ಯನೊಡನೆ ಕಾದಿ ಆತನ ರಥವನ್ನು ನುಗ್ಗುನುಚ್ಚಾಗಿ ಮಾಡಲು ಆತನೂ ಹಿಂದಕ್ಕೆ ಓಡಿದನು. ದ್ರೋಣನು ಅರ್ಜುನನಮೇಲೆ ಬವರಕ್ಕೆಬರಲು ಅವನು ಸವಿನಯನಾಗಿ ಗುರುವಿನ ಪಾದಗಳಿಗೆ ಬಿಟ್ಟ ಬಾಣದ್ವಯದಿಂದ ಅತನನ್ನು ನಮಸ್ಕರಿಸಿ ನೀನು ಮೊದಲು ನನ್ನಮೇಲೆ ಬಾಣ ಪ್ರಯೋಗ ಮಾಡದಿರುವಿಯಾದರೆ ನಾನೇ ಮೊದಲು ನಿನ್ನನ್ನು ಹೊಡೆಯಲಾರೆನೆಂದು ವಿಜ್ಞಾಪಿಸಲು ಆಚಾರ್ಯನು ಅರ್ಜುನನ ಮೇಲೆ ಬಾಣವರ್ಷವನ್ನು ಕರೆಯಿಸಿದನು. ಬಳಿಕ ಆ ಗುರುಶಿಷ್ಯರಿಗೆ ಭಯಂಕರವಾದ ಸಂಗ್ರಾಮವು ಪ್ರಾಪ್ತವಾಗಲು ದ್ರೋಣನ ಸುತನು ತಂದೆಗೆ ಸಹಾಯ ಮಾಡುವುದಕ್ಕಾಗಿ ಬಂದನು. ಆಗ ದ್ರೋಣನು ಹಿಂದಿರುಗಿ ವೇಗವಾಗಿ ರಂಗವನ್ನು ಬಿಟ್ಟು ಓಡಿದನು. ಅಶ್ವತ್ಥಾಮನು ಸವ್ಯಸಾಚಿಯ ಬಾಣಪ್ರಯೋಗಕ್ಕೆ ಭಯಪಟ್ಟು ಬೆನ್ನುಕೊಟ್ಟು ಓಡಲು ರಾಧೇಯನು ಪುನಃ ಬಂದು ಅರ್ಜುನನೊಡನೆ ಯುದ್ಧಮಾಡಿ ಆತನ ಪೆಟ್ಟುಗಳನ್ನು ಸಹಿಸಲಾರದೇ ಓಡಿದನು. ಅನಂತರ ಕೌಂತೇಯನು ಬಹಳವಾಗಿ ಸಿಟ್ಟುಗೊಂಡು ದುಶ್ಶಾಸನನನ್ನೂ ಅವನ ತಮ್ಮಂದಿರನ್ನೂ ತರುಮಿಕೊಂಡು ಹೋಗಲು ಭೀಷ್ಮನು ಅಡ್ಡವಾಗಿ ಬಂದು ಆ ಶೂರರನ್ನು ನೋಡಿ ಯುದ್ಧಕ್ಕೆ ಅನುವಾಗಲು ಆ ಇಬ್ಬರಿಗೂ ಘೋರವಾದ ಯುದ್ಧವು ಪ್ರಾಪ್ತವಾಯಿತು. ಅದರಲ್ಲಿ ಪುರಂದರನಂದನನು ಅತ್ಯಂತ ರಭಸದಿಂದ ಭೀಷ್ಮನ ಕೈಯಾಡಗೊಡದೆ ಹೊಡೆಯುತ್ತಿರುವ ಬಾಣಗಳು ಆತನ ಎದೆಯಲ್ಲಿ ಹೊಗಲು ಆತನು ಮೂರ್ಛಿತನಾಗಿ ರಥದಲ್ಲಿ ಬೀಳಲು ಸಾರಥಿಯು ಅದನ್ನು ತಿಳಿದು ರಥವನ್ನು ದೂರವಾಗಿ ನಡೆಯಿಸಿಕೊಂಡು ಹೋದನು. ಕೂಡಲೇ ಅರ್ಜುನನು ದುರ್ಯೋಧನನನ್ನು ಓಡಿಸಿ ವಿಜಯವನ್ನು ಹೊಂದಲು ಕೌರವಸೈನ್ಯವು ಚದರಿ ನಾಲ್ಕು ದಿಕ್ಕುಗಳಲ್ಲಿಯೂ ಓಡುತ್ತಿರಲು ಕಿರೀಟಿಯು ಜಯಪತಾಕೆಯನ್ನು ಏರಿಸಿದನು.

ಅನಂತರ ಕಿರೀಟಿಯು ಪುನಃ ಶ್ಮಶಾನದ ಬಳಿಯ ವೃಕ್ಷದ ಸಮೀಪಕ್ಕೆ ಬಂದು ತನ್ನ ಆಯುಧಗಳನ್ನಲ್ಲಿಟ್ಟು ತಾನು ಎಂದಿನಂತೆ ಬೃಹನ್ನಳೆಯಾಗಿ ಉತ್ತರನ ಕೈಯಲ್ಲಿದ್ದ ಹಗ್ಗಗಳನ್ನು ತೆಗೆದುಕೊಂಡು ರಥವನ್ನು ನಡೆಯಿಸುತ್ತಿದ್ದನು. ಇಷ್ಟರಲ್ಲಿ ವಿರಾಟನು ತ್ರಿಗರ್ತರನ್ನು ಪರಾಙ್ಮುಖರನ್ನಾಗಿ ಮಾಡಿ ಪಟ್ಟಣಕ್ಕೆ ಹಿಂದಿರುಗಿ ಬಂದು ಪರಾಕ್ರಮಶಾಲಿಯಲ್ಲದ ತನ್ನ ಪುತ್ರನು ಬೃಹನ್ನಳೆಯ ಸಾರಥ್ಯದಿಂದ ಕುರು ಪುಂಗವರೊಡನೆ ಬೆರತು ಹೋರಲು ಉದ್ಯುಕ್ತನಾದನೆಂಬ ಸಂಗತಿಯನ್ನು ಕೇಳಿ ಬಹಳ

ವಾಗಿ ಭಯಪಟ್ಟು ಯೋಚಿಸುತ್ತಿರಲು ಯುಧಿಷ್ಠಿರನು ಅದನ್ನು ನೋಡಿ ನಗುತ್ತಾ ಬೃಹನ್ನಳೆಯಿರುವ ಕಾರಣದಿಂದ ನಿನ್ನ ಸುತನಿಗೆ ಏನೂ ತೊಂದರೆಯು ಸಂಭವಿಸುವುದಿಲ್ಲವೆಂದು ಹೇಳಿ ಸಮಾಧಾನ ಮಾಡಿದನು. ಆ ಸಮಯದಲ್ಲಿ ಉತ್ತರನು ಜಯ ಹೊಂದಿ ಕ್ಷೇಮದಿಂದ ಬರುತ್ತಿರುವನೆಂದು ಸಮಾಚಾರ ಬರಲು ಧರ್ಮಜನು ಪುನಃ ಆ ದೊರೆಯೊಡನೆ ಬೃಹನ್ನಳೆಯು ಸಾರಥ್ಯವನ್ನು ಮಾಡಲಾಗಿ ಎಂಥವರಿಗಾದರೂ ಜಯವುಂಟಾಗುವುದು ನಿಶ್ಚಯವೆಂದು ಹೇಳಿದನು. ಆಗ ವಿರಾಟನು ತನ್ನ ಕುಮಾರನ ಶೌರ್‍ಯವನ್ನು ಶ್ಲಾಘಿಸುತ್ತಿರಲು ಧರ್ಮಜನು ತಮ್ಮ ಸಮಾಚಾರವನ್ನು ತಿಳಿಯಪಡಿಸಲು ಸಕಾಲವೆಂದು ತಿಳಿದು ಮೊದಲಿನಂತೆಯೇ ಬೃಹನ್ನಳೆಯು ಸಾರಥಿಯಾಗಿರಲು ಉತ್ತರನು ಜಯಹೊಂದದಿರುವನೇ ? ಎಂದು ಹೇಳಿದನು. ಹೀಗೆ ಸಲಸಲಕ್ಕೂ ಸಾರಥಿಯನ್ನು ಸ್ತೋತ್ರಮಾಡುತ್ತಿರುವ ಕಂಕನ ವಿಷಯದಲ್ಲಿ ವಿರಾಟನು ಖತಿಗೊಂಡು ಕಣ್ಣುಗಳನ್ನು ಕೆಂಪಾಗಿ ಮಾಡಿಕೊಂಡು ಆತನನ್ನು ದುರದುರನೆ ನೋಡುತ್ತಾ ನೀನು ನನ್ನ ಕುಮಾರನನ್ನು ಒಬ್ಬ ನಪುಂಸಕನಿಗೆ ಸರಿಯೆಂದು ಎಣಿಸುವೆಯಾ? ಎಂದು ಕೇಳಲು ಧರ್ಮನಂದನನಿಂತೆಂದನು. ಭೀಷ್ಮದ್ರೋಣಕೃಪಾಶ್ವತ್ಥಾಮ ಕರ್ಣ ದುರ್ಯೋಧನಾದಿ ಯೋಧಾಗ್ರೇಸರರನ್ನು ಗೆಲ್ಲುವುದು ಬೃಹನ್ನಳೆಯನ್ನು ಬಿಟ್ಟರೆ ಮತ್ತೆ ಯಾರಿಗೆ ತಾನೇ ಸಾಧ್ಯವುಂಟು ? ಅಂತಹ ಪರಾಕ್ರಮಶಾಲಿಯು ಸಹಾಯಕನಾಗಿರುವಲ್ಲಿ ನಿನ್ನ ಕುಮಾರನು ಶತ್ರುಗಳನ್ನು ಗೆಲ್ಲುವುದಾಶ್ಚರ್ಯವೇ ? ಎನ್ನಲು ವಿರಾಟನು ಮಹಾ ಕ್ರೌರ್ಯದಿಂದ ಶಾರಿಕೆಯನ್ನು ತೆಗೆದುಕೊಂಡು ಯುಧಿಷ್ಠಿರನನ್ನು ಹೊಡೆಯಲು ಆತನ ಶರೀರದಲ್ಲಿ ರಕ್ತವು ಕಾಣಿಸಿತು. ಧರ್ಮಜನು ಆ ರುಧಿರವನ್ನು ಕೈಯಿಂದ ಹಿಡಿದು ಸಮೀಪದಲ್ಲಿದ್ದ ದ್ರೌಪದಿಯ ಕಡೆ ನೋಡಲು ಆಕೆಯು ಜಾಗ್ರತೆಯಾಗಿ ಹೊರಟು ಬಂಗಾರದ ಬಟ್ಟಲಿನಲ್ಲಿ ಜಲವನ್ನು ತೆಗೆದುಕೊಂಡು ಬಂದು ಆ ರಕ್ತವು ಭೂಮಿಯ ಮೇಲೆ ಬೀಳದಂತೆ ಒರಸುತ್ತಿದ್ದಳು. ಆ ಸಮಯದಲ್ಲಿ ಉತ್ತರನೂ ಬೃಹನ್ನಳೆಯೂ ಬಾಗಿಲಲ್ಲಿ ಬಂದಿರುವರೆಂದು ಫಣೀಹಾರಿಯು ತಿಳಿಯಪಡಿಸಲು ವಿರಾಟನು ಅವರನ್ನು ಕರೆದುಕೊಂಡು ಬರುವಂತೆ ಅಪ್ಪಣೆಮಾಡಲು ಧರ್ಮಜನು ಮೆಲ್ಲಗೆ ಆತನೊಡನಿಂತೆಂದನು. ಬೃಹನ್ನಳೆಯು ಇಲ್ಲಿ ಬಂದು ನನ್ನ ಶರೀರದ ರಕ್ತವನ್ನು ನೋಡಿದುದಾದರೆ ಈ ದೊರೆಗೆ ಏನಾದರೂ ಅಪಾಯವನ್ನುಂಟುಮಾಡಬಹುದು. ಆದುದರಿಂದ ಇನ್ನು ಸ್ವಲ್ಪಹೊತ್ತು ಇಲ್ಲಿಗೆ ಬೃಹನ್ನಳೆಯನ್ನು

ಬರಗೊಡಿಸಬೇಡವೆಂದು ಹೇಳಿ ಅವನನ್ನು ಕಳುಹಿಸಿದನು. ಈ ರೀತಿಯಲ್ಲಿ ಯುಧಿಷ್ಠಿರನು ಏಟುತಿಂದು ಬಾಧೆಪಡುತ್ತಿದ್ದಾಗ್ಯೂ ತಾಳ್ಮೆಯನ್ನು ಹೊಂದಿ ಶಾಂತಿಯಿಂದ ಪ್ರಕಾಶಿಸುತ್ತಿದ್ದನು.

ಅನಂತರ ಉತ್ತರನು ಬಂದು ಧರ್ಮತನಯನ ಶರೀರದಲ್ಲಿ ರಕ್ತವು ಸುರಿಯುತ್ತಿದ್ದುದನ್ನು ಕಂಡು ಅದರ ಕಾರಣವನ್ನು ತಿಳಿದು ತಂದೆಯನ್ನು ಕುರಿತು ಈ ಮಹಾತ್ಮನ ವಿಷಯದಲ್ಲಿ ನೀನು ತಪ್ಪುಮಾಡಿದೆ. ಮನ್ನಿಸುವಂತೆ ಆತನನ್ನು ಜಾಗ್ರತೆಯಲ್ಲಿ ಪ್ರಾರ್ಥಿಸು ಎನ್ನಲು ಆತನು ಹಾಗೆಯೇ ಮಾಡಿದನು. ಧರ್ಮಜನು ಆ ದೊರೆಯನ್ನು ನೋಡಿ ನನಗೆ ಕೋಪವಿಲ್ಲವೆಂದು ಹೇಳಿ ಆತನಲ್ಲಿ ಪ್ರಸನ್ನನಾಗಿದ್ದನು. ಅನಂತರ ರುಧಿರವು ಬೀಳುವುದು ನಿಂತಮೇಲೆ ಬೃಹನ್ನಳೆಯನ್ನು ಒಳಗೆ ಬರಮಾಡಿಕೊಳ್ಳಲಾಗಿ ಆತನು ಪ್ರವೇಶಿಸಿ ದೊರೆಯನ್ನೂ ಅಣ್ಣನನ್ನೂ ಮರ್ಯಾದೆ ಮಾಡಿ ಕಾರ್ಯಗಳನ್ನಾಲೋಚಿಸುತ್ತಾ ಸುಮ್ಮನೆ ನಿಂತಿದ್ದನು. ಮತ್ಸ್ಯನೃಪಾಲನು ಆ ಸಮಯದಲ್ಲಿ ತನ್ನ ಸುತನನ್ನು ನೋಡಿ ಅವನ ಶ್ರೇಷ್ಠವಾದ ವಿಜಯಕ್ಕೆ ಸಂತೋಷಪಡುತ್ತಾ ಅವನ ಶೌರ್ಯವನ್ನು ಹೊಗಳುತಿರಲು ಉತ್ತರನು ಆ ಮಾತುಗಳನ್ನು ಕೇಳಲಿಷ್ಟಪಡದೆ ತಂದೆಯನ್ನು ಕುರಿತು ಹೀಗೆಂದನು. ನಾನು ಯಾವುದನ್ನೂ ಮಾಡಿದವನಲ್ಲ. ದೇವಾಂಶಸಂಭವನಾದ ಒಬ್ಬ ಮಹಾವೀರನು ನನಗೆ ಸಹಾಯಕನಾಗಿ ಬಂದು ಒಬ್ಬನೇ ಯುದ್ಧಮಾಡಿ ಕುರುವೀರರನ್ನೆಲ್ಲಾ ಸೋಲಿಸಿ ಅದೃಶ್ಯನಾದನು. ಪುನಃ ಆತನು ನಮ್ಮಲ್ಲಿಗೆ ಬರುವನೆಂದು ತಿಳಿದಿರುವೆನೆಂದು ಹೇಳಿದನು.

ಹೀಗೆ ಹದಿಮೂರನೆಯ ವರ್ಷವು ಪೂರ್ತಿಯಾಗಿ ಕಳೆಯಲು ಮರುದಿನ ಉಷಃಕಾಲಕ್ಕೆ ಎದ್ದು ಪಾಂಡವರೈದುಮಂದಿಯೂ ರಾಜಯೋಗ್ಯವಾದ ಶುಭ್ರವಸ್ತ್ರಗಳನ್ನು ಧರಿಸಿ ವಿರಾಜಮಾನಗಳಾಗಿರುವ ಅನರ್ಘ್ಯಾಭರಣಗಳಿಂದ ಅಲಂಕೃತರಾಗಿ ವಿರಾಟನ ಸಭಾಮಂದಿರವನ್ನು ಪ್ರವೇಶಿಸಿ ಅಲ್ಲಿ ರಾಜರುಗಳು ಕೂಡ್ರುವ ಪೀಠಗಳಲ್ಲಿ ಕುಳಿತುಕೊಂಡರು. ಆ ರಾಜನು ಬಂದು ಅವರುಗಳು ಆ ರೀತಿಯಲ್ಲಿ ಸಿಂಹಾಸನದಲ್ಲಿ ಕುಳಿತಿರುವುದನ್ನು ನೋಡಿ ಬಹಳವಾಗಿ ಕೋಪಹೊಂದಿ, ಕಂಕಭಟ್ಟ! ಇದೇನನ್ಯಾಯವು ? ಎಂದು ಆತನ ಮೇಲೆ ಕೋಪಿಸಲು ಇಂದ್ರನಂದನನು ಪ್ರೀತಿಪೂರ್ವಕವಾಗಿ ಧರ್ಮನಂದನನ ಗುಣಗಳನ್ನೂ ಚರಿತ್ರೆಗಳನ್ನೂ ಹೊಗಳುತ್ತಾ ಈತನೇ ಆ ಕುರುವಂಶ ಶ್ರೇಷ್ಠನೂ ಸತ್ಯಪರಾಯಣನೂ ಆದ ಯುಧಿಷ್ಠಿರನೆಂದು ತಿಳಿಯಪಡಿಸಿದನು.

ಆ ಮಾತುಗಳನ್ನು ಕೇಳಿ ವಿರಾಟನು ವಿಸ್ಮಿತಚಿತ್ತನಾಗಿ ಈತನು ಯುಧಿಷ್ಠಿರನಾದಲ್ಲಿ ಮಹಾಪರಾಕ್ರಮಶಾಲಿಗಳಾದ ಈತನ ತಮ್ಮಂದಿರೂ ದ್ರೌಪದಿಯೂ ಎಲ್ಲಿರುವರೆಂದು ಕೇಳಲು ವಲಲನೇ ಭೀಮನೆಂತಲೂ ಅಶ್ವರಕ್ಷಕನು ನಕುಲನೆಂದೂ ಗೋರಕ್ಷಕನು ಸಹದೇವನೆಂದೂ ಸೈರಂಧ್ರಿಯೇ ದ್ರೌಪದಿಯೆಂತಲೂ ನಾನೇ ಅರ್ಜುನನೆಂತಲೂ ತಮ್ಮನ್ನು ತಿಳಿಯಪಡಿಸಿದನು. ವಿರಾಟನು ಪರಮಾನಂದಭರಿತನಾಗಿ ಹೆಚ್ಚಾದ ಮರ್ಯಾದೆಗಳಿಂದ ಪಾಂಡವರನ್ನು ಗೌರವಿಸಿ ಯುಧಿಷ್ಠಿರನಿಗೆ ತನ್ನ ರಾಜ್ಯವೆಲ್ಲವನ್ನೂ ಅರ್ಜುನನಿಗೆ ಸುಂದರೀಮಣಿಯಾದ ತನ್ನ ಪುತ್ರಿಯಾದ ಉತ್ತರೆಯನ್ನೂ ಒಪ್ಪಿಸಿರುವೆನೆನ್ನಲು ಅರ್ಜುನನಿಂತೆಂದನು. ನಿನ್ನ ಪುತ್ರಿಯು ನನ್ನನ್ನು ತಂದೆಯ ತೆರದಲ್ಲಿ ಸಂಭಾವಿಸುತ್ತಿದ್ದಳಾದುದರಿಂದ ನಾನು ಸ್ವೀಕರಿಸುವುದಿಲ್ಲ. ಆ ಕನ್ಯೆಯನ್ನು ನನ್ನ ಕುಮಾರನೂ ಶ್ರೀಕೃಷ್ಣನ ಸೋದರಳಿಯನೂ ಆದ ಅಭಿಮನ್ಯುವಿಗೆ ಪತ್ನಿಯನ್ನಾಗಿ ಮಾಡುವೆನೆಂದು ಹೇಳಲು ವಿರಾಟನು ಎಲ್ಲಾ ದೇಶದ ದೊರೆಗಳನ್ನೂ ಬರಮಾಡಿಕೊಂಡು ಶ್ರೀಕೃಷ್ಣನು ಸುಭದ್ರೆ ಅಭಿಮನ್ಯುಗಳೊಡನೆ ಅಲ್ಲಿಗೆ ಬರಲು ಲಲಿತವಾದ ರೂಪಲಾವಣ್ಯಗಳಿಂದೊಪ್ಪುವ ಉತ್ತರೆಯನ್ನು ಅಭಿಮನ್ಯುವಿಗೆ ಕೊಟ್ಟು ಅತ್ಯಂತ ಸಂಭ್ರಮದಿಂದಲೂ ಉತ್ಸಾಹದಿಂದಲೂ ಕೂಡಿ ಮದುವೆಮಾಡಿದನು. ಹೀಗೆ ಹದಿಮೂರನೆಯ ಸಂವತ್ಸರವು ಪರಿಣಯೋತ್ಸವವನ್ನು ಉಂಟುಮಾಡಿದುದಾಗಿ ಕೊನೆಮುಟ್ಟಿತು.

ವಿರಾಟಪರ್ವವಿಂತು ಮುಗಿದುದು

---

## ಆರನೆಯ ಅಧ್ಯಾಯ.

### ಸಂಧಿಯೋ ಯುದ್ಧವೋ.

### ಉದ್ಯೋಗ ಪರ್ವ.

ಪೂರ್ವಾಧ್ಯಾಯದ ಕೊನೆಯಲ್ಲಿ ಪಾಂಡವರು ಹದಿಮೂರು ಸಂವತ್ಸರಗಳು ರಾಜ್ಯಭ್ರಷ್ಟರಾಗಿ ತೊಂದರೆಗಳನ್ನನುಭವಿಸಿ ಅನಂತರ ನಡೆದ ವಿವಾಹ ಮಹೋತ್ಸವಗಳನ್ನು ತಿಳಿಸಿದೆವು. ಅವು ಪೂರ್ತಿಯಾಗಲು ಅವರಿಗೆ ರಾಜ್ಯವನ್ನು ಪುನಃ ಹೇಗೆ

ತೆಗೆದುಕೊಳ್ಳಬೇಕೆಂಬ ವಿಚಾರ ಹುಟ್ಟಿತು. ಹದಿಮೂರು ಸಂವತ್ಸರಗಳು ನಿಯಮ ತಪ್ಪದೇ ಕಳೆದಲ್ಲಿ ಅನಂತರ ಪಾಂಡವರ ರಾಜ್ಯವನ್ನು ಪುನಃ ಅವರಿಗೆ ಕೊಡಬೇಕೆಂದು ಗೊತ್ತುಮಾಡಿದ್ದ ಸಂಗತಿಯು ನಿಮಗೆ ತಿಳಿದೇ ಇರುವುದಷ್ಟೆ. ಪಾಂಡವರು ತಮಗೆ ಗೊತ್ತಾಗಿದ್ದ ಕಾಲವನ್ನು ಧೀರತನದಿಂದ ಕಳೆದರು. ದುರ್ಯೋಧನನು ತಾನು ಒಪ್ಪಿಕೊಂಡಿದ್ದಂತೆ ನಡೆಯಿಸುವನೋ ಎಂಬುದು ಮಹಾಭಾರತದಲ್ಲಿ ಇನ್ನುಮುಂದಿನ ಭಾಗವಾದ ಉದ್ಯೋಗಪರ್ವದಲ್ಲಿ ವಿವರಿಸಲ್ಪಡುತ್ತದೆಯಲ್ಲದೆ ಆ ಮಹಾಯುದ್ಧಕ್ಕೆ ಮೊದಲು ಜರುಗಿದ ವೃತ್ತಾಂತಗಳೂ ಇದರಲ್ಲಿ ತಿಳಿಸಲ್ಪಡುತ್ತವೆ. ಮದುವೆ ತೀರಿದ ಮರುದಿನ ಅಲ್ಲಿಗೆ ಬಂದಿದ್ದ ರಾಜರುಗಳೂ ರಾಜಕುಮಾರರೂ ದ್ರುಪದನೂ ವಿರಾಟನ ಸಭಾಮಂದಿರದಲ್ಲಿ ಸಭೆ ಸೇರಿದರು. ಅವರು ಸಾಮಾನ್ಯ ವಿಷಯಗಳನ್ನು ಕುರಿತು ಸ್ವಲ್ಪಹೊತ್ತು ಸಂಭಾಷಣೆಗಳನ್ನು ನಡೆಯಿಸಿದ ತರುವಾಯ ತಮ್ಮ ಹೃದಯದಲ್ಲಿ ಸಂಶಯವುಂಟಾಗಿರುವ ಈ ವಿಷಯವನ್ನು ಕುರಿತು ಸರ್ವಜ್ಞನೂ ಪಾಂಡವರಿಗೆ ಆಪ್ತನೂ ಆದ ಶ್ರೀಕೃಷ್ಣನೇ ಈ ವಿಷಯವನ್ನು ಚೆನ್ನಾಗಿ ವಿಮರ್ಶೆ ಮಾಡುವನೆಂದು ಎಲ್ಲರೂ ಆತನ ಕಡೆಯಲ್ಲಿ ದೃಷ್ಟಿಯನ್ನು ನಿಲ್ಲಿಸಿ ಸುಮ್ಮನೆ ನೋಡುತ್ತಿದ್ದರು. ಶ್ರೀಕೃಷ್ಣನು ಅವರೆಲ್ಲರನ್ನೂ ನೋಡಿ ಅಷ್ಟಕ್ಕೆ ಮೊದಲಾಗಿ ನಡೆದ ವೃತ್ತಾಂತಗಳನ್ನೂ ಪಾಂಡವರಿಗೆ ಬಾಲ್ಯಮೊದಲ್ಗೊಂಡು ದುರ್ಯೋಧನನು ಮಾಡಿದ ತೊಂದರೆಗಳನ್ನೂ ಸಂಕ್ಷೇಪವಾಗಿ ತಿಳಿಸಿ ಹೀಗೆ ಹೇಳಿದನು.—" ನೀವುಗಳು ನ್ಯಾಯವೂ ಉಚಿತವೂ ಆದ ತೆರದಲ್ಲಿ ಎಲ್ಲರಿಗೂ ಸಮ್ಮತವಾಗಿರುವಂತೆ ವಿಚಾರ ಮಾಡಿ ಎರಡು ಪಕ್ಷದವರಿಗೂ ಹಿತವಾಗಿರತಕ್ಕುದಕ್ಕೆ ಏನುಮಾಡಬೇಕೆಂದು ನಿರ್ಣಯಮಾಡಿರಿ. ದುರ್ಯೋಧನನು ಏನುಮಾಡಬೇಕೆಂದಿರುವನೋ ನಮಗೆ ಗೊತ್ತಿಲ್ಲವಾಗಿದೆ. ಆದುದರಿಂದ ಯುಧಿಷ್ಠಿರನಿಗೆ ರಾಜ್ಯದಲ್ಲಿ ಅರ್ಧಪಾಲನ್ನು ಕೊಡತಕ್ಕುದು ಉಚಿತವೆಂದು ಪ್ರಾರ್ಥಿಸುವುದಕ್ಕಾಗಿ ಆತನ ಬಳಿಗೆ ಒಬ್ಬ ದೂತನನ್ನು ಕಳುಹಿಸತಕ್ಕುದು ಕರ್ತವ್ಯವು." ಇದನ್ನು ಕೇಳಿ ಬಲರಾಮನು ಇದು ಸರಿಯೆಂದೊಪ್ಪಿ ಧರ್ಮನಂದನನು ಅರ್ಧರಾಜ್ಯವನ್ನು ಬಿಡಲೊಪ್ಪಿರುವ ಕಾರಣ ದುರ್ಯೋಧನನೂ ಹಾಗೆಯೇ ಮಾಡತಕ್ಕವನೆಂದು ಕೋರುವೆನು. ಅಲ್ಲದೆ ಜೂಜಾಡಿದ ತಪ್ಪನ್ನು ಯುಧಿಷ್ಠಿರನ ಮೇಲಿಟ್ಟು ಉಪಾಯದಿಂದ ಕಾರ್ಯವನ್ನು ನೆಟ್ಟಗೆ ಮಾಡಬೇಕೆಂದು ಬಲರಾಮನು ಹೇಳುತ್ತಿರುವಷ್ಟರಲ್ಲಿ ಆ ಮಾತುಗಳನ್ನು ಕೇಳಿ ಸಾತ್ಯಕಿಯು ಮಹಾ

ಕ್ರೌರ್ಯಹೊಂದಿ ಜಾಗ್ರತೆಯೆದ್ದು ಧರ್ಮನಂದನನಿಂದ ಸ್ವಲ್ಪವಾದರೂ ತಪ್ಪಿಲ್ಲ ವೆಂದೂ ಆತನು ಕ್ಷತ್ರಿಯಧರ್ಮವನ್ನೇ ಆಚರಿಸಿದನೆಂದೂ ಹೇಳಿ ಕ್ರೂರಬಾಣಗ ಳನ್ನು ಬಿಡುವುದರಿಂದ ಕೌರವರನ್ನು ಸಂಧಿಗೊಡಂಬಡಿಸಬೇಕೆಂಬುವುದೇ ನನ್ನಭಿಮತ ವೆಂದು ತಿಳಿಸಿದನು. ಆ ಮಾತುಗಳನ್ನು ಕೇಳಿ ದ್ರುಪದನು ಮೃದುವಾಗಿ ಮಾತನಾ ಡುತ್ತಾ ‹‹ ದುರ್ಯೋಧನನು ಮೂರ್ಖನಾದುದರಿಂದ ಸುತ್ತುಮುತ್ತಿನ ದೇಶದ ರಾಜರುಗಳಿಗೆಲ್ಲಾ ದೂತರನ್ನು ಕಳುಹಿಸಿ ಅವರ ಸ್ನೇಹವನ್ನು ಮಾಡಬೇಕಾದುದು ಯುಕ್ತ. ಧರ್ಮಾತ್ಮರಾದವರು ಮೊದಲು ಮೊದಲು ತಮ್ಮಲ್ಲಿಗೆ ಯಾರು ಬರು ವರೋ ಅಂತಹವರ ಪ್ರಾರ್ಥನೆಯನ್ನೇ ಅಂಗೀಕರಿಸುವರು. ಆದುದರಿಂದ ಸಾವಕಾಶ ಮಾಡದೇ ಮೊದಲು ಈ ಕೆಲಸವನ್ನು ನೆರವೇರಿಸಬೇಕು ’’ ಎಂದನು. ಇಷ್ಟರಲ್ಲಿ ಧೃತರಾಷ್ಟ್ರನ ಬಳಿಗೆ ಒಬ್ಬ ಪುರೋಹಿತನನ್ನು ದೂತನನ್ನಾಗಿ ಕಳುಹಿಸುವ ಎಂದು ಎಲ್ಲರೂ ಮಾತನಾಡಿಕೊಳ್ಳಲು ವಾಸುದೇವನು ಹಾಗೆ ನಡೆಯಿಸುವುದು ಯುಕ್ತ ವೆಂದು ಹೇಳಿ ದ್ವಾರಕಿಗೆ ತೆರಳಿದನು. ದ್ರುಪದನು ತನ್ನ ಪುರೋಹಿತನನ್ನು ಕುರು ರಾಜನ ಬಳಿಗೆ ಕಳುಹಿಸಿದನು. ನಾಲ್ಕುದಿಕ್ಕುಗಳಿಂದಲೂ ಯೋಧಾಗ್ರೇಸರರು ಪಾಂಡವರಿಗೂ ಕೌರವರಿಗೂ ಸಹಾಯಮಾಡುವ ಉದ್ದೇಶದಿಂದ ಬಂದು ಸೇರು ತ್ತಿದ್ದರು.

ಅನಂತರ ದುರ್ಯೋಧನನೂ ಕಿರೀಟಿಯೂ ಮಹಾನುಭಾವನಾದ ಶ್ರೀಕೃಷ್ಣನ ಸಹಾಯವನ್ನು ಕೋರಿ ದ್ವಾರಕಿಗೆ ಹೋಗಲೆತ್ನಿಸಿ ಅವರಿಬ್ಬರೂ ಒಂದೇದಿನ ಬಂದು ವಾಸುದೇವನು ನಿದ್ರಿಸುತ್ತಿರುವುದನ್ನು ನೋಡಿ ದುರ್ಯೋಧನನು ಔದ್ಧ ತ್ಯದಿಂದ ಆತನ ತಲೆಯ ಬಳಿ ಇದ್ದ ಉನ್ನತಾಸನದಲ್ಲಿ ಕುಳಿತನು. ಅರ್ಜುನನು ಆ ಸ್ವಾಮಿಗೆ ಅತಿಭಕ್ತಿಯಿಂದ ಪ್ರಣಾಮವನ್ನು ಮಾಡಿ ಆತನ ಚರಣಗಳ ಬಳಿ ಕೈಗ ಳನ್ನು ಜೋಡಿಸಿಕೊಂಡು ನಿಂತಿದ್ದನು. ಅಷ್ಟರಲ್ಲಿ ಶ್ರೀಕೃಷ್ಣನು ಎಚ್ಚರಗೊಂಡು ಮೊದಲು ಸವ್ಯಸಾಚಿಯನ್ನು ನೋಡಿ ಅನಂತರ ದುರ್ಯೋಧನನನ್ನು ನೋಡಿ ಅವರು ಗಳನ್ನು ತಕ್ಕ ಮರ್ಯಾದೆಯಿಂದ ಸಂಭಾಷಿಸಿ ನೀವುಗಳು ಬಂದ ಕಾರ್ಯವೇನೆಂದು ಕೇಳಲು ಮೊದಲು ದುರ್ಯೋಧನನು ‹ನಮಗೂ ಪಾಂಡವರಿಗೂ ಯುದ್ಧವು ಪ್ರಾಪ್ತ ವಾಗುವುದು. ಅದರಲ್ಲಿ ನೀನು ನನಗೆ ಸಹಾಯ ಮಾಡಬೇಕು. ನಾನು ಮೊದಲು ನಿನ್ನನ್ನು ಪ್ರಾರ್ಥಿಸಿರುವೆನಾದುದರಿಂದ ನನ್ನ ಮಾತನ್ನು ತಪ್ಪದೇ ನಡೆಯಿಸಬೇಕು’

ಎಂದು ಕೇಳಿದನು. ಅದನ್ನು ಕೇಳಿ ಶ್ರೀಕೃಷ್ಣನು "ನೀನು ಮೊದಲು ಬಂದು ದೇನೋ ನಿಶ್ಚಯ. ಆದರೂ ನಾನು ಎಚ್ಚರಗೊಂಡಾಗ ಮೊದಲು ಅರ್ಜುನನನ್ನು ನೋಡಿದೆನು. ಆದುದರಿಂದ ನಾನು ನಿಮ್ಮಿಬ್ಬರಿಗೂ ಸಹಾಯಮಾಡಬೇಕು. ಪರಾಕ್ರಮಶಾಲಿಗಳಾದ ಹತ್ತುಕೋಟಿಮಂದಿ ವೀರಭಟರು ನನ್ನಲ್ಲಿರುವರು. ಅವರುಗಳನ್ನು ನಿಮ್ಮಲ್ಲೊಬ್ಬರಿಗೆ ಕೊಡುವೆನು. ನಾನು ನಿರಾಯುಧನಾಗಿ ಯುದ್ಧಮಾಡದೇ ಸುಮ್ಮನಿರತಕ್ಕವನು. ನನ್ನನ್ನೊಬ್ಬರು ಸಹಾಯಕ್ಕೆ ತೆಗೆದುಕೊಳ್ಳಬಹುದು. ಅರ್ಜುನನು ಕಿರಿಯವನಾದುದರಿಂದ ಮೊದಲು ಅವನು ಕೋರಬೇಕು" ಎಂದು ನರನನ್ನು ನೋಡಿ ನೀನು ಮೊದಲು ನಾನು ಹೇಳಿದ ಎರಡರ ಪೈಕಿ ನಿನಗಿಷ್ಟವಾದುದನ್ನು ಕೇಳಿಕೊಳ್ಳೆಂದನು. ಧನಂಜಯನು ತನಗೆ ಜಗತ್ತೆಲ್ಲಕ್ಕಿಂತಲೂ ಕೃಷ್ಣನ ಮೇಲೆ ಹೆಚ್ಚುಪ್ರೀತಿ ಇದ್ದುದರಿಂದ ಸ್ವಲ್ಪವೂ ಯೋಚಿಸದೇ ಕೃಷ್ಣನನ್ನೇ ಕೋರಿದನು. ಅದಕ್ಕೆ ದುರ್ಯೋಧನನು ಮನಸ್ಸಿನಲ್ಲಿ ಅತ್ಯಾನಂದ ಹೊಂದಿದವನಾಗಿ ಅವನ ಸೈನ್ಯವನ್ನು ಕೇಳಿಕೊಂಡನು.

ಬಲರಾಮನು ತಾನು ಎರಡು ಪಕ್ಷದವರಿಗೂ ಸಹಾಯಮಾಡುವುದಿಲ್ಲವೆಂದು ಹೇಳಲು ದುರ್ಯೋಧನನು ಸಂತುಷ್ಟನಾಗಿ ಯುದ್ಧಮಾಡದೇ ಸುಮ್ಮನಿರುವ ಕೃಷ್ಣನಿಗಿಂತಲೂ ಯುದ್ಧದಲ್ಲಿ ಹೋರಾಡುವ ಸೈನ್ಯಗಳು ತನಗೆ ಸಿಕ್ಕಿದುದಕ್ಕಾಗಿ ಉಬ್ಬಿ ತನ್ನ ಪಟ್ಟಣಕ್ಕೆ ತೆರಳಿದನು. ಅನಂತರ ಶ್ರೀಕೃಷ್ಣನು ಕಿರೀಟಿಯನ್ನು ನೋಡಿ ಯುದ್ಧಮಾಡಲೊಲ್ಲದ ನನ್ನನ್ನು ಏತಕ್ಕೆ ನೀನು ಅಪೇಕ್ಷಿಸಿದೆ ಎಂದು ಕೇಳಲು, ಆತನು "ನಾನೊಬ್ಬನೇ ಶತ್ರುಗಳನ್ನು ಗೆಲ್ಲಲು ಸಮರ್ಥನಾಗಿರುವೆನು. ಆದರೂ ನಾನು ಅನಿಶವೂ ಕೀರ್ತಿಯನ್ನಪೇಕ್ಷಿಸುವೆನು. ಅದು ನೀನೆಲ್ಲಿದ್ದರೆ ಅಲ್ಲಿ ನಿಲ್ಲುವುದು. ಅದೂ ಅಲ್ಲದೆ ಯುದ್ಧದಲ್ಲಿ ನೀನು ನನ್ನ ರಥವನ್ನು ನಡೆಯಿಸಬೇಕೆಂದು ನಾನು ಅನೇಕ ದಿನಗಳಿಂದ ಆಶಿಸುತ್ತಿರುವೆನು. ನನ್ನ ಕೋರಿಕೆಯನ್ನು ನೆರವೇರಿಸಲು ನಿನ್ನನ್ನು ಪ್ರಾರ್ಥಿಸುತ್ತಿರುವೆನು" ಎಂದು ನುಡಿದನು. ಶ್ರೀಕೃಷ್ಣನು ಸಂತೋಷದಿಂದ ನಾನು ನಿನಗೆ ಸಾರಥಿಯಾಗಿ ನಿನ್ನ ಇಷ್ಟವನ್ನು ನೆರವೇರಿಸುವೆನೆನ್ನಲು ಕೌಂತೇಯನು ಮನಸ್ಸಿನಲ್ಲಿ ವಿಶೇಷವಾಗಿ ಸಂತೋಷಪಟ್ಟು ಕೃಷ್ಣ ಮತ್ತು ದಾಶಾರ್ಹವಂಶದ ವೀರಶ್ರೇಷ್ಠರಿಂದ ಕೂಡಿದವನಾಗಿ ಧರ್ಮರಾಯನ ಬಳಿಗೆ ಬಂದನು. ಕೃಷ್ಣನು ಯಾವ ಪಕ್ಷದಲ್ಲಿದ್ದರೆ ಆ ಪಕ್ಷಕ್ಕೆ ಜಯವು ಸಿದ್ಧವಾದುದರಿಂದ ಅರ್ಜುನನು ಆನಂದ ಹೊಂದುವುದೇನಾಶ್ಚರ್ಯ.

ಅನಂತರ ದುರ್ಯೋಧನನು ಉಪಾಯದಿಂದ ಶತ್ರುವಿನ ಮೇಲೆ ಒಂದು ಜಯವನ್ನು ಹೊಂದಿದನು. ಅದು ಹೇಗೆಂದರೆ:—ಮದ್ರದೇಶಾಧಿಪತಿಯಾದ ಶಲ್ಯನು ಪಾಂಡವರಿದ್ದ ಸ್ಥಳಕ್ಕೆ ಹೋಗುತ್ತಿರುವುದನ್ನು ತಿಳಿದು ದುರ್ಯೋಧನನು ಆತನು ಬರುವ ಮಾರ್ಗದಲ್ಲಿ ಉತ್ತಮವಾದ ಬಿಡಾರಗಳನ್ನು ಕಟ್ಟಿಸಿ ಅಲ್ಲಿ ಬೇಕಾದ ಸಾಮಗ್ರಿಗಳನ್ನೊದಗಿಸಿ ಆತನ ಮನಸ್ಸಿಗೆ ಸಂತೋಷವುಂಟಾಗುವಂತೆ ಅವನಿಗೂ ಅವನ ಪರಿವಾರಕ್ಕೂ ಊಟಉಪಚಾರಗಳನ್ನು ಮಾಡಿಸಿದನು. ಶಲ್ಯನು ಅದಕ್ಕೆ ಸಂತುಷ್ಟನಾಗಿ ಇದೆಲ್ಲವೂ ಕೌರವರ ಏರ್ಪಾಡೆಂಬುದು ಗೊತ್ತಿಲ್ಲದೇ ನಮಗೆ ಇಷ್ಟು ಸತ್ಕಾರಗಳನ್ನು ಮಾಡಿರತಕ್ಕವರಾರೋ ಅವರ ಇಷ್ಟಾರ್ಥಗಳನ್ನು ಸಲ್ಲಿಸುತ್ತೇನೆ ಎಂದು ಹೇಳಿದುದನ್ನು ಮರೆಯಲ್ಲಿದ್ದ ದುರ್ಯೋಧನನು ಕೇಳಿಸಿಕೊಂಡಿದ್ದು ಎದುರಿಗೆ ಬಂದುನಿಂತು, “ ಇದೆಲ್ಲವನ್ನೂ ಏರ್ಪಡಿಸಿದ್ದು ನಾನೇ. ನನಗೆ ಬೇಕಾದ ವರವು ನೀನು ನಮ್ಮ ಸೈನ್ಯಕ್ಕೆ ಅಧಿಪತಿಯಾಗಿದ್ದು ನಮ್ಮ ಕಡೆ ಯುದ್ಧಮಾಬೇಕೆಂಬುದೇ ” ಎಂದು ಕೋರಿದನು. ಶಲ್ಯನು ಹೀಗೆ ಮೋಸಹೋಗಿ ಅದಕ್ಕೆ ಒಪ್ಪಬೇಕಾಗಿ ಬಂದು ವ್ಯಸನದಿಂದ ಪಾಂಡವರ ಬಳಿಗೆ ಹೋಗಿ ಆ ವೃತ್ತಾಂತವೆಲ್ಲವನ್ನೂ ತಿಳಿಸಿ ದುರ್ಯೋಧನನಿಗೆ ಮಾತುಕೊಟ್ಟ ಸಂದರ್ಭವನ್ನೂ ತಿಳಿಯಪಡಿಸಲು ಧರ್ಮರಾಯನು ಅವನನ್ನು ಕುರಿತು—“ ನೀನು ಮಾಡಿದುದು ಧರ್ಮವೇ ಸರಿ. ಆದರೂ ನಿನ್ನನ್ನು ಕುರಿತು ಒಂದು ಪ್ರಾರ್ಥನೆಯುಂಟು. ನೀನು ಕೃಷ್ಣನಿಗೆ ಸಮನಾಗಿ ಸಾರಥ್ಯಮಾಡಲು ಶಕ್ತನು. ಆದುದರಿಂದ ನೀನು ಕರ್ಣನಿಗೆ ಸಾರಥ್ಯಮಾಡಬೇಕೆಂದು ದುರ್ಯೋಧನನು ನಿನ್ನನ್ನು ಪ್ರಾರ್ಥಿಸುವನು. ಹಾಗೆ ನೀನು ಸಾರಥ್ಯಮಾಡುವ ಪಕ್ಷದಲ್ಲಿ ಅರ್ಜುನನನ್ನು ಹೊಗಳುತ್ತಾ ಕರ್ಣನನ್ನು ಹೀಯಾಳಿಸಿ ಆತನ ಉತ್ಸಾಹವನ್ನು ಭಂಗಪಡಿಸಿದರೆ ನಮಗೆ ಸಹಾಯವಾಗುವುದು. ಆ ರೀತಿ ನೀನು ನಡೆಸಬೇಕೆಂದು ನಾವು ಬೇಡುವೆವು ” ಎಂದು ಹೇಳಲು ಶಲ್ಯನು ಹಾಗೆಯೆ ಆಗಲೆಂದೊಪ್ಪಿ ತನ್ನ ಸೈನ್ಯದೊಡನೆ ದುರ್ಯೋಧನನ ಸಮೀಪವನ್ನು ಸೇರಿದನು.

ಆ ಸಮಯದಲ್ಲಿ ನಾಲ್ಕುದಿಕ್ಕುಗಳಿಂದಲೂ ಸೈನ್ಯಗಳು ಉಭಯಪಕ್ಷಗಳಿಗೂ ಬರುತ್ತಿದ್ದುವು. ಧರ್ಮನಂದನನ ಕಡೆ ಏಳಕ್ಷೋಹಿಣಿ ಸೈನ್ಯವೂ ದುರ್ಯೋಧನನ ಕಡೆ ಹನ್ನೊಂದು ಅಕ್ಷೋಹಿಣಿಯೂ ಸೇರಿತು. ದ್ರುಪದನ ಪುರೋಹಿತನು ಹಸ್ತಿನಾಪುರವನ್ನು ಸೇರಿ ಧೃತರಾಷ್ಟ್ರನ ಸಭೆಯಲ್ಲಿ ಪಾಂಡವರ ಪಕ್ಷವಾಗಿ ಬಂದಿರುವೆನೆಂದು

ತಿಳಿಸಿ ಹೀಗೆಂದನು:– ‹‹ಅವರ ಪಿತ್ರಾರ್ಜಿತವಾದ ಧನವನ್ನು ಧಾರ್ತರಾಷ್ಟ್ರರು ತೆಗೆದುಕೊಂಡಿರುವುದಲ್ಲದೆ ತಾವಾಗಿ ಸಂಪಾದಿಸಿಕೊಂಡಿದ್ದ ಪಾಂಡವರ ರಾಜ್ಯವನ್ನೂ ಸಹ ಮೋಸಪಡಿಸಿ ಈ ಸುಯೋಧನಾದಿಗಳು ತೆಗೆದುಕೊಂಡಿರುವರು. ಈಗಲಾದರೂ ಮೊದಲೊಡಂಬಟ್ಟ ಕ್ರಮದಲ್ಲಿ ಭಾಗವನ್ನು ಕೊಟ್ಟು ಅವರ ರಾಜ್ಯವನ್ನು ಅವರಿಗೆ ಕೊಟ್ಟಲ್ಲಿ ಮೇಲುಂಟಾಗುವುದು. ಹಾಗಲ್ಲದಿದ್ದರೆ ಪ್ರಜಾಸಂಕ್ಷಯಕರವಾದ ಯುದ್ಧವು ಪ್ರಾಪ್ತವಾಗುವುದರಲ್ಲಿ ಸಂಶಯವಿಲ್ಲ.'' ಹೀಗೆ ಹೇಳಿದ ಮಾತುಗಳನ್ನು ಭೀಷ್ಮನು ಕೇಳಿ ಆ ಬ್ರಾಹ್ಮಣನ ಮಾತುಗಳು ಸಹಜವಾದುದೆಂದು ಹೇಳತೊಡಗಲು ರಾಧೇಯನು ಗಾಂಗೇಯನನ್ನು ತಿರಸ್ಕರಿಸಿ ಹೇಳುತ್ತಾ ಅವರಿಬ್ಬರೂ ಮಾತ್ಸರ್ಯದಿಂದ ಚರ್ಚೆಮಾಡುತ್ತಿದ್ದರು. ಆಗ ಧೃತರಾಷ್ಟ್ರನು ಆ ಮಾತಿಗೆ ಅಡ್ಡಬಂದು ಆ ಪುರೋಹಿತನನ್ನು ಗೌರವಿಸಿ ಹೀಗೆ ಹೇಳಿ ಕಳುಹಿಸಿಕೊಟ್ಟನು:—‹‹ ನೀನು ಈಗ ಹೊರಡು. ನಾನು ಯುಕ್ತವಾದ ಕಾರ್ಯವನ್ನು ಚೆನ್ನಾಗಿ ವಿಚಾರಮಾಡಿ ನಿಷ್ಕರ್ಷಿಸಿ ಪಾಂಡವರ ಬಳಿಗೆ ಸಂಜಯನನ್ನು ಕಳುಹಿಸುವೆನು.'' ಅನಂತರ ಧೃತರಾಷ್ಟ್ರನು ಸಂಜಯನನ್ನು ಕರೆದು ನೀನು ಕಷ್ಟಪಟ್ಟಿರುವ ಪಾಂಡವರ ಬಳಿಗೆ ಹೋಗಿ ಅವರಿಗೆ ಉಪಚರಿಸಿ ಯುಕ್ತವಾದ ಮೃದುವಚನಗಳನ್ನು ಹೇಳಿ ಅವರ ಶೌರ್ಯವನ್ನು ಕಡಿಮೆಮಾಡಿಬರುವುದೆಂದು ಹೇಳಿದನೇ ವಿನಾ ಅವರ ರಾಜ್ಯವನ್ನು ಅವರಿಗೆ ಕೊಡುವ ವಿಷಯದಲ್ಲಿ ಯಾವ ಉತ್ತರವನ್ನೂ ಹೇಳಲಿಲ್ಲ. ಸಂಜಯನು ಹೊರಟು ಪಾಂಡವರನ್ನು ನೋಡಿ ಧೃತರಾಷ್ಟ್ರನು ಹೇಳಿದ ಮಾತುಗಳನ್ನೆಲ್ಲಾ ಹೇಳಿ ಶಾಂತರಾಗಿರುವುದು ಸೌಖ್ಯವೆಂದು ಸಾಮಾನ್ಯವಾಗಿ ತಿಳಿಯಪಡಿಸಿದನು. ಆ ಮಾತುಗಳನ್ನು ಕೇಳಿ ಧರ್ಮರಾಯನು ದೈನ್ಯವನ್ನು ತೊರೆದು ಧೈರ್ಯದಿಂದ ‹‹ನಾವು ಯುದ್ಧಮಾಡಬೇಕೆಂದು ಅಪೇಕ್ಷಿಸಿಲ್ಲ. ಆ ದೊರೆಯೂ ಆತನ ಪುತ್ರರೂ ನಮಗೆ ಸಲ್ಲತಕ್ಕ ಅರ್ಧರಾಜ್ಯವನ್ನು ಕೊಡದಿರುವುದರಿಂದ ನಮ್ಮನ್ನು ಯುದ್ಧಕ್ಕೆ ಬಲಾತ್ಕರಿಸುತ್ತಿರುವರು. ಇಂದ್ರಪ್ರಸ್ಥವನ್ನು ಪುನಃ ನಮಗೆ ಕೊಡಿಸುವವನಾಗು'' ಎಂದು ಹೇಳಿದನು. ಸಂಜಯನು ಯುದ್ಧಮಾಡಿ ರಾಜ್ಯಸುಖವನ್ನನುಭವಿಸುವುದಕ್ಕಿಂತಲೂ ನಿಮ್ಮಂತಹವರಿಗೆ ಭಿಕ್ಷಮಾಡಿ ಬದುಕುವಿಕೆಯೇ ಯೋಗ್ಯವಾದುದೆಂದು ಹೇಳಿದನು. ಧರ್ಮನಂದನನು ಶ್ರೀ ಕೃಷ್ಣನನ್ನು ಕುರಿತು ಈ ಸಂದರ್ಭವನ್ನು ಕ್ರಮವಾಗಿ ನಿಷ್ಕರ್ಷಿಸೆಂದು ಬೇಡಿಕೊಂಡನು. ಕಮಲಾಕ್ಷನು ಪಕ್ಷಪಾತವನ್ನು ಬಿಟ್ಟು ಗಂಭೀರವಚನ

ಗಳಿಂದ ಸಂಜಯನನ್ನು ಕುರಿತು ‘‘ನ್ಯಾಯವು ಪಾಂಡವರ ಕಡೆಗಾಗುತ್ತಿರುವುದು. ಕ್ಷತ್ರಿಯಧರ್ಮವನ್ನಾಲೋಚಿಸು. ಕೌರವರು ಇವರನ್ನೆಷ್ಟು ಬಾಧೆಪಡಿಸುತ್ತಿದ್ದಾಗ್ಯೂ ಇವರು ಸಂಧಿಯನ್ನಪೇಕ್ಷಿಸುವರೇ ಹೊರತು ರಾಜಧರ್ಮವನ್ನು ಬಿಡಲೊಲ್ಲರು. ನಾನಾದರೂ ಕೌರವರ ಬಳಿಗೆ ಹೋಗಿ ಸಂಧಿಗೆ ಪ್ರಯತ್ನಪಡುವೆನು. ಹಾಗಾಗದಿದ್ದಲ್ಲಿ ಯುದ್ಧವುಂಟಾಗುವುದೇನೋ ನಿಶ್ಚಯವು’’ ಎಂದು ಹೇಳಿದನು. ಸಂಜಯನು ಹೊರಡುವುದಕ್ಕೆ ಸಮ್ಮತಿಯನ್ನು ಕೇಳಲು ಧರ್ಮಜನು ಅವನನ್ನು ಕುರಿತು—ನೀನು ನನ್ನ ಮಾತಾಗಿ ದುರ್ಯೋಧನನೊಡನೆ ಹೀಗೆ ಹೇಳು. ‘‘ಈ ರಾಜ್ಯವನ್ನೆಲ್ಲಾ ನೀನೊಬ್ಬನೇ ಪರಿಪಾಲಿಸಬೇಕೆಂಬ ನಿನ್ನ ಅಭಿಲಾಷೆಯು ನ್ಯಾಯ ವಿರುದ್ಧವಾದುದು. ಅದು ಧರ್ಮಸಮ್ಮತವಲ್ಲ. ನಿಮಗೆ ಅಪ್ರಿಯವನ್ನು ಮಾಡಬೇಕೆಂಬುದು ಸರ್ವಥಾ ನಮ್ಮ ಅಭಿಮತವಲ್ಲ. ಭಾರತವೀರಾಗ್ರಣಿ! ನನ್ನದಾದ ಇಂದ್ರಪ್ರಸ್ಥವನ್ನು ಪುನಃ ನನಗೆ ಕೊಡುವವನಾಗು. ಹಾಗೆ ಕೊಡದಿರುವೆಯಾದರೆ ನನ್ನೊಡನೆ ಯುದ್ಧಮಾಡು.’’ ಧೃತರಾಷ್ಟ್ರನಿಗೂ ಭೀಷ್ಮವಿದುರರಿಗೂ ನನಗೆ ಬದಲಾಗಿ ಪ್ರಿಯವಚನಗಳನ್ನು ಹೇಳು. ದುರ್ಯೋಧನನ ಸಂಗಡ ಪಾಂಡವರು ನೀನು ಅವರಿಗೆ ಮಾಡಿದ ಕೇಡುಗಳೆಲ್ಲವನ್ನೂ ದ್ರೌಪದಿಯು ಪಟ್ಟ ಅವಮಾನಗಳನ್ನೂ ಸಹಿಸಿದರಲ್ಲದೆ ಈ ರಾಜ್ಯದಲ್ಲಿ ಅವರ ಪಾಲು ಅವರಿಗೆ ಸೇರದಿರುವಲ್ಲಿ ಅದನ್ನು ಸಹಿಸಲಾರರು. ಒಂದು ದೇಶವನ್ನಾದರೂ ಕೊನೆಗೆ ಐದು ಊರುಗಳನ್ನಾದರೂ ಕೊಟ್ಟಲ್ಲಿ ತೆಗೆದುಕೊಂಡು ಯುದ್ಧವನ್ನು ನಿಲ್ಲಿಸತಕ್ಕವರು. ಎಲ್ಲಾ ವಿಧದಲ್ಲಿಯೂ ಸಂಧಿಯನ್ನೇ ಅಪೇಕ್ಷಿಸತಕ್ಕವರೆಂದು ಹೇಳು; ಹೋಗಿಬರುವುದು—ಎಂದು ಆತನನ್ನು ಕಳುಹಿಸಿದನು.

ಸಂಜಯನು ಹೊರಟು ಧೃತರಾಷ್ಟ್ರನು ಸರ್ವರೊಡನೆ ಸಭೆಯಲ್ಲಿರುವಾಗ ಪಾಂಡವರು ಹೇಳಿದ ಮಾತುಗಳನ್ನೂ ಅವರು ಮಾಡಿದ ಕೆಲಸಗಳನ್ನೂ ಕ್ರಮವಾಗಿ ಅಂಧನೃಪತಿಗೆ ತಿಳಿಯಪಡಿಸಿದನು. ಆ ಮಾತುಗಳನ್ನು ಕೇಳಿ ಸಭೆಯಲ್ಲಿದ್ದವರೆಲ್ಲರೂ ಬಹಳಹೊತ್ತು ಅನೇಕವಿಧವಾಗಿ ಮಾತನಾಡತೊಡಗಿದರು. ಅನಂತರ ಭೀಷ್ಮನು ಕೌರವರನ್ನು ಕುರಿತು ‘‘ಅರ್ಜುನವಾಸುದೇವರು ಪುರಾಣಮುನಿಗಳಾದ ನರನಾರಾಯಣರೆಂದು ತಿಳಿಯಿರಿ. ಅವರನ್ನು ಜಯಿಸುವುದು ಯಾರಿಗೂ ಸಾಧ್ಯವಲ್ಲ,’’ ಎನ್ನಲು ದ್ರೋಣನು ಭೀಷ್ಮನ ಮಾತುಗಳನ್ನು ಸನ್ಮಾನಿಸಿರಿ ಎಂದನು. ಧೃತರಾಷ್ಟ್ರನು ಆ ಮಾತುಗಳನ್ನು ಕಿವಿಗೆ ಹಾಕಿಕೊಳ್ಳದೆ ಪಾಂಡವರ ಸೈನ್ಯವು ಎಷ್ಟರಮಟ್ಟಿಗಿರುವು

ದೆಂದು ಸಂಜಯನನ್ನು ಕೇಳಿ ಆತನ ಹೇಳಿಕೆಯನ್ನು ತಿಳಿದು ಮುಂದೆ ಬರುವ ಕೇಡಿಗೆ ಮನಸ್ಸಿನಲ್ಲಿ ತಲ್ಲಣಗೊಂಡನೇ ಹೊರತು ತನ್ನ ಮಗನ ಮಾತನ್ನೇ ಕೇಳುವವನಾದನು. ಅದನ್ನು ತಿಳಿದು ದುರ್ಯೋಧನನು ತಂದೆಗೆ ಉತ್ಸಾಹವುಂಟಾಗುವಂತೆ ‹‹ಗದೆಯು ನನ್ನ ಕೈಯಲ್ಲಿದ್ದಾಗ್ಯೆ ನನ್ನನ್ನು ಯುದ್ಧದಲ್ಲಿ ಸೋಲಿಸತಕ್ಕ ಶೂರನು ಮೂರು ಲೋಕಗಳಲ್ಲಿಯೂ ಇಲ್ಲ. ಭೀಷ್ಮ, ದ್ರೋಣ, ಕೃಪ, ಅಶ್ವತ್ಥಾಮರೂ ಕರ್ಣನೂ ನಮಗೆ ಸಹಾಯಕರಾಗಿರಲು ಪಾಂಡವರ ಸೈನ್ಯಕ್ಕಿಂತಲೂ ಮೂರನೇ ಒಂದುಪಾಲು ನಮಗೆ ಹೆಚ್ಚಾಗಿರುವಲ್ಲಿ ನಮಗೆ ಜಯವು ಖಂಡಿತವು ಎಂದು ಹೇಳಿ ತಂದೆಯನ್ನು ಉಬ್ಬಿಸಿದನು. ಆ ಸಭೆಯಲ್ಲಿ ಪುನಃ ವಾಗ್ವಾದಉಂಟಾಗಲು ದುರ್ಯೋಧನನು ಹೆಚ್ಚುಗರ್ವದಿಂದ ಕೂಡಿದವನಾಗಿ ಸೂಜಿಯಮೊನೆಯಷ್ಟು ಪ್ರದೇಶವನ್ನಾದರೂ ಕೂಡ ಅವರಿಗೆ ನಾನು ಕೊಡತಕ್ಕವನಲ್ಲವೆಂದನು. ಕೊನೆಗೆ ಧೃತರಾಷ್ಟ್ರನು ಯುದ್ಧ ಮಾಡುವುದು ವಿನಾಶಕರವೆಂದು ತಿಳಿದು ಸಂಧಿಮಾಡಿಕೊಳ್ಳುವುದೇ ಯೋಗ್ಯವೆಂದು ದುರ್ಯೋಧನನಿಗೆ ತಿಳಿಸಲು ತನ್ನ ಬಲವು ಅಜೇಯವಾದುದೆಂದು ಹೊಗಳಿಕೊಳ್ಳುತ್ತ ಯುದ್ಧದಲ್ಲಿ ನಾನು ಸೋತುದಾದರೆ ಸಂಧಿಗೊಪ್ಪುವೆನೇ ಹೊರತು ಎಲ್ಲಾ ವಿಧಗಳಲ್ಲಿಯೂ ನಾನು ಯುದ್ಧಮಾಡುವುದೇ ನಿಶ್ಚಯವೆಂದು ಗರ್ವದಿಂದ ಹೇಳಿದನು. ಅವನಿಗೆ ಸಹಾಯವಾಗಿ ಕರ್ಣನು ಪಾಂಡವರೆಲ್ಲರನ್ನೂ ನಾನೊಬ್ಬನೇ ಕೊಲ್ಲುವೆನೆಂದು ಕೊಬ್ಬಿನಿಂದ ಹೇಳಲು ಭೀಷ್ಮನು ಕೋಪಗೊಂಡು, ‹‹ಛೀ! ನೀನು ಇಂತಹ ಅಯೋಗ್ಯವಾದ ಮಾತುಗಳನ್ನು ಆಡತಕ್ಕವನೇ ಹೊರತು ಹಾಗೆ ಮಾಡುವುದು ನಿನಗೆ ಸಾಧ್ಯವೇ? ಗಂಧರ್ವಪತಿಯು ನಿಮ್ಮ ರಾಜನನ್ನು ಸೆರೆಹಿಡಿದುಕೊಂಡು ಹೋದಾಗ ಅವನನ್ನು ಬಿಡಿಸಿಕೊಂಡುಬಂದವರು ಯಾರು? ವಿರಾಟನಗರದಲ್ಲಿ ಪಶುಗಳನ್ನು ಅರ್ಜುನನು ಬಂದು ಬಿಡಿಸಿಕೊಂಡುಹೋದಾಗ ಅವನನ್ನು ನೀವು ಯುದ್ಧದಲ್ಲಿ ಗೆದ್ದಿರಾ? ಬರೀ ಜಂಭದಮಾತುಗಳನ್ನೇತಕ್ಕೆ ಆಡುತ್ತಿ? ಇನ್ನು ಈ ರೀತಿಯಾದ ಮಾತುಗಳನ್ನು ಆಡಬೇಡ'' ಎಂದು ಗದ್ದರಿಸಿದನು. ಅದಕ್ಕೆ ಸಿಟ್ಟುಗೊಂಡು ಕರ್ಣನು ತನ್ನ ಆಯುಧಗಳನ್ನು ಕೆಳಗಿಟ್ಟು ‹‹ಈ ಭೀಷ್ಮನು ಬದುಕಿರುವ ತನಕ ನಾನು ಯುದ್ಧ ಮಾಡುವುದಿಲ್ಲ'' ಎಂದು ಹೇಳಿ ಸಭೆಯಿಂದ ಹೊರಟು ತನ್ನ ಮನೆಯನ್ನು ಸೇರಿದನು. ಧೃತರಾಷ್ಟ್ರನು ಪುನಃ ದುರ್ಯೋಧನನನ್ನು ಸಂಧಿಗೆ ಒಡಂಬಡಿಸಲು ಯತ್ನಿಸಿ ಎಷ್ಟುವಿಧಗಳಿಂದ ಹೇಳಿದಾಗ್ಯೂ ಅವನು ಕೇಳದೇಹೋದನು.

ಅನಂತರ ಸರ್ವರೂ ತಮ್ಮ ತಮ್ಮ ಮನೆಗಳಿಗೆ ತೆರಳಲು ಆ ಅಂಧನೃಪತಿಯು ಸಂಜಯನನ್ನು ಕುರಿತು ಯುದ್ಧನಡೆದಲ್ಲಿ ಯಾರಿಗೆ ಜಯವಾಗುವುದೋ ಹೇಳೆಂದು ಕೇಳಿದನು. ಆತನು ವ್ಯಾಸನನ್ನು ಸ್ಮರಿಸು, ಗಾಂಧಾರಿಯನ್ನು ಬರಮಾಡು ಎಂದನು. ಧೃತರಾಷ್ಟ್ರನು ಹಾಗೆಯೇ ಮಾಡಲು ಅವರಿಬ್ಬರೂ ಅಲ್ಲಿಗೆ ಬಂದರು. ಆ ಸಮಯದಲ್ಲಿ ಸಂಜಯನು ಅವರ ಸಮಕ್ಷದಲ್ಲಿಯೇ ಆ ದೊರೆಯನ್ನೂ ಅವನ ಮಗನನ್ನೂ ಕುರಿತು:—ಕಾಲಕ್ಕೂ ಮೃತ್ಯುವಿಗೂ ಅಧೀಶ್ವರನೂ ಅಜನೂ ಲೋಕಜನಕನೂ ಆದ ವಾಸುದೇವನೇ ಸಕಲ ಭೂತಗಳಲ್ಲಿಯೂ ಪ್ರಕಾಶಿಸುವ ಪರಮಾತ್ಮನು. ಆದುದರಿಂದ ಶ್ರೀಕೃಷ್ಣನೆಲ್ಲಿರುವನೋ ಆಪಕ್ಷದಲ್ಲಿ ಜಯವುಂಟಾಗುವುದು- ಎನ್ನಲು ಧೃತರಾಷ್ಟ್ರನು ದುರ್ಯೋಧನನನ್ನು ಕುರಿತು ಯುದ್ಧಮಾಡಬೇಕೆಂಬ ದುಃಖವನ್ನು ನಿಲ್ಲಿಸು. ನನ್ನ ಮಾತುಗಳನ್ನು ಕೇಳಿ ಕೇಶವನಲ್ಲಿ ಶರಣಾಗತನಾಗು; ಎಂದು ಹೇಳಿದನು. ಆತನು ತಂದೆಯನ್ನು ಕುರಿತು ಭಗವಂತನಾದ ದೇವಕೀನಂದನನು ಸಂಕ್ರಂದನನಂದನನಲ್ಲಿರುವ ಪ್ರೀತಿಗಾಗಿ ಮನುಷ್ಯಸಮೂಹವನ್ನೆಲ್ಲಾ ನಾಶಪಡಿಸಿದಾಗ್ಯೂ ನಾನು ಕೃಷ್ಣನನ್ನು ಮರೆಹೊಗಲಾರೆನೆಂದು ನಿರ್ಣಯವಾಗಿ ಹೇಳಲು ನಿರಾಶರಾದ ಅವನ ಜನನೀಜನಕರು ಕಠಿನೋಕ್ತಿಗಳಿಂದ ಅವನನ್ನು ದೂಷಿಸಿದರು. ವ್ಯಾಸನು ಧೃತರಾಷ್ಟ್ರನೊಡನೆ ನೀನು ಜನಾರ್ದನನನ್ನಾಶ್ರಯಿಸೆಂದು ಬೋಧಿಸಲು ಸಂಜಯನು ಭಕ್ತಿಯಿಂದ ಶ್ರೀಕೃಷ್ಣನ ದಿವ್ಯನಾಮಗಳನ್ನು ಪಠಿಸಿದನು. ಧೃತರಾಷ್ಟ್ರನು ನನ್ನ ಹೃದಯದಲ್ಲಿ ಸನಾತನನಾದ ಆತನನ್ನು ಧ್ಯಾನಿಸುವೆನೆಂದು ಹೇಳಿದನಾದರೂ ಹಾಗೆ ಮಾಡಲಿಲ್ಲ.

ಇತ್ತ ಪಾಂಡವರು ಈ ವಿಷಯಗಳನ್ನುಕುರಿತು ಮಾತನಾಡುತ್ತಿರಲು ಅಂಬುಜಾಕ್ಷನು ಹೋರಾಟವನ್ನು ನಿಲ್ಲಿಸುವುದಕ್ಕಾಗಿ ತಾನು ಕೌರವರಬಳಿಗೆ ಹೋಗುವುದನ್ನು ನಿಶ್ಚಯಿಸಿದೇನೆಂದು ಹೇಳಿದನು. ಯುಧಿಷ್ಠಿರನು ನಿನಗೆ ಅವರು ಕೇಡುಮಾಡುವರಾದುದರಿಂದ ನೀನು ಅಲ್ಲಿಗೆ ಹೋಗುವುದು ನನಗೆ ಸಮ್ಮತವಿಲ್ಲವೆಂದು ಹೇಳಲು ಶ್ರೀಕೃಷ್ಣನು "ನಾನು ಸಂಹಾರಕ್ಕೆ ನಿಂತರೆ ನನ್ನೆದುರಿಗೆ ನಿಲ್ಲುವವರಾರು? ಕ್ಷತ್ರಿಯನಾದ ನೀನು ಭಿಕ್ಷಾಶನವನ್ನು ತಿನ್ನಲಾಗದು. ನಾನು ಸಂಧಿಯನ್ನು ಮಾಡಲು ಯತ್ನಿಸುತ್ತೇನೆ. ಆದರೆ ಯುದ್ಧವಾಗುವುದೇನೋ ಖಂಡಿತ" ಎಂದು ಹೇಳಿದನು. ಧರ್ಮತನಯನು ಆತನು ಹೊರಡಲು ಸಮ್ಮತಿಸಿದನು. ಆ ಸಮಯದಲ್ಲಿ ಪರ್ವತಗಳು ಭಾರವನ್ನೂ ಬೆಂಕಿಯು ಶಾಖವನ್ನೂ ಕಳೆದುಕೊಂಡವೋ ಎಂಬಂತಹ ಆಶ್ಚರ್ಯವೊಂದು

ನಡೆಯಿತು. ಯಾವಾಗ ಯುದ್ಧವು ಪ್ರಾಪ್ತವಾದೀತೋ, ಯಾವಾಗ ನನ್ನ ಕೈಗಳ ತೀಟೆಯು ಹೋಗುವಂತೆ ಜನಗಳನ್ನು ಕೊಂದು ಆನಂದಪಡುವೆನೋ ಎಂದು ಆತುರ ಪಡುತ್ತಿದ್ದ ದರ್ಪವುಳ್ಳ ಭೀಮನೂ 'ಸಂಧಿಮಾಡುವುದೇ ಉಚಿತವು. ಹಾಗೆ ಮಾಡ ದಿದ್ದಲ್ಲಿ ಕುಲನಾಶವುಂಟಾಗುವುದು' ಎಂದು ಹೇಳಿದನು. ಪುರುಷೋತ್ತಮನು ನಗುತ ಆತನೊಡನೆ "ಇದು ಏನು? ನಿನ್ನ ಮೃದುಸ್ವಭಾವವು ಅನುಚಿತವು. ಭಯದಿಂದಲೇ ನಿನಗೆ ಈ ಯೋಚನೆಯು ಹುಟ್ಟಿರುವುದು. ನೀನು ಹೀಗೆ ಹೇಳುವುದನ್ನು ಕೇಳಿದರೆ ಪಶುಗಳಿಗೆ ವಾಕ್ಸಾಮರ್ಥ್ಯಬಂದಂತೆ ಆಶ್ಚರ್ಯವನ್ನುಂಟುಮಾಡುವುದು." ಎಂಬದಾಗಿ ಹಾಸ್ಯದಿಂದ ಹೇಳಿದನು. ಬಕಾಂತಕನು ಸಿಟ್ಟುಗೊಂಡು ಮುರಾಂತಕನೊಡನೆ ನನ್ನ ಮನಸ್ಸಿನಲ್ಲಿ ಭಯವು ಸ್ವಲ್ಪವೂ ಇಲ್ಲವಾದರೂ ಭಾರತವಂಶಕ್ಕೆ ಕೇಡುಂಟಾಗದಿರು ವುದಕ್ಕಾಗಿ ಹೀಗೆ ಹೇಳಿದೆನೆಂದನು. ಆ ಮಾತುಗಳನ್ನು ಕೇಳಿ ಶ್ರೀ ಕೃಷ್ಣನು ಮೃದು ವಚನಗಳಿಂದ "ವೀರಕುಲೋಚಿತವಾದ ಗುಣಗಳು ನಿನ್ನಲ್ಲಿರುವುವೆಂದು ನಾನು ಬಲ್ಲೆನು. ಆದರೆ ಕರ್ತವ್ಯವನ್ನು ಮಾಡುವಾಗ ಅದರಿಂದ ಉಂಟಾಗತಕ್ಕ ಸಂಪದ್ವಿ ಪತ್ತುಗಳನ್ನು ಕುರಿತು ಒಬ್ಬ ಮನುಷ್ಯನು ಯೋಚಿಸಲಾಗದು. ಏನುಕೇಡುಂಟಾ ದಾಗ್ಯೂ ವಿಹಿತಕಾರ್ಯವನ್ನು ಮನುಷ್ಯನು ಮಾಡಲೇಬೇಕು" ಎಂದು ಹೇಳಿದನು.

ಹೀಗೆ ಇಂತಹ ಮಹಾಕಾರ್ಯಕ್ಕಾಗಿ ಶ್ರೀ ಕೃಷ್ಣನು ಕಾರ್ತಿಕಮಾಸದಲ್ಲಿ ಹೊ ರಟು ಹಸ್ತಿನಾಪುರವನ್ನು ಸೇರಿದನು. ಆ ಮಹನೀಯನ ಆಗಮನವನ್ನು ಕೇಳಿ ಧೃತ ರಾಷ್ಟ್ರನು ದುರ್ಯೋಧನನನ್ನು ಕರೆಯಿಸಿ ಆತನಿಗೆ ಪ್ರೀತಿಯೂ ಸಂತೋಷವೂ ಉಂಟಾಗುವ ತೆರದಲ್ಲಿ ಪಟ್ಟಣವನ್ನೂ ನಮ್ಮ ಅರಮನೆಯನ್ನೂ ಪ್ರಕಾಶಮಾನಗಳಾ ಗಿರುವಂತೆ ಶೃಂಗಾರನೂಡಿಸೆಂದು ಹೇಳಿದನು. ದುರ್ಯೋಧನನು ತಂದೆಯ ಅಪ್ಪಣೆ ಯಂತೆ ಆತನು ಬರುವ ಮಾರ್ಗದಲ್ಲಿ ಅಲ್ಲಲ್ಲಿ ಅತಿ ರಮಣೀಯವಾದ ಭುವನೇಶ್ವರಿ ಗಳನ್ನೂ ಚಪ್ಪರಗಳನ್ನೂ ಕಟ್ಟಿಸಿರಲು ಕಮಲಲೋಚನನು ಅವುಗಳನ್ನು ಕೊನೆಗಣ್ಣಿ ನಿಂದಲಾದರೂ ನೋಡದೆ ದಾಟಿಕೊಂಡು ಹೊರಟುಹೋದನು. ಧೃತರಾಷ್ಟ್ರನು ಹಾಗೆ ಪಟ್ಟಣವನ್ನಲಂಕರಿಸಲು ಕಳುಹಿಸಿರುವುದನ್ನು ತಿಳಿದು ವಿದುರನು ಅವನನ್ನು ಕುರಿತು "ನಿನ್ನ ಐಶ್ವರ್ಯಗಳನ್ನು ಪ್ರಕಾಶಪಡಿಸಿ ಕೃಷ್ಣನನ್ನು ನಿನ್ನ ವಶಮಾಡಿಕೊ ಳ್ಳಲು ಯೋಚಿಸಿರುವೆಯಾ? ಇಂತಹ ಬೆಡಗುಗಳ ಯೋಚನೆಯೊಪ್ಪದು. ಕೃಷ್ಣನು ಸಂಧಿಯನ್ನು ವಿನಾ ಬೇರೊಂದನ್ನೂ ಒಪ್ಪುವುದಿಲ್ಲ. ಈ ನಜರುಗಳೆಲ್ಲವೂ ಉಪಯೋ

ಗವಿಲ್ಲ'' ಎಂದು ಹೇಳಿದನು. ದುರ್ಯೋಧನನೂ ಸಹ ವಿದುರನ ಪಕ್ಷವನ್ನು ವಹಿಸಿದಂತೆ ‹‹ನೀನು ಹೇಳಿದುದು ಯೋಗ್ಯವಾದುದೇ ಸರಿ. ಕೇಶವನನ್ನು ಗೌರವಿಸುವುದಕ್ಕೆ ಇದು ಉಚಿತವಾದ ಸಮಯವಲ್ಲ. ನಾನು ಬೇರೆ ಯೋಚಿಸಿರುವೆನು. ಅದನ್ನು ಕೇಳು. ಪಾಂಡವರಿಗೆ ರಕ್ಷಕನಾಗಿರುವ ಜನಾರ್ದನನನ್ನು ಹಿಡಿದು ಸೆರೆಯಲ್ಲಿಡುತ್ತೇನೆ ಎಂದು ನಾನು ದೃಢಸಂಕಲ್ಪಮಾಡಿದೇನೆ'' ಎಂದು ಹೇಳಿದನು. ಅಂಧನೃಪತಿಯು ಅದನ್ನು ಕೇಳಿ ಜುಗುಪ್ಸೆಪಟ್ಟು ನಾರಾಯಣನು ದೂತನಾಗಿ ಬರುವನಾದುದರಿಂದ ಇದು ಯೋಗ್ಯವಲ್ಲವೆಂದು ಆಕ್ಷೇಪಿಸಿದನು. ಆ ಮಾತುಗಳನ್ನು ಕೇಳಿ ಭೀಷ್ಮನು ಥಿಗ್ಗನೆದ್ದು ‹‹ದುರ್ಯೋಧನನಿಗೆ ವಿನಾಶಕಾಲವು ಸನ್ನಿಹಿತವಾಯಿತು. ಇಂತಹ ಅನ್ಯಾಯಗಳನ್ನು ನಾನು ಕೇಳಲಾರೆನು.'' ಎಂದು ಹೇಳುತ್ತಾ ಸಭೆಯಿಂದ ತೆರಳಿದನು.

ಶ್ರೀ ಕೃಷ್ಣನು ಹಸ್ತಿನಾಪುರದ ಸಮೀಪವನ್ನು ಸೇರಲು ದುರ್ಯೋಧನನನ್ನುಳಿದ ಧಾರ್ತರಾಷ್ಟ್ರರೂ ಭೀಷ್ಮನೂ ದ್ರೋಣನೂ ಕೃಪಾಚಾರ್ಯನೂ ಸಹ ಆತನಿಗೆ ಸ್ವಾಗತವನ್ನು ಕೊಡುವುದಕ್ಕಾಗಿ ಹೊರಟರು. ಆತನೂ ಪಟ್ಟಣವನ್ನು ಪ್ರವೇಶಿಸಿ ನೃಪತಿಯನ್ನು ನೋಡಿ ತಕ್ಕರೀತಿಯಲ್ಲಿ ಮರ್ಯಾದೆಮಾಡಿ ವಿದುರನ ಮನೆಗೆ ಹೋಗಿ ಸುತರಿಂದ ಅಗಲಿದ್ದ ಕುಂತಿಯನ್ನು ನೋಡಿದನು. ಆಕೆಯು ಎಷ್ಟೋ ವಿಶ್ವಾಸದಿಂದ ಆತನನ್ನು ಗೌರವಿಸಿ ಮುಂಚೆ ವ್ಯಸನಪಟ್ಟಳು. ಅನಂತರದಲ್ಲಿ ಕ್ಷತ್ರಿಯರಮಣಿಯ ಸಹಜವಾದ ಶೌರ್ಯವು ತಲೆದೋರಿತು. ಆಕೆಯು ಶ್ರೀ ಕೃಷ್ಣನನ್ನು ಕುರಿತು ‹‹ಕ್ಷತ್ರಿಯಾಂಗನೆಯು ಏತಕ್ಕಾಗಿ ಮಕ್ಕಳನ್ನು ಹೆರುತ್ತಾಳೋ ಅಂತಹ ಸಮಯವು ಈಗ ಪ್ರಾಪ್ತವಾಗಿರುವುದು. ಅಂತಹ ಕಾರ್ಯವನ್ನು ನಡೆಯಿಸದೇ ಈಗ ನೀವು ತೂಕಡಿಸಿದ್ದೇ ಆದರೆ ಈಗ ನಿಮಗೆ ಪ್ರಪಂಚದಲ್ಲಿರುವ ಗೌರವವೆಲ್ಲವೂ ಹೋಗುವುದು. ನಿಮ್ಮ ಕಾರ್ಯವು ತುಚ್ಛವೆಂದೂ ನೀವು ಅಲ್ಪರೆಂದೂ ಎಲ್ಲರೂ ನಿಮ್ಮನ್ನು ತಿರಸ್ಕರಿಸುವರು. ಅಂತಹ ನಿಂದೆಯು ನಿಮ್ಮನ್ನು ಹೊಂದುವುದಾದರೆ ನಾನು ನಿಮ್ಮನ್ನು ತ್ಯಜಿಸುವೆನು. ಸಂದರ್ಭವೊದಗಿದಾಗ ಪ್ರಿಯತಮವಾದ ಪ್ರಾಣವನ್ನಾದರೂ ಬಿಡತಕ್ಕುದೇ ಸಹಜವು' ಎಂದು ಹೇಳಿದಳು. ಕೃಷ್ಣನು ಆ ಮಾನಿನಿಯನ್ನು ಸಮಾಧಾನಮಾಡಿ ದುರ್ಯೋಧನನ ಬಳಿಗೆ ಹೋದನು. ಆತನು ಗೌರವದಿಂದ ಸಂಭಾವಿಸಿ ನಮ್ಮ ಮನೆಯಲ್ಲಿ ಆರೋಗಣೆಮಾಡಬೇಕೆಂದು ಕೇಳಿಕೊಳ್ಳಲು ಶ್ರೀಕೃಷ್ಣನು ಇಷ್ಟಪಡಲಿಲ್ಲ.

ದುರ್ಯೋಧನನು ಮನಸ್ಸಿನಲ್ಲಿ ಮೋಸವನ್ನು ಯೋಚಿಸುತ್ತಾ ಸವಿನುಡಿಗಳಿಂದ ನಮ್ಮ ಮನೆಯಲ್ಲೇಕೆ ಊಟಮಾಡಲೊಲ್ಲೆಯೆಂದು ಕೇಳಿದನು. ಅದಕ್ಕೆ ಕೃಷ್ಣನು ಗಾಂಭೀರ್ಯದಿಂದ ‹‹ರಾಯಭಾರಿಗಳು ತಾವು ಬಂದಕಾರ್ಯವು ಸಿದ್ಧಿಯಾದನಂತರವೇ ಊಟಮಾಡುವರಾದುದರಿಂದ ನೀನೂ ನನ್ನ ಕಾರ್ಯವನ್ನು ನೆರವೇರಿಸಿದಮೇಲೆ ಸತ್ಕಾರಮಾಡಬಹುದು'' ಎಂದನು. ದುರ್ಯೋಧನನು ದೇವಕೀನಂದನನನ್ನು ಪುನಃ ಬಲಾತ್ಕರಿಸಲು ಆತನು ಕೋಪದಿಂದ ಕೂಡಿ ‹‹ಕಾಮಕ್ರೋಧ ಲೋಭಮಾತ್ಸರ್ಯಗಳಿಂದಲಾದರೂ ಕಾರಣಾಂತರಗಳಿಂದಲಾದರೂ ಪ್ರಮಾದದಿಂದಲಾದರೂ ನಾನು ಧರ್ಮವನ್ನು ಬಿಟ್ಟು ವರ್ತಿಸೆನು. ಮನುಷ್ಯನು ತನ್ನಮೇಲೆ ವಿಶ್ವಾಸವನ್ನು ತೋರಿಸತಕ್ಕವನ ಅನ್ನವನ್ನು ತೆಗೆದುಕೊಳ್ಳುವನು. ತಾನು ಕಷ್ಟವನ್ನು ಹೊಂದಿರುವ ಸಮಯದಲ್ಲಿ ಪರರ ಅನ್ನವನ್ನು ಭುಂಜಿಸತಕ್ಕುದುಂಟು. ನನಗೆ ಪ್ರಿಯವುಂಟಾಗುವ ಕಾರ್ಯವೇನನ್ನೂ ನೀನು ನಡೆಯಿಸಿಲ್ಲ. ಅಲ್ಲದೆ ಈಗ ನನಗೆ ಯಾವ ಕಷ್ಟವೂ ಉಂಟಾಗಿಲ್ಲ. ನೀನು ನಿನ್ನ ತಮ್ಮಂದಿರೊಡಗೂಡಿ ಶಾಂತಚಿತ್ತರೂ ಸುಗುಣಭೂಷಿತರೂ ಆದ ಪಾಂಡುಪುತ್ರರಿಗೆ ಅವರು ಹುಟ್ಟಿದವೊದಲ್ಗೊಂಡು ಅಕಾರಣವಾಗಿ ಕೇಡುಗಳನ್ನೇ ಉಂಟುಮಾಡುತ್ತಿರುವಿ. ಇಂತಹ ನೀನಿಡತಕ್ಕ ಅನ್ನವು ದುಷ್ಟಾನ್ನವಾದುದರಿಂದ ನಾನು ಅದನ್ನು ತಿನ್ನಲೊಲ್ಲೆನು. ವಿದುರನಿಡತಕ್ಕ ಅನ್ನದಿಂದ ನಾನು ಸಂತುಷ್ಟನಾಗುವೆನು'' ಎಂದು ಹೇಳಿ ಕೃಷ್ಣನು ಜಾಗ್ರತೆಯೆದ್ದು ವಿದುರನ ಮನೆಗೆ ಹೋದನು.

ಆದಿನರಾತ್ರಿ ವಾಸುದೇವನು ವಿದುರನೊಡನೆ ಮಾತನಾಡುತ್ತಾ ‹‹ಭೂಮಿಯಲ್ಲಿನ ಜನಗಳನ್ನು ಮೃತ್ಯುಪಾಶದಿಂದ ಬಿಡಿಸಲಿಷ್ಟದಿಂದ ನಾನು ಇಲ್ಲಿಗೆ ಬಂದೆನು. ಎರಡುಪಕ್ಷದವರಿಗೂ ಮೇಲುಂಟಾಗುವಂತೆಯೂ ಪ್ರಯತ್ನಿಸುವೆನು. ಯುಕ್ತಿಯುಕ್ತವಾಗಿಯೂ ಧರ್ಮಾನುಸಾರವಾಗಿಯೂ ಅರ್ಥಗರ್ಭಿತವಾಗಿಯೂ ಇರುವ ನನ್ನ ವಚನಗಳನ್ನು ಕೌರವರು ನಡೆಯಿಸುವುದಾದರೆ ನಾನು ಮಾಡಲು ಯತ್ನಿಸಿದ ಸಂಧಿಯು ಕೈಗೂಡುವುದು.'' ಎಂದು ಹೇಳಿ ಆ ರಾತ್ರಿಯನ್ನು ಕಳೆದು ಮರುದಿನ ಪ್ರಾತಃಕಾಲಕ್ಕೆ ಅಂಧನೃಪತಿಯ ಸಭಾಮಂದಿರಕ್ಕೆ ಹೋದನು. ಅಲ್ಲಿ ಯೋಧಾಗ್ರೇಸರರೂ ರಾಜರುಗಳೂ ಹೆಚ್ಚಾದ ವೈಭವದಿಂದ ಮೆರೆಯುತ್ತಾ ಸುವರ್ಣಮಣಿಮಯಗಳಾದ ಆಭರಣಗಳಿಂದ ವಿರಾಜಿಸುತ್ತಾ ಸಭೆಯನ್ನಲಂಕರಿಸಿದ್ದರು. ಪುಂಡರೀಕಾಕ್ಷನು ಪೀತಾಂಬರಧಾರಿಯಾಗಿ ಸುವರ್ಣಮಯವಾದ ನೀಲಮಣಿಯಿಂದ ಅಲಂಕೃತನಾಗಿ ಕಾಂತಿ

ಯಿಂದ ಬೆಳಗುತ್ತಿರುವ ಕೌಸ್ತುಭಮಣಿಯನ್ನು ಧರಿಸಿ ಸಭೆಯನ್ನು ಪ್ರವೇಶಿಸಲು ಅಲ್ಲಿದ್ದ ರಾಜಶ್ರೇಷ್ಠರೆಲ್ಲರೂ ಭಕ್ತಿಯುಕ್ತರಾಗಿ ಪ್ರತ್ಯುತ್ಥಾನಮಾಡಿ ಗೌರವಿಸಿ ಆತನನ್ನು ನೋಡುತ್ತಾ ಸುಮ್ಮನಿದ್ದರು. ಆ ಕಾಲದಲ್ಲಿ ಶ್ರೀಕೃಷ್ಣನು ವರ್ಷಾಕಾಲದ ಮೇಘದಂತೆ ಗಂಭೀರವಾದ ವಚನಗಳಿಂದ ‘‘ಭರತ ಕುಲಪುಂಗವ! ನಾನು ಯೋಧಾಗ್ರೇಸರರ ವಿನಾಶವನ್ನು ನಿಲ್ಲಿಸುವದಕ್ಕಾಗಿ ಪಾಂಡವರಿಗೂ ನಿಮಗೂ ಸಂಧಿಮಾಡಲು ಬಂದಿರುವೆನು. ಪಾಂಡವರು ನಿನ್ನಪುತ್ರರೊಡನೆ ಕೂಡಿದುದಾದರೆ ನಿನಗೆಂತಹ ಬಲವುಂಟಾಗುವುದೋ ಯೋಚಿಸು. ಪರರು ನಿನ್ನನ್ನು ಅಲಕ್ಷ್ಯವಾಗಿ ನೋಡಲು ಭಯಪಡುವರು. ಹಾಗಲ್ಲದೇ ಯಾವ ಒಂದುಪಕ್ಷದವರು ನಿಹತರಾದರೂ ನಿನಗೆ ಸುಖವುಂಟಾಗುವುದೇ ? ಅವರ ಬಾಲ್ಯದಲ್ಲಿ ಅವರ ಮೇಲೆ ತೋರಿಸಿದ ವಿಶ್ವಾಸವನ್ನು ಈಗಲೂ ತೋರಿಸು. ಪಾಂಡವರು ಪ್ರತಿಜ್ಞೆಯಪ್ರಕಾರ ಹದಿಮೂರುವರ್ಷಗಳು ಕಾಲವನ್ನು ಕಳೆದಿರುವರು. ಇನ್ನು ನಿನ್ನ ಮಾತನ್ನು ನಡೆಯಿಸುವನಾಗು. ಪಾಂಡವರು ನಿನ್ನೊಡನೆ ವಿಜ್ಞಾಪಿಸಬೇಕೆಂದು ನನ್ನೊಡನೆ ಹೇಳಿದ ಮಾತುಗಳನ್ನು ಕೇಳು:—ನಿನ್ನಪ್ಪಣೆಯನ್ನು ನಡೆಯಿಸುವುದು ನಮಗೆ ಧರ್ಮವಾದುದರಿಂದ ಕ್ಷಮೆಯಿಂದ ಅನೇಕ ಕಷ್ಟಗಳನ್ನು ಅನುಭವಿಸಿದೆವು. ಇನ್ನು ನಮ್ಮಲ್ಲಿ ತಂದೆಯ ರೀತಿಯಲ್ಲಿಯೂ ಅಣ್ಣನರೀತಿಯಲ್ಲಿಯೂ ಕರುಣೆಯನ್ನು ತೋರಿಸು. ನಾವು ದುರ್ಮಾರ್ಗದಲ್ಲಿ ನಡೆಯುವೆವಾದರೆ ನಮ್ಮನ್ನು ಸನ್ಮಾರ್ಗಕ್ಕೆ ತರಬೇಕಾದುದು ನಮಗೆ ತಂದೆಯಾದ ನಿನಗೆ ಧರ್ಮವಾದುದರಿಂದ ನಮಗೆ ಉತ್ತಮವಾದ ಮಾರ್ಗವನ್ನು ತೋರಿಸಿ ನೀನೂ ಧರ್ಮದಿಂದ ಪ್ರವರ್ತಿಸು—ಎಂದು ಹೇಳಿ ಶ್ರೀ ಕೃಷ್ಣನು ದುರ್ಯೋಧನಾದಿಗಳು ಪಾಂಡವರಿಗೆ ಸಂಕಟಗಳನ್ನುಂಟುಮಾಡಿದ ರೀತಿಯನ್ನೂ ಅವರುಗಳು ಅವೆಲ್ಲವನ್ನೂ ತಾಳ್ಮೆಯಿಂದ ಅನುಭವಿಸಿದ ಪರಿಯನ್ನೂ ವಿಸ್ತಾರವಾಗಿ ತಿಳಿಯಪಡಿಸಿ ಮತ್ತೆ ಅವನನ್ನು ಕುರಿತು ‘‘ಮಹೀಶಾ! ಧರ್ಮಾಧರ್ಮವಿವೇಚನೆಯಿಲ್ಲದೇ ನೀನು ವರ್ತಿಸುತ್ತಿರುವಿ. ಧರ್ಮವನ್ನಾಗಲೀ ಅರ್ಥವನ್ನಾಗಲೀ ಸುಖವನ್ನಾಗಲೀ ಅಪೇಕ್ಷಿಸುವಿಯಾದರೆ ಪ್ರಜಾವಿನಾಶವನ್ನು ಉಂಟುಮಾಡಬೇಡ. ಲೋಭದಿಂದ ಮೇರೆದಪ್ಪಿರುವ ನಿನ್ನ ಪುತ್ರರನ್ನು ನಿಗ್ರಹಿಸು. ಕುಂತೀಪುತ್ರರು ನಿನ್ನ ಮಾತುಗಳನ್ನು ಕೇಳುವುದಕ್ಕಾಗಲೀ ಯುದ್ಧಮಾಡುವುದಕ್ಕಾಗಲೀ ಸಿದ್ಧರಾಗಿರುವರು. ನಿನಗೆ ಯಾವುದು ಪಥ್ಯವೋ ಅದನ್ನು ಅವಲಂಬಿಸು’’ ಎಂದು ಸುಲಲಿತವಾಗಿ ನುಡಿದು ಸುಮ್ಮನಾದನು. ಘಂಟಾನಾದದಂತೆ ಹೇಳಿದ ಆ ವಾಕ್ಕು

ಗಳನ್ನು ಕೇಳಿದ ಅಲ್ಲಿದ್ದ ರಾಜರುಗಳೆಲ್ಲರೂ ಇಂತಹ ಉಪನ್ಯಾಸಕ್ಕೆ ಉತ್ತರಹೇಳಲು ಯಾರುಸಮರ್ಥರೆಂದು ತಮ್ಮಲ್ಲಿ ತಾವೇ ಯೋಚಿಸುತ್ತಾ ಮೌನದಿಂದಿದ್ದರು. ಅಂತಹ ಸಮಯದಲ್ಲಿ ಮಹಾಮುನಿಗಳು ಅಹಂಕಾರಯುಕ್ತರಾದವರಿಗುಂಟಾದ ಪರಾಜಯಗಳ ರೀತಿಯನ್ನು ದುರ್ಯೋಧನನಿಗೆ ತಿಳಿಯಪಡಿಸಿದರು. ನಾರದನು ಆತನೊಡನೆ ಬಹಳಹೊತ್ತು ಮಾತನಾಡುತ್ತಿದ್ದು ನಿನಗೆ ಮೇಲನ್ನು ಕೋರಿ ಹಿತವಚನಗಳನ್ನು ಹೇಳುವವರಲ್ಲಿ ವಿಶ್ವಾಸಮಾಡೆಂದು ಬೇಡಿಕೊಂಡನು. ದುರ್ಯೋಧನನು ಅವೆಲ್ಲವನ್ನೂ ಕಿವಿಯಲ್ಲಿ ಹಾಕದಿರಲು ಅಂಧ ನೃಪತಿಯು ಅವಿವೇಕಿಯೂ ದುಷ್ಟನೂ ಆದ ನನ್ನಮಗನಿಗೆ ಬುದ್ಧಿಹೇಳೆಂದು ಕಮಲನಯನನನ್ನು ಪ್ರಾರ್ಥಿಸಿದನು. ಕೃಷ್ಣನು ದುರ್ಯೋಧನನ ಬಳಿಗೆ ಹೋಗಿ ಸವಿಮಾತುಗಳನ್ನಾಡುತ್ತಾ ಆತನ ಸುಗುಣಗಳನ್ನು ಹೊಗಳುತ್ತಾ ಅವನನ್ನು ಕುರಿತು ''ಸ್ವೇಚ್ಛಾಪ್ರವರ್ತನೆಯನ್ನು ಬಿಟ್ಟು ಹಿರಿಯರೂ ಹಿತಚಿಂತಕರೂ ಹೇಳುವ ಮಾತುಗಳನ್ನ ಕೇಳಿ ಸಂಧಿಯನ್ನು ಮಾಡಿಕೋ. ಹಾಗೆ ಮಾಡಿದೆಯಾದರೆ ನೀನು ತಂದೆತಾಯಿಗಳ ಮಾತನ್ನು ನಡೆಸಿದಂತೆ ಆಗುವುದು; ಎಲ್ಲರಿಗೂ ಸುಖವುಂಟಾಗುವುದು. ಪಾಂಡವರೊಡನೆ ಸಂಧಿಮಾಡಿಕೊಳ್ಳುವುದು ಒಳ್ಳೆಯದೆಂದು ನಿನ್ನ ತಂದೆಯೇ ಹೇಳುತ್ತಿರುವನು. ನೀನೂ ಅದನ್ನು ಒಳ್ಳೆಯದೆಂದು ತಿಳಿದು ಅದಕ್ಕೆ ಮನಸ್ಸನ್ನೊಡಂಬಡಿಸಿಕೋ. ಅಧರ್ಮದಿಂದ ನಡೆದೆಯಾದರೆ ಕೇಡನ್ನು ತಂದುಕೊಳ್ಳುವುದೇ ಸಹಜ. ನಿನ್ನನ್ನನುಸರಿಸಿರುವ ಬಂಧುಗಳಿಗೂ ರಾಜರಿಗೂ ಕೇಡನ್ನು ತಪ್ಪಿಸು. ನಿನ್ನ ವಂಶಕ್ಷಯಕ್ಕೆ ನೀನು ಕಾರಣನೆಂದು ಅಪಯಶಸ್ಸನ್ನು ಹೊಂದಬೇಡ. ಪಾಂಡವರೊಡನೆ ಕಲೆತಿರುವಿಯಾದರೆ ಅವರ ಸಹಾಯದಿಂದ ನೀನು ಸಾರ್ವಭೌಮಪದವಿಯನ್ನು ಅನುಭವಿಸುವಿ. ನಿನಗೆ ಹಿತವನ್ನು ಕೋರುವವರ ಮಾತನ್ನು ಕೇಳಿ ಪಾಂಡವರೊಡನೆ ಸಂಧಿಮಾಡಿಕೊಂಡು ಅವರೊಡನೆ ಸೇರಿ ಸಂತೋಷವನ್ನನುಭವಿಸುವಿಯಾದರೆ ಶಾಶ್ವತವಾದ ಸುಖವನ್ನು ನಿಶ್ಚಯವಾಗಿ ಹೊಂದುವಿ'' ಎಂದು ಬೋಧಿಸಿದನು. ಗಾಂಗೇಯದ್ರೋಣವಿದುರರೂ ದುರ್ಯೋಧನನನ್ನು ಕುರಿತು ನಿನ್ನ ತಂದೆತಾಯಿಗಳನ್ನು ದುಃಖಸಾಗರಮಗ್ನರನ್ನಾಗಿಮಾಡಬೇಡವೆಂದು ಅನೇಕ ವಿಧಗಳಲ್ಲಿ ಪ್ರಾರ್ಥಿಸಿದರು. ಧೃತರಾಷ್ಟ್ರನೂ ನಮ್ಮೆಲ್ಲರಮಾತುಗಳನ್ನೂ ಕೇಳಿ ನಮ್ಮೆಲ್ಲರಿಗೂ ಸಂತೋಷವನ್ನುಂಟುಮಾಡಿ ನೀನೂ ಸುಖಹೊಂದುವುದೆಂದು ದುರ್ಯೋಧನನನ್ನು ಬೇಡಿಕೊಂಡನು. ಆದರೂ ಅವರಮಾತುಗಳೆಲ್ಲವೂ ವ್ಯರ್ಥವಾದುವು.

ದುರ್ಯೋಧನನು ಕ್ರೂರವಾದ ವಚನಗಳಿಂದ ಮಾಧವನನ್ನು ಕುರಿತು— “ನನ್ನಲ್ಲಿ ಎಳ್ಳಷ್ಟೂ ಅನ್ಯಾಯವಿಲ್ಲ. ನಾನು ಬದುಕಿರುವವರೆಗೂ ಸೂಜಿಯ ಮೊನೆಯನ್ನು ಸಿಕ್ಕಿಸುವಷ್ಟು ಭೂಮಿಯನ್ನಾದರೂ ಪಾಂಡವರಿಗೆ ಕೊಡುವುದಿಲ್ಲ.” ಎಂದು ಹೇಳಿದನು. ಇದನ್ನು ಕೇಳಿ ಕೃಷ್ಣನು—“ನೀನು ವೀರಸ್ವರ್ಗವನ್ನು ಅಪೇಕ್ಷಿಸುವಿಯೋ ? ಹಾಗಾದರೆ ಅದನ್ನೇ ಹೊಂದುವಿ. ಪಾಪಾತ್ಮಾ ! ರಾಜ್ಯದಲ್ಲಿ ಪಾಂಡವರಿಗೆ ಸೇರಬೇಕಾದ ಪಿತ್ರಾರ್ಜಿತವಾದ ಭಾಗವನ್ನು ಕೊಡೆಂದು ಅವರು ಕೇಳುತ್ತಿದ್ದಾಗ್ಯೂ ಅದನ್ನು ಕೊಡಲಿಷ್ಟವಿಲ್ಲದಿರುವಿ. ನೀನು ಪರಾಜಯ ಹೊಂದಿ ನೆಲದಮೇಲೆ ಬಿದ್ದಾಗ ಅದನ್ನು ಅವರಿಗೆ ಕೊಟ್ಟೇ ತೀರಬೇಕಾಗುವುದು” ಎಂದು ಹೇಳಿದನು. ಅದನ್ನು ಕೇಳಿ ದುರ್ಯೋಧನನು ಕ್ರೋಧಾವಿಷ್ಟಮಾನಸನಾಗಿ ಥಟ್ಟನೆದ್ದು ಹಿರಿಯರನ್ನು ಲಕ್ಷ್ಯಮಾಡದೆ ಮೂರ್ಖತನದಿಂದ ಸಭೆಯನ್ನು ಬಿಟ್ಟು ಹೊರಟನು. ಆತನ ತಮ್ಮಂದಿರೂ ಆತನ ಪಕ್ಷದವರೂ ಆತನೊಡನೆಯೇ ಹೊರಟರು. ಅನಂತರ ವಾಸುದೇವನು ಧೃತರಾಷ್ಟ್ರನೊಡನೆ “ಕ್ಷತ್ರಿಯ ಕುಲವೆಲ್ಲವೂ ನಾಶವಾಗದಿರುವುದಕ್ಕಾಗಿ ನೀನು ದುರ್ಯೋಧನನನ್ನು ಕರ್ಣಶಕುನಿ ದುಶ್ಶಾಸನರ ಸಹಿತವಾಗಿ ಹಿಡಿಸಿ ಕಟ್ಟಿ ಪಾಂಡವರ ವಶಮಾಡು” ಎಂದು ಹೇಳಿದನು. ಧೃತರಾಷ್ಟ್ರನು ಕಟ್ಟಕಡೆಗೆ ಗಾಂಧಾರಿಯನ್ನು ಕರೆಯಿಸಿ ಗರ್ವದರ್ಪಿತನಾದ ನಿನ್ನ ಮಗನಿಗೆ ತಿಳಿವಳಿಕೆ ಹೇಳೆಂದು ಕೇಳಿದನು. ಆಕೆಯು ದುರ್ಯೋಧನನನ್ನು ಕರೆಕಳುಹಿಸಿದಳು. ದುರ್ಯೋಧನನು ಕೋಪೋದ್ದೀಪಿತನಾಗಿ ಸಭೆಗೆ ಬರಲು ಆತನ ತಾಯಿಯು ಎಷ್ಟುವಿಧಗಳಲ್ಲಿ ಆತನಿಗೆ ಹಿತವನ್ನು ಬೋಧಿಸಿದರೂ ಫಲವುಂಟಾಗಲಿಲ್ಲ. ಶ್ರೀಕೃಷ್ಣನ ಉತ್ತಮೋತ್ತಮವಾದ ಉಪನ್ಯಾಸಗಳೇ ನಿಷ್ಫಲವಾಗಲು ತಾಯಿಯ ಮಾತು ಸಫಲವಾಗುವುದುಂಟೇ. ದುರ್ಯೋಧನನು ನಿರುತ್ತರನಾಗಿ ವಿನಯಸೂಚಕವಾದ ಅವಯವಸ್ಪಂದಗಳೇನೂ ಇಲ್ಲದೆ ಸಭೆಯನ್ನು ಬಿಟ್ಟು ಹೊರಟು ಹುಚ್ಚನಾಗಿ ಭಗವಂತನಾದ ಶ್ರೀಕೃಷ್ಣನನ್ನು ಹಿಡಿಸಬೇಕೆಂದು ಯೋಚಿಸಿ ಅದಕ್ಕೆ ಬೇಕಾದ ಸನ್ನಾಹವನ್ನು ಮಾಡುತ್ತಿದ್ದನು. ಸಾತ್ಯಕಿಯು ಅವನ ದುಷ್ಪ್ರವರ್ತನೆಯನ್ನು ತಿಳಿದು ಕೇಶವನಿಗೂ ಧೃತರಾಷ್ಟ್ರವಿದುರರಿಗೂ ತಿಳಿಯಪಡಿಸಿ ಅವರೊಡನೆ ದುರ್ಯೋಧನಾದಿಗಳು ಕಮಲಾಕ್ಷನನ್ನು ಹಿಡಿಯಬೇಕೆಂದು ಯೋಚಿಸಿರುವುದು ಹುಚ್ಚರೂ ಬಾಲಕರೂ ಧಗಧಗನೆ ಉರಿಯುತ್ತಿರುವ ಬೆಂಕಿಯನ್ನು ಬಟ್ಟೆಯಿಂದ ಕಟ್ಟಬೇಕೆಂದು ಯತ್ನಿಸಿದಂತಾಗಿರು

ವುದೆಂದನು. ಅಂಬುಜನಾಭನು ಧೃತರಾಷ್ಟ್ರನೊಡನೆ ನಿನ್ನ ಪುತ್ರನು ಎಂತಹ ತೊಂದರೆಯನ್ನು ಕೊಟ್ಟಾಗ್ಯೂ ನಾನು ಅವನಲ್ಲಿ ಕೋಪಮಾಡಿ ಏನನ್ನೂ ಮಾಡತಕ್ಕವನಲ್ಲವೆಂದನು. ಅಷ್ಟರಲ್ಲಿ ವಿದುರಭೀಷ್ಮರು ದುರ್ಯೋಧನನನ್ನೂ ಅವನ ತಮ್ಮಂದಿರನ್ನೂ ಅವನ ಪಕ್ಷದವರನ್ನೂ ಕರೆಕಳುಹಿಸಿ ಅವರೊಡನೆ ಜನಾರ್ದನನ ಪರಾಕ್ರಮವನ್ನು ತಿಳಿಯಪಡಿಸಿ ಈ ಮಹನೀಯನನ್ನು ಪರಾಕ್ರಮದಿಂದ ಹಿಡಿಯುವುದು ಯಾರಿಗೂ ಸಾಧ್ಯವಲ್ಲವೆಂದು ಹೇಳಿದರು. ಪುರುಷೋತ್ತಮನು ದುರ್ಯೋಧನನನ್ನು ಕುರಿತು—"ಸುಯೋಧನ ! ಅಜ್ಞಾನದಿಂದ ನೀನು ನನ್ನನ್ನು ಒಬ್ಬಂಟಿಗನೆಂದು ತಿಳಿದಿರುವಿ. ಅಲ್ಪಜ್ಞನಾದ ನೀನು ಬಲುಮೆಯಿಂದ ನನ್ನನ್ನು ಹಿಡಿದು ಸೆರೆಯಿಡಬೇಕೆಂದು ಯೋಚಿಸಿರುವಿ. ಇಗೋ ನೋಡು, ಪಾಂಡವರೂ ವೃಷ್ಣಿಗಳೂ ಅಂಧಕರೂ ಇರುವರು. ಇಗೋ ನೋಡು, ದ್ವಾದಶಾದಿತ್ಯರೂ ರುದ್ರರೂ ವಸುಗಳೂ ಮಹರ್ಷಿಗಳೂ ಇಲ್ಲಿಯೇ ಇರುವರು." ಎಂದು ಹೇಳಿ ಆ ದೇವನು ಆ ದುರಾತ್ಮನನ್ನು ನೋಡಿ ನಗಲು ಅತ್ಯದ್ಭುತವಾಗಿ ಆತನ ಶರೀರದಿಂದ ಸಾವಿರಗಟ್ಲೆ ದೇವತೆಗಳು ಉತ್ಪನ್ನರಾಗಿ ದಿವ್ಯ ಶರೀರಗಳಿಂದ ಪ್ರಕಾಶಿಸುತ್ತಾ ಆ ಪರಮೇಶ್ವರನ ಸುತ್ತಲೂ ನಿಂತರು. ಬಲರಾಮ ಮತ್ತು ಅರ್ಜುನರು ಆತನ ಉಭಯ ಪಾರ್ಶ್ವಗಳಲ್ಲಿಯೂ ಮಿಕ್ಕ ಪಾಂಡವರು ಆತನ ಹಿಂಭಾಗದಲ್ಲಿಯೂ ಕಾಣಿಸಿದರು. ದುಂದುಭಿಧ್ವನಿಯು ಮೊಳಗಿತು. ಪುಷ್ಪವೃಷ್ಟಿಯು ಕರೆಯಿತು. ಈ ಮಹಾದ್ಭುತವನ್ನು ನೋಡಿ ಎಲ್ಲರೂ ಆಶ್ಚರ್ಯಪಡುತ್ತಿರಲು ಶ್ರೀಕೃಷ್ಣನು ತನ್ನ ವಿಶ್ವರೂಪವನ್ನು ಉಪಸಂಹಾರ ಮಾಡಿ ಸಭೆಯಿಂದ ಹೊರಟು ಹೊರಗಿದ್ದ ತನ್ನ ಧವಳರಥವನ್ನು ನೋಡಿದನು. ಧೃತರಾಷ್ಟ್ರನು ಆತನ ಹಿಂದೆಯೇ ಹೊರಟು, ದೇವಾ ! ದುಷ್ಟರಾದ ನನ್ನ ಸುತರು ನನ್ನ ಮಾತುಗಳನ್ನು ಕೇಳರು. ಅವರ ದುಷ್ಪ್ರವರ್ತನೆಗಳನ್ನು ಅಡಗಿಸಲು ನಾನು ಶಕ್ತನಲ್ಲವೆಂದು ದೀನಾಲಾಪಗಳನ್ನಾಡಲು ಕೃಷ್ಣನು ಅಲ್ಲಿನ ರಾಜಶ್ರೇಷ್ಠರನ್ನೂ ದೊರೆಯನ್ನೂ ನೋಡಿ ಕಾಠಿನ್ಯತೆಯಿಂದ "ಕೌರವಸಭೆಯಲ್ಲಿ ನಡೆದುದೆಲ್ಲವನ್ನೂ ದುಷ್ಟಾತ್ಮನಾದ ದುರ್ಯೋಧನನು ಮೂರ್ಖನಂತೆ ಕ್ರೋಧಾವಿಷ್ಟನಾಗಿ ಸಭೆಯಿಂದ ಹೊರಟುಹೋದುದನ್ನೂ ಧೃತರಾಷ್ಟ್ರನು ತನ್ನ ಪುತ್ರರನ್ನು ನಿಗ್ರಹಿಸಲು ಶಕ್ತನಲ್ಲವೆಂದು ಹೇಳಿದುದನ್ನೂ ನೀವೇ ಕಣ್ಣಾರ ನೋಡಿರುವಿರಲ್ಲವೇ. ಇನ್ನು ನಿಮ್ಮ ಅಪ್ಪಣೆಯ ಪ್ರಕಾರ ಯುಧಿಷ್ಠಿರನ ಬಳಿಗೆ ಹೋಗುವೆನು" ಎಂದು ಹೇಳಿ ಸರ್ವರಿಗೂ ಮರ್ಯಾದೆಮಾಡಿ ಅರವಿಂದನಯನನು ರಥವನ್ನು ಹತ್ತಿ ಕುಂತೀದೇವಿಯಿದ್ದ ಸ್ಥಳಕ್ಕೆ ಹೊರಟನು. ಆಕೆಯು

ಯುದ್ಧಮಾಡುವುದಕ್ಕಾಗಿ ಜಾಗ್ರತೆಯಾಗಿ ಸೈನ್ಯದೊಡನೆ ಬರುವಹಾಗೆ ತನ್ನ ಸುತರಿಗೆ ಹೇಳಬೇಕೆಂದು ಆತನನ್ನು ಪ್ರಾರ್ಥಿಸಿದಳು. ಕೃಷ್ಣನು ಅಲ್ಲಿಂದ ಹೊರಟು ಕರ್ಣನನ್ನು ಕರೆದು ತನ್ನೊಡನೆ ಸ್ವಲ್ಪದೂರ ಕರೆದುಕೊಂಡು ಹೊರಟು ಅನಂತರ ಅವನನ್ನು ಕಳುಹಿಸಿ ಕೌರವರನ್ನು ವಿಧಿಯ ಅಧೀನವನ್ನಾಗಿ ಮಾಡಿ ಹೊರಟನು. ಹೀಗೆ ಕೊನೆಗೆ ಸಂಧಿಗಾಗಿ ಮಾಡಿದ ಪ್ರಯತ್ನವು ವಿಫಲವಾಗಲು ಯುದ್ಧವೇ ಅನಿವಾರ್ಯವಾಯಿತು.

ಭೀಷ್ಮದ್ರೋಣರು ಕೃಷ್ಣನು ಹೊರಟನಂತರದಲ್ಲಿ ಪುನಃ ದುರ್ಯೋಧನನನ್ನು ಕರೆದು ಹೀಗೆಂದರು:—"ಹೇಗೆ ನೋಡಿದಾಗ್ಯೂ ಸಂಧಿಮಾಡಿಕೊಳ್ಳುವುದೇ ಯುಕ್ತವಾಗಿರುವುದು. ನಾವು ರಾಜನಾದ ನಿನ್ನಲ್ಲಿ ಎಂದಿಗೂ ದ್ರೋಹವನ್ನು ಎಣಿಸುವುದಿಲ್ಲ. ಆದರೂ ಪಾಂಡವರೊಡನೆ ಯುದ್ಧಮಾಡಬೇಕಾಯಿತಲ್ಲಾ ಎಂದು ಯೋಚಿಸುತ್ತಿರುವೆವು. ಅವರಲ್ಲಿ ಅರ್ಜುನನು ನಮ್ಮಲ್ಲಿ ದ್ರೋಣನಿಗೆ ಪುತ್ರನಿಗಿಂತಲೂ ಪ್ರಿಯನು. ನಾವು ವೃದ್ಧರು. ನಮ್ಮ ಜೀವಿತಗಳು ಕೊನೆಮುಟ್ಟಿದುವಾಗಿವೆ. ನೀನು ಇನ್ನೂ ಪ್ರಾಯದಿಂದ ಕೂಡಿದವನಾದುದರಿಂದ ಮಿತ್ರರನ್ನೂ ರಾಜ್ಯವನ್ನೂ ಪ್ರಾಣವನ್ನೂ ಕಳೆದುಕೊಳ್ಳುತ್ತೀಯಲ್ಲಾ ಎಂದು ಚಿಂತಿಸುತ್ತಿರುವೆವು.''— ಇದನ್ನು ಕೇಳಿಯೂ ದುರ್ಯೋಧನನು ತನ್ನ ಅಭಿಪ್ರಾಯವನ್ನು ಬದಲಾಯಿಸಲಿಷ್ಟಪಡಲಿಲ್ಲ. ಭೀಷ್ಮನೂ ಅವನಂತೆ ಮನಸ್ಸುಳ್ಳ ಕೆಲವರೂ ಸಹ ಪಾಂಡವರಲ್ಲಿಯೇ ತಮ್ಮ ಪ್ರೀತಿಯನ್ನಿಟ್ಟಿರತಕ್ಕವರಾದುದರಿಂದಲೂ ಪಾಂಡವರಿಗೆ ದೇವತೆಗಳ ಅನುಗ್ರಹವುಂಟೆಂದು ತಿಳಿದಿದ್ದುದರಿಂದಲೂ ಪಾಂಡವರ ಬಳಿಗೆ ಹೋಗಿ ಅವರ ಪಕ್ಷದಲ್ಲಿ ಸೇರಿ ಏಕೆ ಯುದ್ಧವನ್ನು ಮಾಡದೇಹೋದರು ? ಶ್ರೀಕೃಷ್ಣನ ಭಕ್ತನಾದ ಭೀಷ್ಮನು ಆತನ ಮೇಲೆಯೇ ಬಾಣವನ್ನು ಹೊಡೆಯಬಹುದೇ ? ಧರ್ಮಕ್ಕೂ ನ್ಯಾಯಕ್ಕೂ ವಶವರ್ತಿಯಾದ ಭೀಷ್ಮನು ಅವುಗಳಿಲ್ಲದಿರುವ ಕಡೆ ನಿಂತು ಅವಿರುವ ಪಕ್ಷಕ್ಕೆದುರಾಗಿ ಯುದ್ಧಮಾಡುವುದು ಹೇಗೆ ? ಎಂದು ಕೆಲವರು ಕೇಳುವರು. ನಿಜವನ್ನು ಪರೀಕ್ಷಿಸಿದರೆ ಧರ್ಮಸ್ವರೂಪನಾದಾತನು ಹಾಗೆ ಮಾಡಿದುದೇ ಸಹಜವೆಂದು ತೋರುವುದು. ಅರ್ಜುನನಿಗೇ ಎದುರಾಗಿ ನಿಂತು ಏಕೆ ಯುದ್ಧಮಾಡಿದನೆಂದು ಅಪೇಕ್ಷಿಸುವಿರಾ ? ಇದಕ್ಕೆ ಕಾರಣವೇನೆಂದರೆ ;—ಎಂತಹ ಕಷ್ಟಗಳು ಸಂಭವಿಸಿದಾಗ್ಯೂ ಎಂತಹ ಸಂದರ್ಭಗಳಲ್ಲಿಯೂ ಗುಂಡಿಗೆಯೊಡೆದು ಸಾವು ಬರುವುದಾಗಿದ್ದರೂ ಮನುಷ್ಯನು ಧರ್ಮವನ್ನು ತಪ್ಪದೇ

ನಡೆಯಿಸಬೇಕು. ತನ್ನ ಒಡೆಯನನ್ನೂ ತನ್ನ ದೇಶವನ್ನೂ ಕಾಪಾಡುವುದಕ್ಕಾಗಿ ಹೋರುವುದೇ ಕ್ಷತ್ರಿಯನಿಗೆ ಉತ್ತಮವಾದ ಧರ್ಮವು. ಭೀಷ್ಮದ್ರೋಣರ ಶರೀರ ಗಳು ಧೃತರಾಷ್ಟ್ರ ಮತ್ತು ಅವನ ಮಕ್ಕಳಿಂದ ಪೋಷಿತವಾದುವುಗಳು. ಅವರು ಗಳು ಆತನಿಗೆ ಪ್ರಜೆಗಳೂ ಯೋಧರೂ ಮಂತ್ರಿಗಳೂ ಆಗಿದ್ದುದರ ದೆಸೆಯಿಂದ ಅವರು ಯಾವಜ್ಜೀವವೂ ಆತನಿಗೆ ವಿಧೇಯರಾಗಿ ಕೆಲಸಗಳನ್ನು ಮಾಡುತ್ತಾ ಅವ ನೊಡನೆ ಸೇರಿ ಹೋರಿದರು. ತಮಗೆ ಸಂಕಟಗಳೂ ಆಪತ್ತುಗಳೂ ಸಂಪ್ರಾಪ್ತವಾ ದಾಗ್ಯೂ ತಮ್ಮ ಮನಸ್ಸಿನಲ್ಲಿ ಅಸಮಾಧಾನವುಂಟಾಗುತ್ತಿದ್ದಾಗ್ಯೂ ಭೀಷ್ಮದ್ರೋ ಣರು ಧರ್ಮವನ್ನು ಬಿಡಲೊಲ್ಲರು. ಯಾರ ಅನ್ನದಿಂದ ತಮ್ಮ ಶರೀರಗಳು ವೃದ್ಧಿ ಹೊಂದಿದುವೋ ಅವನಿಗೆ ತಮ್ಮ ಶರೀರಗಳನ್ನೊಪ್ಪಿಸುವುದು ಧರ್ಮವು. ಅವರ ಅನು ರಾಗವೂ ಕೋರಿಕೆಗಳೂ ಗೌರವವೂ ಶ್ರೀಕೃಷ್ಣನಲ್ಲಿಯೂ ಆತನ ಮಿತ್ರರಲ್ಲಿಯೂ ಸೇರಿಯಿನ್ನಾಗ್ಯೂ ಅವರ ಶರೀರಶಕ್ತಿಯೂ ಅವರ ಅಸ್ತ್ರಶಸ್ತ್ರಗಳೂ ಬುದ್ಧಿಕೌಶಲ್ಯವೂ ಪರಾಕ್ರಮವೂ ಅವರರಾಜನ ಪಾಲಿನವಾಗಿದ್ದವು. ರಾಜನಿಂದ ಯುದ್ಧವು ಪ್ರಾರಂ ಭಿಸಲ್ಪಟ್ಟಾಗ ಅದು ಸರಿಯೇ ತಪ್ಪೇ ಎಂಬು ವಿಚಾರಮಾಡುವುದು ಅವರಿಗೆ ವಿಹಿತ ವಲ್ಲ. ಆ ವಿಚಾರವು ರಾಜನನ್ನು ಸೇರಿರುವುದು. ಕರ್ಮವಶದಿಂದ ತಮಗೆ ಸಂಪ್ರಾ ಪ್ತವಾದ ಸ್ಥಳದಲ್ಲಿ ನಿಂತು ಯುದ್ಧಮಾಡುವಿಕೆಯೇ ಅವರಿಗೆ ಧರ್ಮವಾದುದರಿಂದ ಅವರು ಲೋಕಮರ್ಯಾದೆಯನ್ನನುಸರಿಸಿ ಯುದ್ಧಕ್ಕೆ ನಿಂತರು. ಅವರು ಈ ಯುದ್ಧ ದಲ್ಲಿ ಆ ಭಗವಂತನ ಹಸ್ತದಿಂದ ಗತಾಸುಗಳಾಗಿ ನಾವು ಕೃತಾರ್ಥರಾದರೆ ಸಾಕು ಎಂದು ಬಯಸುತ್ತಿದ್ದರು.

ವಾಸುದೇವನು ಕರ್ಣನನ್ನು ಕರೆದುಕೊಂಡು ಸ್ವಲ್ಪದೂರ ಹೊರಟನಷ್ಟೆ. ಆಗ ಅವರಿಗೆ ನಡೆದ ಸಂಭಾಷಣೆಗಳ ರೀತಿಯನ್ನು ತಿಳಿಯೋಣ. ಅದು ಎಂತಹ ವಿಚಿತ್ರವಾದುದು. ಅದರ ಮೂಲವು ಬಹಳ ಹಿಂದಿನದು. ಮಕ್ಕಳನ್ನು ಪಡೆಯಲಿ ಷ್ಟವುಳ್ಳವಳಾಗಿ ಯಾವ ದೇವತೆಯನ್ನಾರಾಧಿಸಿದಲ್ಲಿ ಆ ದೇವತೆಯನ್ನು ಪ್ರಸನ್ನನ ನ್ನಾಗಿ ಮಾಡುವಂತಹ ಮಂತ್ರವನ್ನು ದೂರ್ವಾಸನು ಕುಂತಿಗೆ ಉಪದೇಶಿಸಿದನೆಂದು ನಾವು ತಿಳಿದಿರುವೆವಷ್ಟೆ. ಆ ಮಂತ್ರವನ್ನು ಹೊಂದಿದವಳಾಗಿ ಕುಂತಿಯು ಪಾಂಡು ರಾಜನನ್ನು ವಿವಾಹವಾಗುವ ಮುಂಚೆಯೇ ಆ ಮಂತ್ರದ ಪ್ರಭಾವವನ್ನು ತಿಳಿಯಲಿ ಚ್ಛಿಸಿ ಬಾಲ್ಯಮೌಢ್ಯದಿಂದ ಆ ಮಂತ್ರವನ್ನು ಜಪಮಾಡುತ್ತಾ ಸೂರ್ಯನನ್ನಾರಾಧಿ

ಸಲು ಆ ದೇವನು ಪ್ರತ್ಯಕ್ಷನಾದನು. ಕುಂತಿಯು ಆತನನ್ನು ನೋಡಿ ಭಯಪಟ್ಟು "ದೇವಾ! ನನ್ನಲ್ಲಿ ಪುತ್ರೋತ್ಪಾದನೆ ಮಾಡಲಿಚ್ಛಿಸದೇ ಪುನಃ ಹಿಂದಕ್ಕೆ ಹೊರಡು. ಹುಡುಗಿಯಾದುದರಿಂದ ಅವಿವೇಕದಿಂದ ನಿನ್ನನ್ನು ಬರಮಾಡಿದೆನು. ಈ ತಪ್ಪನ್ನು ಕ್ಷಮಿಸು" ಎಂದು ಬೇಡಿಕೊಂಡಾಗ್ಯೂ ಕಮಲಬಾಂಧವನು ಮಂತ್ರಶಕ್ತಿಯಿಂದ ಬದ್ಧನಾಗಿ ಆಕೆಯನ್ನು ಸೇರಲು ಆ ಸ್ತ್ರೀಗೆ ಸಹಜವಾದ ಕವಚಕುಂಡಲಗಳನ್ನು ಧರಿಸಿದ್ದ ಒಬ್ಬ ಕುಮಾರನುದಯಿಸಿದನು. ಕುಂತಿಯು ಆ ದೇವನ ಅಪ್ಪಣೆಯ ಮೇರೆಗೆ ಆ ಬಾಲಕನನ್ನು ಅಲ್ಲಿಯೇ ಇಟ್ಟುಹೋದಳು. ಅಷ್ಟರಲ್ಲಿ ಅತಿರಥನೆಂಬ ಸೂತನ ಭಾರ್ಯೆಯಾದ ರಾಧೆಯೆಂಬ ಸ್ತ್ರೀಯು ಆ ಬಾಲಕನನ್ನು ನೋಡಿ ಕರುಣೆಯಿಂದ ತನ್ನಮನೆಗೆ ಕರೆದುಕೊಂಡು ಹೋಗಿ ಪುತ್ರನಂತೆ ಸಾಕಿದಳು. ಆತನೇ ಕರ್ಣನು. ಕೃಷ್ಣನು ಕರ್ಣನನ್ನು ಕುರಿತು ಆತನಿಗೆ ಕುಂತಿಯು ತಾಯಿಯೂ ಪಾಂಡುರಾಜನು ತಂದೆಯೂ ಆಗಿರುವ ಸಂಗತಿಯನ್ನು ತಿಳಿಯಪಡಿಸಿ "ನೀನು ಪಾಂಡವರಿಗೆ ಜ್ಯೇಷ್ಠಭ್ರಾತೃವಾಗಿರುವಿ. ಈಗ ನಾನು ನಿನ್ನನ್ನು ಅವರ ಬಳಿಗೆ ಕರೆದುಕೊಂಡು ಹೋಗಿ ನಿನ್ನ ಜನ್ಮವಿಚಾರವನ್ನು ಅವರಿಗೆ ತಿಳಿಯಪಡಿಸುವೆನು. ಅವರೂ ಸಂತೋಷದಿಂದ ನಿನ್ನನ್ನು ತಮ್ಮ ಅಧೀಶ್ವರನನ್ನಾಗಿ ತಿಳಿದು ಮರ್ಯಾದೆಮಾಡಿ ನಿನಗೆ ವಿನೀತರಾಗುವರು. ನೀನು ಪಟ್ಟಾಭಿಷಿಕ್ತನಾದಲ್ಲಿ ಪಾಂಡವರೂ ನಾನು ಮೊದಲಾದ ಅವರ ಆಪ್ತರುಗಳೂ ನಿನ್ನನ್ನು ಅನುಸರಿಸುವೆವು. ನೀನು ಭೂಮಂಡಲಕ್ಕೆ ಅಧೀಶ್ವರನಾಗಿ ನಿನ್ನ ತಮ್ಮಂದಿರಿಗೆ ಶ್ರೇಷ್ಠನಾಗಿ ಪ್ರಕಾಶಿಸು." ಎಂದು ಹೇಳಿದನು. ಕರ್ಣನು ವಿನಯದಿಂದ ಕೂಡಿ ಮೃದುವಚನಗಳಿಂದ ಕೃಷ್ಣನೊಡನೆ "ನೀನು ಹೇಳಿದಂತೆ ನಾನು ಪಡೆದುಕೊಳ್ಳುವುದಕ್ಕಾಗುವುದಿಲ್ಲ. ನಿಜವಾಗಿಯೂ ನಾನು ಪಾಂಡುರಾಜನಿಗೆ ದೊಡ್ಡಮಗನೇ ಆಗಿರುವೆನಾದರೂ ಹುಟ್ಟಿದಕೂಡಲೇ ಕುಂತಿಯಿಂದ ಬಿಡಲ್ಪಟ್ಟೆನಾದಕಾರಣ ಹಾಗೆ ಬಿಡಲ್ಪಟ್ಟ ಬಾಂಧವ್ಯವನ್ನು ಈಗ ಹೊಂದಲಾರೆನು. ಸೂತನಾದ ಅತಿರಥನೂ ಆತನ ಭಾರ್ಯೆಯಾದ ರಾಧೆಯೂ ಬಾಲ್ಯದಿಂದಲೂ ನನಗೇನೊಂದು ತೊಂದರೆಯೂ ಸಂಭವಿಸದಿರುವಂತೆ ಕಾಪಾಡುತ್ತಾ ತಾಯಿತಂದೆಗಳಂತೆ ಪ್ರೀತಿಯಿಂದ ಬೆಳೆಸಿ ದೊಡ್ಡವನನ್ನಾಗಿ ಮಾಡಿ ವಿದ್ಯೆಯನ್ನು ಕಲಿಸಿದರು. ಆತನೇ ನನಗೆ ಭಾರ್ಯೆಯರನ್ನು ಹುಡುಕಿ ಮದುವೆಮಾಡಿದನು. ನಾನು ಮಕ್ಕಳು ಮೊಮ್ಮಕ್ಕಳನ್ನು ಪಡೆದೆನು. ಆದುದರಿಂದ ನಾನು ಅವರಲ್ಲಿಯೂ ಅವರ ಬಂಧುಗಳಲ್ಲಿಯೂ

ಎಲ್ಲಾ ವಿಧದಲ್ಲಿಯೂ ಬಾಂಧವ್ಯವನ್ನೂ ಪ್ರೀತಿಯನ್ನೂ ಕೃತಜ್ಞತೆಯನ್ನೂ ತೋರ್ಪಡಿಸಬೇಕು. ದುರ್ಯೋಧನನು ನನಗೆ ರಾಜ್ಯವನ್ನು ಕೊಟ್ಟು ಕಾಪಾಡಿದನಾದುದರಿಂದ ಆತನ ವಿಷಯದಲ್ಲಿ ನಾನು ಕೃತಜ್ಞತೆಯನ್ನು ತೋರಿಸಬೇಕು. ದುರ್ಯೋಧನನು ನನ್ನನ್ನು ನಂಬಿ ಈ ಯುದ್ಧಕ್ಕೆ ಪ್ರಯತ್ನಿಸಿದನು. ಅರ್ಜುನನೊಡನೆ ನಡೆಸಬೇಕಾದ ಯುದ್ಧಕ್ಕೆ ಆತನು ನನ್ನನ್ನು ಗೊತ್ತುಮಾಡಿರುವನು. ಇದೂ ಅಲ್ಲದೆ ಪಾಂಡವರು ನನ್ನ ಜನ್ಮಕ್ರಮವನ್ನು ತಿಳಿದುದಾದರೆ ನನಗಿದುರಾಗಿ ಯುದ್ಧಮಾಡರು. ರಾಜ್ಯವನ್ನೂ ಅಪೇಕ್ಷಿಸರು. ಆದುದರಿಂದ ಅವರಿಗೆ ಈ ವೃತ್ತಾಂತವನ್ನು ತಿಳಿಸಲಾಗದು. ಅಲ್ಲದೆ ಮತ್ತೊಂದು ವಿಶೇಷವುಂಟು. ರಾಜ್ಯವು ನನ್ನ ಅಧೀನವಾದುದಾದರೆ ಅದನ್ನು ನಾನು ದುರ್ಯೋಧನನಿಗೇ ಕೊಡತಕ್ಕವನು. ಯುಧಿಷ್ಠಿರನು ದೊರೆಯಾಗಲು ತಕ್ಕವನು. ರಾಜ್ಯವು ಈಗ್ಯೆ ಅವನಿಗೇನೆ ಕೈಸೇರಿತೆಂದು ಹೇಳಬಹುದು. ರಣರಂಗವೆಂಬ ಯಜ್ಞವೇದಿಕೆಯಲ್ಲಿ ಸೇನಾಪತಿಗಳೇ ಋತ್ವಿಕ್ಕುಗಳಾಗಿಯೂ ಯೋಧರೇ ಪಶುಗಳಾಗಿಯೂ ಅಸ್ತ್ರಗಳೇ ಸ್ರುಕ್ಸ್ರುವಗಳಾಗಿಯೂ ಇರುವುವು. ಅದರಲ್ಲಿ ಅರ್ಜುನನು ನನ್ನನ್ನೂ ಭೀಮಸೇನನು ದುರ್ಯೋಧನ ದುಶ್ಶಾಸನರನ್ನೂ ಸಂಹರಿಸುವರು. ಪಾಂಡವರನ್ನು ಎಷ್ಟೋ ವಿಧಗಳಲ್ಲಿ ನಿಂದಿಸಿದೆನು. ಅದಕ್ಕಾಗಿ ನನಗೆ ಪಶ್ಚಾತ್ತಾಪವುಂಟಾಗಿರುವುದು. ಕೇಶವಾ ! ಅಸಂಖ್ಯರಾದ ಈ ರಾಜರುಗಳೆಲ್ಲರೂ ಆಯುಧಗಳಿಂದ ತ್ರಿಭುವನಗಳಲ್ಲಿಯೂ ಪರಮಪವಿತ್ರವಾದ ಕುರುಕ್ಷೇತ್ರದಲ್ಲಿ ಮಡಿಯುವರಷ್ಟೆ. ಅದೆಲ್ಲವೂ ಅಲ್ಲಿಯೇ ನಡೆಯುವಂತೆ ನೀನು ಏರ್ಪಡಿಸು. ಕಮಲಪತ್ರಾಕ್ಷ, ನಿನ್ನ ಮನಸ್ಸಿನಲ್ಲಿ ಯೋಚಿಸಿದ ಕಾರ್ಯವನ್ನು ನೆರವೇರಿಸಿ ಕ್ಷತ್ರಿಯರೆಲ್ಲರಿಗೂ ಸ್ವರ್ಗಪ್ರಾಪ್ತಿಯನ್ನುಂಟುಮಾಡುವವನಾಗು '' ಎಂದು ಹೇಳಲು ಶ್ರೀಕೃಷ್ಣನು ಕೃಪಾಳುವಾಗಿ ಆತನೊಡನೆ ಇಂತೆಂದನು :—'' ಈ ಮಹಾಯುದ್ಧದಿಂದ ಕೃತ ತ್ರೇತಾ ದ್ವಾಪರ ಯುಗಗಳು ಕೊನೆಯಾಗುವುವು. ನೀನು ಭೀಷ್ಮ ದ್ರೋಣ ಕೃಪರ ಬಳಿಗೆ ಹೋಗಿ ಈ ಕಾಲವು ಯುಕ್ತವಾದುದೆಂದೂ ಶ್ರೇಷ್ಠವಾದುದೆಂದೂ ಹೇಳು. ಇನ್ನು ಏಳು ದಿನಗಳಿಗೆ ಅಮಾವಾಸ್ಯೆ ಬರುವುದು. ಆಗ ಯುದ್ಧಕ್ಕೆ ಪ್ರಾರಂಭಿಸಿದುದಾದರೆ ಯೋಧರೆಲ್ಲರೂ ಅಸ್ತ್ರನಿಹತರಾಗಿ ಉತ್ತಮಪದವಿಯನ್ನು ಹೊಂದುವರು '' (ಹೀಗೆ ಕ್ಷತ್ರಿಯ ಕುಲವು ಭೂಮಿಯಲ್ಲಿ ಪೂರ್ತಿಯಾಗಿ ನಾಶವಾಗಬೇಕೆಂದೂ ಅನಂತರ ಕಲಿಯುಗವು ಪ್ರಾಪ್ತವಾಗಬೇಕೆಂದೂ ದೇವತೆಗಳಿಂದ ಪೂರ್ವದಲ್ಲೆ ನಿರ್ಣೀತವಾ

ಗಿತ್ತು.) ಹೀಗೆ ಹೇಳಿದ ಮಾತನ್ನು ಕೇಳಿ ಕರ್ಣನು ದಾಮೋದರನನ್ನು ಪೂಜಿಸಿ ಅವನನ್ನು ಕುರಿತು ‹‹ ನಾನು ಒಂದು ಸ್ವಪ್ನವನ್ನು ಕಂಡೆನು—ಅದರಲ್ಲಿ ಪಾಂಡವರು ಜಯಹೊಂದಿದರು. ದುರ್ಯೋಧನನ ಸೇನೆಯಲ್ಲಿ ಕೃಪಾಶ್ವತ್ಥಾಮಕೃತವರ್ಮರನ್ನುಳಿದ ಎಲ್ಲರೂ ನಾಶಹೊಂದಿದರು.—ದೇವಾ ! ಕ್ಷತ್ರಿಯ ಕುಲನಾಶಕವಾದ ಈ ಮಹಾಯುದ್ಧದಿಂದ ನಾವು ಪ್ರಾಣದೊಡನೆ ಬದುಕಿ ಬಂದೆವಾದರೆ ನಮಗೆ ಇಲ್ಲಿ ಪುನಃ ಸಮಾವೇಶವುಂಟಾಗಲಿ. ಹಾಗಿಲ್ಲದಿದ್ದರೆ ನಮಗೆ ಸ್ವರ್ಗದಲ್ಲಿಯೇ ಸಮಾವೇಶವುಂಟಾಗುವುದು. ಅನಘಾ ! , ನಮಗೆ ಸಮಾವೇಶವುಂಟಾಗುವುದು ಸ್ವರ್ಗವಲ್ಲಿಯೆಂದೇ ನನಗೀಗ ತೋರುವುದು '' ಎಂದು ಹೇಳಿ ಕರ್ಣನು ಕೃಷ್ಣನನ್ನು ಬಿಗಿದಪ್ಪಿಕೊಂಡನು. ಅನಂತರ ಕೃಷ್ಣನನ್ನು ಬಿಟ್ಟು ರಾಧೇಯನು ರಥದಿಂದಿಳಿದು ಸುವರ್ಣಮಯವಾದ ರಥವನ್ನು ಹತ್ತಿ ವ್ಯಸನಾಕ್ರಾಂತನಾಗಿ ಹಿಂದಕ್ಕೆ ಹೊರಟನು. ಕೃಷ್ಣನಿಗೂ ಕರ್ಣನಿಗೂ ಈ ರೀತಿಯಲ್ಲಿ ಸಂಭಾಷಣೆ ಜರುಗಿದನಂತರದಲ್ಲಿ ಅವರು ಒಬ್ಬರನ್ನೊಬ್ಬರು ಕುರುಕ್ಷೇತ್ರದಲ್ಲಿಯೇ ನೋಡಿದವರಾದರು.

ಕರ್ಣನಿಗೆ ಇಂತಹ ಮನಸ್ತಾಪಕರವಾದ ಸಂಭಾಷಣೆಯು ಮತ್ತೊಂದು ತನ್ನ ಜನನಿಯೊಡನೆ ಜರುಗಿತು. ಕುಂತಿಯು ಕರ್ಣನನ್ನು ಕರೆಯಿಸಿ ‹‹ ನೀನು ಕ್ಷತ್ರಿಯನಾಗಿರುವೆ. ಪಾಂಡುರಾಜಸುತನು. ಆದುದರಿಂದ ನೀನು ಪಾಂಡವರ ಬಳಿಗೆ ಹೋಗಿ ಕೇಶವನು ಬಲರಾಮನೊಡನೆ ಹೇಗೋ ಹಾಗೆ ಅರ್ಜುನನೊಡನೆ ಕಲೆತಿರುವನಾಗು.'' ಎಂದು ಹೇಳಿದಳು. ಕುಂತಿಯ ಮಾತುಗಳನ್ನನುಸರಿಸಿ ಸೂರ್ಯಬಿಂಬದಿಂದ:—ಕರ್ಣಾ, ಪೃಥೆಯು ಹೇಳಿದ ಮಾತು ನಿಶ್ಚಯ. ನೀನು ತಾಯಿ ಹೇಳಿದಂತೆ ಆಚರಿಸು. ಆ ಮಾತುಗಳನ್ನು ತಪ್ಪದೇ ನಡೆಯಿಸಿದೆಯಾದರೆ ನಿನಗೆ ಹೆಚ್ಚಾದ ಶುಭವುಂಟಾಗುವುದು.—ಎಂಬ ಶಬ್ದವು ಕೇಳಬಂದಿತು. ಕರ್ಣನ ಮನಸ್ಸು ಸತ್ಯಪರಾಯಣವಾದ ಕಾರಣದಿಂದ ಚಲನೆಹೊಂದದಿರುವುದಾಗಿ ತಾಯಿಯ ಮಾತಿನಲ್ಲಿ ಅನಾದರಣೆ ಹೊಂದಿ ‹‹ ಆಪತ್ತುಂಟಾದ ಸಮಯದಲ್ಲಿ ಸ್ನೇಹಿತರನ್ನು ಬಿಡಬಹುದೆ ? ಧಾರ್ತರಾಷ್ಟ್ರರಿಂದ ಪೋಷಿತರಾದವರೆಲ್ಲರೂ ತಮ್ಮ ಪ್ರಭುವಿಗಾಗಿ ಕೆಲಸಮಾಡಬೇಕಾದ ಸಮಯವೇ ಇದು. ನಾನು ನನ್ನ ಪ್ರಾಣಗಳಿಗಾಗಿ ಆಶೆಪಡದೇ ಅವರಿಗಾಗಿ ಕೆಲಸಮಾಡುವೆನು. ತಮ್ಮೊಡೆಯರ ಅನ್ನವನ್ನು ಚೆನ್ನಾಗಿ ತಿಂದು ಅವರ ದೆಸೆಯಿಂದ ಎಲ್ಲಾ ಐಶ್ವರ್ಯಗಳನ್ನೂ ಹೊಂದಿ ಆ ಉಪಕಾರಗಳಿಗೆ ಪ್ರತ್ಯುಪಕಾರ ಮಾಡುವ

ಸಮಯವೊದಗಿದಾಗ ಚಪಲಚಿತ್ತರಾಗಿ ಕರ್ತವ್ಯವನ್ನು ದೂರಮಾಡತಕ್ಕ ಮನುಷ್ಯರು ಪಾಪಾತ್ಮರಾಗಿಯೂ ಕೃತಘ್ನರಾಗಿಯೂ ಸ್ವಾಮಿದ್ರೋಹಿಗಳಾಗಿಯೂ ಈ ಲೋಕಕ್ಕೂ ಪರಲೋಕಕ್ಕೂ ಅನರ್ಹರಾಗಿಯೂ ಕೆಡುವರು'' ಎಂದು ಹೇಳಿ ತಾಯಿಯೊಡನೆ ಕರ್ಣನು ಮತ್ತೆ ಹೀಗೆಂದನು:—"ತಾಯೆ! ನಾನೊಂದು ನಿಶ್ಚಯ ಮಾಡಿರುವೆನು. ಯುದ್ಧವು ಪ್ರಾಪ್ತವಾದ ಕಾಲದಲ್ಲಿ ಯುಧಿಷ್ಠಿರ, ಭೀಮ, ನಕುಲ, ಸಹದೇವರನ್ನು ನಾನು ಸಂಹರಿಸೆನು. ಅರ್ಜುನನಿಂದ ನಾನಾಗಲೀ ನನ್ನಿಂದ ಅರ್ಜುನನಾಗಲೀ ಹತರಾಗುವವರೆಗೂ ಅರ್ಜುನನ ಸಂಗಡ ಯುದ್ಧಮಾಡುವೆನು.''

ಅಷ್ಟರಲ್ಲಿ ಶ್ರೀಕೃಷ್ಣನು ಉಪಪ್ಲಾವ್ಯಕ್ಕೆ ಬಂದು ತನ್ನ ವೃತ್ತಾಂತವೆಲ್ಲವನ್ನೂ ಪಾಂಡವರಿಗೆ ತಿಳಿಸಿ ಕೌರವರಿಗೆ ಸಹಾಯಮಾಡುವುದಕ್ಕಾಗಿ ಬಂದ ರಾಜರುಗಳೆಲ್ಲರೂ ಅಷ್ಟಕ್ಕೆ ಮೊದಲಾಗಿಯೇ ಕುರುಕ್ಷೇತ್ರಕ್ಕೆ ಹೋಗಿರುವರೆಂದೂ ಯುದ್ಧದ ವಿನಾ ಮತ್ತೆ ಬೇರೆ ಯೋಚನೆಯಿಲ್ಲವೆಂದೂ ಹೇಳಿದನು.

ಅನಂತರ ಪಾಂಡವರೆಲ್ಲರೂ ತಮ್ಮ ಸೇನೆಗಳಲ್ಲಿನ ಅಕ್ಷೌಹಿಣಿಗಳನ್ನು ದ್ರುಪದ ವಿರಾಟ ಧೃಷ್ಟದ್ಯುಮ್ನ ಶಿಖಂಡಿ ಸಾತ್ಯಕಿ ಚೇಕಿತಾನ ಭೀಮಸೇನರ ಅಧೀನವನ್ನಾಗಿ ಮಾಡಿ ಸೇನಾಪತಿಯನ್ನಾಗಿ ಯಾರಿಗೆ ಪಟ್ಟಕಟ್ಟಬೇಕೆಂಬ ವಿಚಾರಮಾಡ ತೊಡಗಿದರು. ಅಲ್ಲಿದ್ದ ರಾಜರುಗಳೆಲ್ಲರೂ ಬೇರೆಬೇರೆಯಾಗಿ ತಮ್ಮ ಅಭಿಪ್ರಾಯಗಳನ್ನು ತಿಳಿಸಲು ಪಾಂಡವರು ಈ ವಿಷಯವನ್ನು ನಿರ್ಣಯಮಾಡೆಂದು ವಾಸುದೇವನನ್ನು ಪ್ರಾರ್ಥಿಸಿದರು. ಆತನು ದ್ರೋಣನನ್ನು ಕೊಲ್ಲುವುದಕ್ಕಾಗಿ ಯಜ್ಞದಲ್ಲಿ ಹುಟ್ಟಿದ ಧೃಷ್ಟದ್ಯುಮ್ನನನ್ನು ಸೇನಾಪತಿಯಾಗಿರಲು ಗೊತ್ತುಮಾಡಿದನು. ಅನಂತರ ಆ ಮಹಾಸೇನೆಯು ಅಲ್ಲಿಂದ ಹೊರಟು ಕುರುಕ್ಷೇತ್ರವನ್ನು ಸೇರಿ ನಿಂತಿತು. ಅಲ್ಲಿ ಕೌರವ ಸೈನ್ಯದಲ್ಲಿ ಭೀಷ್ಮನು ಸಾಯುವವರೆಗೂ ನಾನು ಯುದ್ಧಮಾಡುವದಿಲ್ಲವೆಂದು ಕರ್ಣನು ಪ್ರತಿಜ್ಞೆಮಾಡಿದ್ದುದರಿಂದ ಆ ಸೇನೆಗೆ ಭೀಷ್ಮನೇ ಸೇನಾಪತಿಯಾದನು. ಹೀಗೆ ಶಸ್ತ್ರಗಳ ಧ್ವನಿಯೂ ಭೇರೀನಿನಾದಗಳೂ ಶಂಖಧ್ವನಿಗಳೂ ಉಂಟಾಗುತ್ತಿರಲು ಪಾಂಡವಕೌರವರು ಯುದ್ಧಸನ್ನದ್ಧರಾದರು.

ಉದ್ಯೋಗಪರ್ವ ಸಮಾಪ್ತ.

# ಭೀಷ್ಮಪರ್ವ

ಈ ಪರ್ವದಲ್ಲಿ ಭೀಷ್ಮನ ಹತ್ತುದಿನಗಳ ಯುದ್ಧವು ಹೇಳಿರುವುದಲ್ಲದೆ ಇದರಲ್ಲಿ ಶಾಶ್ವತವಾದ ಸರ್ವಶ್ರೇಷ್ಠವಾದ ಭಗವದ್ಗೀತೆಯು ಅಂತರ್ಗತವಾಗಿರುವುದು.

ವ್ಯಾಸಋಷಿಯು ಅಂಧನೃಪತಿಯಾದ ಧೃತರಾಷ್ಟ್ರನ ಬಳಿಗೆ ಬಂದು ಯುದ್ಧವನ್ನು ನೋಡುವುದಕ್ಕಾಗಿ ನಿನಗೆ ದಿವ್ಯದೃಷ್ಟಿಯನ್ನು ಕೊಡುವೆನೆನ್ನಲು, ಆ ದೊರೆಯು ಆ ವಧೆಯನ್ನು ನಾನು ನೋಡಲೊಲ್ಲೆನೆಂದನು. ಆ ಮುನೀಂದ್ರನು ಸಂಜಯನಿಗೆ ದಿವ್ಯದೃಷ್ಟಿಯನ್ನಿತ್ತು, ರಣರಂಗದಲ್ಲಿ ಹಗಲೂ ರಾತ್ರಿಗಳಲ್ಲಿ ನಡೆಯುವ ವೃತ್ತಾಂತಗಳನ್ನೂ ಮನಸ್ಸಿನಲ್ಲಿ ಯೋಚಿಸಿದ ಯೋಚನೆಗಳನ್ನೂ ತಿಳಿಯುವಂತೆ ಅನುಗ್ರಹಿಸಿ, ಅವೆಲ್ಲವನ್ನೂ ದೊರೆಗೆ ತಿಳಿಯಪಡಿಸೆಂದು ಅಪ್ಪಣೆಮಾಡಿದನು. ಯುದ್ಧದ ಫಲಿತಾಂಶವೋ ಎಂದರೆ ಧರ್ಮವು ಯಾರಪಕ್ಷದಲ್ಲಿರುವುದೋ ಅವರಿಗೆ ವಿಜಯವುಂಟಾಗುವುದು ಎಂದು ಹೇಳಿದನು. ಪಾಂಡವರಿಗೆ ಸಂಭವಿಸಿದ ರೀತಿಯಲ್ಲಿ ಮೊದಲು ಅಧರ್ಮಪಕ್ಷದಲ್ಲಿಯೇ ವಿಜಯವುಂಟಾಗುವ ರೀತಿಯಲ್ಲಿ ತೋರಿದರೂ ಕೊನೆಗೆ ಸತ್ಯಧರ್ಮಗಳೇ ವಿಜಯವನ್ನು ಹೊಂದುವುವು. ಪಾಂಡವರ ಸೈನ್ಯಕ್ಕಿಂತಲೂ ಕೌರವರ ಸೈನ್ಯವು ಒಂದೂವರೆಗಿಂತ ಜಾಸ್ತಿದಾಗಿದ್ದರೂ ಪಾಂಡವರೇ ಜಯವನ್ನು ಹೊಂದುವವರಾದರು. ಮೊದಲೊಂದು ಯುದ್ಧದಲ್ಲ ಬ್ರಹ್ಮನು ಹೇಳಿದ ವಚನಗಳನ್ನು ಅರ್ಜುನನು ಯುದ್ಧಕ್ಕೆ ಸೇನೆಗಳನ್ನನುವುಮಾಡುವಲ್ಲಿ ಹೀಗೆ ಹೇಳಿದನು. "ಜಯ ಹೊಂದಬೇಕೆಂದಪೇಕ್ಷಿಸುವವರು ಸತ್ವದಯಾಧರ್ಮಗಳಿಂದಲೇ ಗೆಲ್ಲುವರೇ ಹೊರತು ಬಲಪರಾಕ್ರಮಗಳಿಂದ ಅಷ್ಟಾಗಿ ಗೆಲ್ಲರು. ಆದುದರಿಂದ ಧರ್ಮಾಧರ್ಮಗಳ ಲಕ್ಷಣಗಳನ್ನು ತಿಳಿದು ಲೋಭದ ಪ್ರಕಾರವಿಂತಹುದೆಂದು ತಿಳಿದು ಕೃತಪ್ರಯತ್ನರಾಗಿ ಗರ್ವವನ್ನು ಬಿಟ್ಟು ಯುದ್ಧಮಾಡಿರಿ. ಏಕೆಂದರೆ ಧರ್ಮವಿದ್ದಕಡೆ ವಿಜಯ ಕೈ ಸೇರುವುದು." ನಾರದನೂ ಕೃಷ್ಣನಿದ್ದಕಡೆ ಜಯವುಂಟಾಗುವುದೆಂದು ಹಿಂದೆಯೇ ಹೇಳಿದ್ದನು.

ಅನಂತರ ರುಕ್ಮಿಣೀಕಾಂತನು ಜಯಪ್ರದಾಯಿನಿಯಾದ ದುರ್ಗಾದೇವಿಯನ್ನು ಸ್ತೋತ್ರಮಾಡೆಂದು ಅರ್ಜುನನಿಗೆ ಅಪ್ಪಣೆಮಾಡಲು ಅತನು ಪರಾಜಯವುಂಟಾಗದಂತೆ ಭಕ್ತರ ಅಪತ್ತುಗಳನ್ನು ತೊಲಗಿಸಿ ಕಾಪಾಡುವ ಆ ದೇವಿಯನ್ನು ಸ್ತೋತ್ರ

ಮಾಡಲು ಆ ಮಹಾದೇವಿಯು ಪ್ರಸನ್ನಳಾಗಿ ನಿನ್ನ ಶತ್ರುಗಳನ್ನು ಗೆಲ್ಲತಕ್ಕವನಾಗುವಿ. ಎಂದು ಅರ್ಜುನನಿಗೆ ವರವನ್ನು ಕೊಟ್ಟು ಹೊರಟುಹೋದಳು. ಕೇಶವನು ಸಾರಥ್ಯ ವನ್ನು ವಹಿಸಲು ನರನು ರಥಾರೂಢನಾದನು.

ಹೀಗೆ ಕೇಶವನು ರಥವನ್ನು ನಡೆಸುತ್ತಿರಲು ಅರ್ಜುನನು ಉಭಯ ಸೇನೆಗಳ ನಡುವೆ ಬಂದು ಮನಸ್ಸಿನಲ್ಲಿ ಹೆಚ್ಚಾದ ವ್ಯಥೆಯನ್ನು ಹೊಂದಿ ವಿಷಣ್ಣಚಿತ್ತನಾಗಿ ರಥದಮೇಲೆ ಒರಗಿದನು. ಸ್ವಾಭಾವಿಕವಾಗಿ ಧೀರನಾದ ಆತನ ಚಿತ್ತವು ವಿಹ್ವಲ ವಾದುದು. ಶತ್ರುಸೈನ್ಯಗಳನ್ನು ನೋಡುವುದರಿಂದುಂಟಾದ ಭಯದಿಂದಲಾಗಲೀ ಮೃತ್ಯುವಿಗೆ ಭಯಪಟ್ಟುದರಿಂದಾಗಲೀ ಯುದ್ಧಮಾಡಲು ಶಕ್ತಿಯಿಲ್ಲದೆಯಾಗಲೀ ಉಂಟಾದುದಲ್ಲ. ತಂದೆಗಿಂತಲೂ ಶ್ರೇಷ್ಠನಾದ ಭೀಷ್ಮನನ್ನು ನೋಡಿದುದರಿಂದಲೂ ಮತ್ತು ಮುಖ್ಯ ಗುರುವಾದ ದ್ರೋಣನನ್ನೂ ಅಲ್ಲಿದ್ದ ಬಂಧುಗಳನ್ನೂ, ಹಿತರನ್ನೂ, ಬಾಲ್ಯಸ್ನೇಹಿತರನ್ನೂ ನೋಡಿ ಇವರೆಲ್ಲರನ್ನೂ ಕೊಲ್ಲಬೇಕಾಯಿತಲ್ಲಾ ಎಂದು ಆತನು ಖಿನ್ನನಾದನು ಹೀಗೆ ಅರ್ಜುನನು ಮನಸ್ಸಿನಲ್ಲಿ ವಿಷಾದ ಹೊಂದಿ ದೈನ್ಯ ದಿಂದ ನಾನು ಯುದ್ಧಮಾಡಲೊಲ್ಲೆನೆಂದು ಹೇಳಿ ಬಿಲ್ಲನ್ನು ಕೆಳಗೆ ಹಾಕಿದನು. ಭಗ ವಂತನಾದ ಶ್ರೀ ಕೃಷ್ಣನು ಆತನ ಮನಸ್ಸಿನ ಕಳಂಕವನ್ನು ಹೋಗಲಾಡಿಸುವುದ ಕ್ಕಾಗಿ ಲೋಕೋತ್ತರವಾದ ಪರಮೋಪದೇಶವನ್ನು ಮಹಾದ್ಭುತಕರವಾಗಿ ದಿವ್ಯ ಗೀತಾರೂಪದಿಂದ ಉಪದೇಶಿಸಿದನು. ಅದೇ ಭಗವದ್ಗೀತೆಯೆನ್ನಲ್ಪಡುವುದು. ಭಗವಂ ತನು ಅದನ್ನು ಹೇಳಿ ಈಗ್ಯೆ ಐದುಸಾವಿರ ಸಂವತ್ಸರಗಳಾಗಿದ್ದಾಗ್ಯೂ ಅನೇಕ ಜನ ಗಳು ಅದನ್ನು ಇತರರಿಗೆ ಉಪದೇಶಮಾಡುತ್ತಾ ಬಂದಿರುವರು. ಮತ್ತು ಕಳವಳ ಹೊಂದಿದ ಅನೇಕರ ಮನಸ್ಸಿಗೆ ಅದು ದಿವ್ಯೌಷಧವಾಗಿರುವುದು.

ಆ ಸಮಯದಲ್ಲಿ ಒಂದು ಆಶ್ಚರ್ಯವುಂಟಾಯಿತು. ಎರಡುಪಕ್ಷದವರೂ ಯುದ್ಧಕ್ಕೆ ಸನ್ನದ್ಧರಾಗಿ ನಿಂತಿರಲು ಯುಧಿಷ್ಠಿರನು ತನ್ನ ಆಯುಧಗಳನ್ನು ಕೆಳಗೆ ಹಾಕಿ ಕವಚವನ್ನು ತೆಗೆದುಹಾಕಿ ಕೈಗಳನ್ನು ಜೋಡಿಸಿಕೊಂಡು ಶತ್ರುಸೇನೆಯ ಬಳಿಗೆ ಹೋದನು. ಅದನ್ನು ನೋಡಿ ಅರ್ಜುನನು ರಥದಿಂದ ಕೆಳಕ್ಕೆ ಧುಮುಕಿ ಅಣ್ಣ ನನ್ನು ಹಿಂಬಾಲಿಸಿ ಓಡಿದನು. ಉಳಿದ ತಮ್ಮಂದಿರೂ ಕೃಷ್ಣನೂ ಎಲ್ಲಾ ರಾಜರು ಗಳೂ ಆತನ ಹಿಂದೆ ಹೊರಟು ಎಲ್ಲಿ ಹೋಗುತ್ತಿರುವಿರೆಂದು ಅವರನ್ನು ಗಟ್ಟಿಯಾಗಿ ಕೂಗುತ್ತಾ ಓಡಿಹೋಗುತ್ತಿರುವ ಸಮಯದಲ್ಲಿ ಶ್ರೀ ಕೃಷ್ಣನು ಮಂದಹಾಸದಿಂದ

ಕೂಡಿ ಆ ನರಶ್ರೇಷ್ಠನ ಮನೋಗತವನ್ನು ನಾನು ಬಲ್ಲೆನು ಎಂದು ಹೇಳಿ ಅದನ್ನು ಎಲ್ಲರಿಗೂ ತಿಳಿಸುತ್ತಿದ್ದನು. ಶತ್ರುಸೇನೆಗಳವರು ಆತನನ್ನು ನೋಡಿ ಛೀ! ಈತನು ಭಯದಿಂದ ಶರಣಾಗತನಾಗಿ ಬಂದಿರುವನೆಂದು ಪರಿಹಾಸಮಾಡುತ್ತಿದ್ದರು. ಹೀಗೆ ಎಲ್ಲರೂ ಸುಮ್ಮನಿರಲು ಧರ್ಮಜನು ನಿರಾಯುಧನಾಗಿ ಆಯುಧಸಜಿತರಾದ ಶತ್ರು ಸೇನೆಗಳ ಮಧ್ಯೆ ಹೊರಟು ಭೀಷ್ಮನ ಸಮೀಪವನ್ನು ಸೇರಿ ಆತನ ಪಾದಗಳನ್ನು ಹಿಡಿದುಕೊಂಡು ‹‹ಅಜೇಯನಾದ ಮಹಾತ್ಮನೇ! ನಿನಗೆ ನಮಸ್ಕಾರ ಮಾಡುತಿರುವೆನು. ನಾವು ನಿನಗೆ ಇದಿರಾಗಿ ನಿಂತು ಯುದ್ಧಮಾಡಲು ಅಪ್ಪಣೆಕೊಡು; ನಮ್ಮಗಳನ್ನಾಶೀರ್ವದಿಸು'' ಎಂದು ಹೇಳಿದನು. ಭೀಷ್ಮನು ಆತನಿಗೆ ವಿಜಯವುಂಟಾಗುವಂತೆ ಅನುಗ್ರಹಿಸಿ ಧರ್ಮನಂದನಾ! ಕೌರವರಿಂದ ಸಕಲ ಸಂಪತ್ತುಗಳನ್ನು ಹೊಂದಿದೆನಾದಕಾರಣ ನಾನು ಅವರ ಪಾಲಿನವನು. ಯುದ್ಧವನ್ನು ಬಿಟ್ಟು ಬೇರೆ ನಿನಗಭಿಮತವಾದ ವರವನ್ನು ಕೋರು ಕೊಡುವೆನೆನ್ನಲು, ಧರ್ಮಜನು ಸಾವಧಾನದಿಂದ ಕೂಡಿ ನಿನ್ನನ್ನು ಗೆಲ್ಲುವವರಾರೆಂದು ಕೇಳಲು ಗಾಂಗೇಯನು ಕೌಂತೇಯನೊಡನೆ ನಾನು ಯುದ್ಧಮಾಡುತಿರುವವರೆಗೂ ಯಾರೂ ನನ್ನನ್ನು ಗೆಲ್ಲಲಾರರೆಂದು ಹೇಳಿದನು. ಧರ್ಮನಂದನನು ನಿನ್ನನ್ನು ಸಂಹರಿಸುವ ಬಗೆ ಹೇಗೆಂದು ಕೇಳಲು ನನಗೆ ಮರಣ ಸಮಯವಿನ್ನೂ ಬಂದಿಲ್ಲ. ಮತ್ತೊಂದುವೇಳೆ ನನ್ನ ಬಳಿಗೆ ಬಂದಲ್ಲಿ ತಿಳಿಸುವೆನು, ಹೋಗು, ಎಂದು ಹೇಳಿಕಳುಹಿಸಿದನು. ಧರ್ಮಜನು ದ್ರೋಣನ ಬಳಿಗೆ ಹೋಗಿ ನಮಸ್ಕರಿಸಿ ಆತನನ್ನು ಕೊಲ್ಲುವ ಉಪಾಯವೇನೆಂದು ಕೇಳಲು ಆ ಗುರುವರನಿಂತೆಂದನು—ನಾನು ದುಃಖವಾರ್ತೆಯನ್ನು ಕೇಳಿ ಅಸ್ತ್ರಗಳನ್ನು ಕೆಳಗೆ ಹಾಕಿ ಯೋಗಾನುಸಂಧಾನಮಾಡುತ್ತಿರುವಲ್ಲಿ ವಧ್ಯನಾಗುವೆನು—ಎನ್ನಲು ಕುಂತೀನಂದನನು ಕೃಪಶಲ್ಯರ ಬಳಿಗೆ ಹೋಗಿ ಅವರುಗಳಿಗೆ ನಮಸ್ಕರಿಸಿ ಅವರ ಆಶೀರ್ವಾದಗಳನ್ನು ಹೊಂದಿ ತನ್ನ ಸೇನೆಯ ಬಳಿಗೆ ಬಂದನು. ಸರ್ವರೂ ಪಾಂಡವರ ವಿನಯವನ್ನೂ ಉತ್ತಮ ಗುಣಗಳನ್ನೂ ಹೆಚ್ಚಾಗಿ ಶ್ಲಾಘಿಸಿದರು.

ಬಳಿಕ ದಾರುಣವಾದ ಯುದ್ಧವು ಸಂಪ್ರಾಪ್ತವಾಗಲು ಭೀಷ್ಮನು ಬಾಣ ಪ್ರಯೋಗಗಳಿಂದ ಯೋಧಾಗ್ರೇಸರರನೇಕರ ತಲೆಗಳನ್ನು ಛೇದಿಸಿ ಕೊಂದು ಮಹಾ ತೇಜಸ್ಸಿನಿಂದ ಪ್ರಕಾಶಿಸಿದನು. ವಿರಾಟನ ಪುತ್ರನಾದ ಉತ್ತರನು ಮಡಿಯಲು ಅವನ ಅಗ್ರಜನಾದ ಶ್ವೇತನು ಕೋಪವುಕ್ಕುತ್ತಿರಲು ಶತ್ರುಗಳಮೇಲೆ ಉರವಣಿಸಿ

ಅವರನ್ನು ಓಡಿಸಲು ಭೀಷ್ಮನು ಅವನಿಗಿದಿರಾಗಿ ಬಂದು ಮಹೋಗ್ರಸಂಗ್ರಾಮವನ್ನು ಮಾಡಿ ಆ ಶ್ವೇತನನ್ನು ಸಂಹರಿಸಲು ಆತನ ಮರಣದೊಡನೆ ಆ ದಿನದ ಯುದ್ಧವು ಮುಗಿಯಿತು. ಮರುದಿನ ಪಾಂಡವರು ಭೀಷ್ಮನ ಭೀಕರಗಳಾದ ಬಾಣವರ್ಷಗಳಿಗೆ ಪರಾಜಿತರಾಗಿ ಓಡುತ್ತಿರಲು ಅರ್ಜುನನು ಖತಿಗೊಂಡು ಆ ವೀರನಮೇಲೆ ರಥ ನಡೆಯಿಸೆಂದು ಕೃಷ್ಣನಿಗೆ ಹೇಳಲು ಆತನು ಧವಳತುರಂಗಗಳಿಂದ ಅಲಂಕೃತವಾದ ರಥವನ್ನು ಭೂಮಿಯು ನಡಗುವಂತೆ ನಡೆಯಿಸಲು ಭೀಷ್ಮಾರ್ಜುನರಿಗೆ ಘೋರವಾದ ಸಂಗ್ರಾಮವೊದಗಿತು. ಅವರು ಬಹುಕಾಲ ಯುದ್ಧಮಾಡಿದಾಗ್ಯೂ ಯಾರಿಗೂ ಜಯವುಂಟಾಗಲಿಲ್ಲ. ಪಕ್ಕಗಳಲ್ಲಿದ್ದ ಯೋಧರು ಒಬ್ಬರಸಂಗಡ ಒಬ್ಬರು ಮಹಾಹವವನ್ನು ಮಾಡುತ್ತಿದ್ದರು. ಕೂಡಲೇ ಭೀಷ್ಮನು ಭೀಮನಿಂದ ಪೆಟ್ಟುತಿಂದ ತನ್ನ ಸೇನೆಯನ್ನು ಕಾಪಾಡುವುದಕ್ಕಾಗಿ ಹೊರಡಲು ಅಷ್ಟರಲ್ಲಿಯೇ ಆತನ ಸಾರಥಿಯು ನೆಲದಲ್ಲಿ ಬಿದ್ದನು. ಕುದುರೆಗಳು ಕಳಚಿ ತಪ್ಪಿಸಿಕೊಂಡು ಓಡಿದವು. ಅನಂತರ ನಿರುದ್ಯೋಗಿಯಾದ ಅರ್ಜುನನು ಯೋಧಾಗ್ರೇಸರನಾದ ತನ್ನ ಪುತ್ರನಾದ ಅಭಿಮನ್ಯುವನ್ನು ಅಪಾಯದಿಂದ ತಪ್ಪಿಸಿ ರಣರಂಗದಲ್ಲೆಲ್ಲೆಲ್ಲಿಯೂ ತಾನೇ ಆಗಿ ವೈರಿನಿಕರವನ್ನು ಚದರಿಸಿ ಮಹಾ ಪರಾಕ್ರಮವನ್ನು ತೋರಿಸುತ್ತಿದ್ದನು. ಅಷ್ಟರಲ್ಲಿ ಸೂರ್ಯನು ಪಶ್ಚಿಮಸಮುದ್ರವನ್ನು ಸೇರಲು ಕತ್ತಲೆಯು ಹಬ್ಬಿ ಓಡಿಹೋಗುತ್ತಿದ್ದ ಕೌರವರನ್ನು ಅರ್ಜುನನ ಬಾಣಗಳ ದೆಸೆಯಿಂದ ಕಾಪಾಡಿತು. ಮೂರನೆಯದಿನ ಪುನಃ ಕೌರವರು ಅರಿಬಲಕ್ಕೆ ಬೆನ್ನನ್ನು ಕೊಟ್ಟು ಓಡುತ್ತಿರಲು ಭೀಷ್ಮನು ಅದನ್ನು ನೋಡಿ ರೌದ್ರಾಕಾರನಾಗಿ ಪರಾಕ್ರಮದಿಂದ ಪಾಂಡವರಿಗಿದಿರಾಗಿ ಶರವರ್ಷವನ್ನು ಕರೆಸುತ್ತಾ ಮೇಲಾದನು. ಅಷ್ಟರಲ್ಲಿ ಪಾಂಡವರ ಸೈನ್ಯವು ಚದರಿಹೋಗುತ್ತಿರಲು ಕೇಶವನು ತನ್ನ ಚುರುಕಾದ ಕುದುರೆಗಳನ್ನು ಉರವಣಿಸಿ ಹೊಡೆಯಲು ಅರ್ಜುನನು ಪುನಃ ಪಿತಾಮಹನಿಗಿದಿರಾಗಿ ಯುದ್ಧಮಾಡುತ್ತಾ ಶೌರ್ಯವನ್ನು ತೋರಿಸುತ್ತಿದ್ದನು. ಕೃಷ್ಣನು ಅತನಿಗುತ್ಸಾಹವುಂಟುಮಾಡಬೇಕೆಂದು ಯೋಚಿಸಿ ಚಕ್ರವನ್ನು ಕೈಯಲ್ಲಿ ಹಿಡಿದುಕೊಂಡು ಝಳಪಿಸುತ್ತಾ ತೇರಿನಿಂದ ಭೂಮಿಯಮೇಲಕ್ಕೆ ಧುಮುಕಿ ಭೀಷ್ಮನಮೇಲೆ ನೆಗೆಯಲು ಆ ವೀರೋತ್ತಂಸನು ಮಹಾ ಸಂತೋಷಹೊಂದಿ ಗೌರವದಿಂದಿಂತು ಹೇಳಿದನು. 'ದೇವಾ! ನಿನ್ನಿಂದ ನಾನು ಸಂಹರಿಸಲ್ಪಟ್ಟೆನಾದರೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಅದಕ್ಕಿಂತ ಹೆಚ್ಚಾದ ಶುಭವು ನನಗೆ ಮತ್ತೇನೂ ಇಲ್ಲ.' ಎಂದು ವಿಜ್ಞಾಪಿಸಲು ಇಂದ್ರಾತ್ಮಜನು ನಾಚಿಕೆಪಟ್ಟು ಆತನ ಹಿಂದೆ ಹೋಗಿ ತನ್ನ ಕೈಗ

ಳಿಂದ ಆತನನ್ನು ಭದ್ರವಾಗಿ ಹಿಡಿದು ಹಿಂದಕ್ಕೆ ಉಪ್ಪಳಿಸಿ ನಾನು ಇನ್ನು ಚಾತು ರ್ಯದಿಂದ ಯುದ್ದಮಾಡುವೆನು ನೋಡೆನ್ನಲು ಮಾಧವನು ಪುನಃ ಹಗ್ಗಗಳನ್ನು ಕೈ ಯಲ್ಲಿ ಹಿಡಿದುಕೊಂಡನು. ಅರ್ಜುನನು ಅವಕ್ರಪರಾಕ್ರಮದಿಂದ ಯುದ್ಧಮಾಡುತ್ತಿ ರಲು ಶತ್ರುಸೇನೆಯು ಪಲಾಯನಮಾಡುತ್ತಿರಲು ಸೂರ್ಯನಸ್ತಂಗತನಾದನು. ಹೀಗೆ ಪ್ರತಿ ದಿನವೂ ಆ ಯೋಧಾಗ್ರೇಸರರು ಒಬ್ಬರಮೇಲೊಬ್ಬರು ಉರವಣಿಸುತ್ತಿರಲು ಒಂದೊಂದುವೇಳೆ ಒಬ್ಬೊಬ್ಬರ ಕಡೆ ವಿಜಯವುಂಟಾಗುತ್ತಿತ್ತು. ಆದರೂ ಭೀಷ್ಮನು ಯಾವ ದಿಕ್ಕಿನಲ್ಲಿ ನಿಂತು ಯುದ್ಧಮಾಡುವನೋ ಆ ಕಡೆಯಲ್ಲಿ ಪಾಂಡವರಿಗೆ ಪರಾ ಜಯವೇ ಉಂಟಾಗುತ್ತಿದ್ದಿತು. ಆ ವೀರಶ್ರೇಷ್ಠನು ಒಂದು ದಿನಕ್ಕೆ ಹತ್ತು ಸಾವಿರ ಮಂದಿ ಸೈನಿಕರನ್ನು ಸಂಹರಿಸುತ್ತಾ ಅರಣ್ಯ ಮಧ್ಯದಲ್ಲಿ ಪ್ರಜ್ವಲಿಸುವ ವೀತಿ ಹೋತ್ರನ ಹಂದದಲ್ಲಿ ಪ್ರಕಾಶಿಸುತ್ತಾ ವೈರಿಗಳನ್ನು ನಾಶಮಾಡುತ್ತಿದ್ದನು. ಒಂಭ ತ್ತನೆಯ ದಿನ ಮಹಾಸತ್ವಶಾಲಿಯಾದ ಆ ಭೀಷ್ಮನು ಮೊದಲಿಗಿಂತಲೂ ನೋಡಲಶಕ್ಯ ವಾದ ಭೀಕರವಾದ ಆಕಾರವನ್ನು ಹೊಂದಿ ಪಾಂಡವರಿಗಿದಿರಾಗಿ ಹೋರುತ್ತಿರಲು ಇವರಿಗೆ ಕೊನೆಗೆ ಪರಾಜಯವೇ ಉಂಟಾಗುವಂತೆ ತೋರುತ್ತಿತ್ತು. ಅಷ್ಟರಲ್ಲಿ ಸಾಯಾಹ್ನ ಸಮಯವಾಗುತ್ತಿರಲು ಕಮಲಲೋಚನನು ಯುದ್ಧಮಾಡುವುದರಲ್ಲಿ ಶಕ್ತಿಕುಂದಿದ್ದ ಅರ್ಜುನನನ್ನು ನೋಡಿ ಕಠಿಣವಾದ ವಚನಗಳಿಂದ ನಿಂದಿಸಲು ಆತನು ಅರ್ಧಾಂಗೀಕಾರದಿಂದ ಆ ಶೂರವರನೊಡನೆ ಯುದ್ಧಕ್ಕೆ ನಿಂತನು. ಅದನ್ನು ನೋಡಿ ಮಾಧವನು ತನ್ನ ಸ್ನೇಹಿತನಿಗುಂಟಾದ ಅವಮಾನವನ್ನು ಯೋಚಿಸದೇ ಕಶಾಪಾಣಿ ಯಾಗಿ ರಥದಿಂದ ಕೆಳಕ್ಕೆ ದುಮುಕಿ ಪೀತಾಂಬರ ಮಾತ್ರವನ್ನೇ ಧರಿಸಿದವನಾಗಿ ದ್ದರೂ ಭೀಷ್ಮನೊಡನೆ ಹೋರಲು ಯತ್ನಿಸಿದನು. ಆ ಸಮಯದಲ್ಲಿ ಆ ವೀರಕುಲಾವತಂ ಸನು ಆ ದೇವನಿಂದ ಮರಣವನ್ನಾಶಿಸುತ್ತ ಹೀಗೆಂದನು.—ಅನಘಾ ! ನಾನು ನಿನ್ನ ದಾಸನು. ನಿನ್ನ ಇಷ್ಟಬಂದರೀತಿಯಲ್ಲಿ ನನ್ನನ್ನು ಸಂಹರಿಸು. ಎಂದು ಹೇಳುತ್ತಿರಲು ಅರ್ಜುನನು ಪುನಃ ನಾಚಿಕೊಂಡು ಕೃಷ್ಣನನ್ನು ನಿರೋಧಿಸುತ್ತ ಹೀಗೆಂದನು— “ಮಹಾಬಾಹುವೇ ! ನಿಲ್ಲು. ನಾನು ಯುದ್ಧ ಮಾಡುವುದಿಲ್ಲವೆಂದು ಮೊದಲು ನೀನು ಹೇಳಿದ ಮಾತುಗಳನ್ನು ಈಗ ಸುಳ್ಳಾಗಿ ಮಾಡದಿರು. ಹಾಗೆ ಮಾಡಿದಲ್ಲಿ ಜನ ಗಳು ಅಸತ್ಯವಾದಿಯೆಂದು ನಿನ್ನನ್ನು ದೂಷಿಸುವರು. ಈ ಭಾರವೆಲ್ಲವೂ ನನ್ನ ಮೇಲಿ ರುವುದರಿಂದ ನಾನೇ ಈತನನ್ನು ವಧೆಮಾಡುವೆನು. ಅರಿನಿಷೂದನನಾದ ಕೇಶವ ! ನನ್ನ ಆಯುಧಗಳ ಸಾಕ್ಷಿಯಾಗಿಯೂ, ನನ್ನ ಸತ್ಯದ ಸಾಕ್ಷಿಯಾಗಿಯೂ, ನನ್ನ

ಸತ್ಕರ್ಮಗಳ ಸಾಕ್ಷಿಯಾಗಿಯೂ ನನ್ನ ವೈರಿಗಳು ನಾಶವಾಗುವುದಕ್ಕಾಗಿ ಮಾಡ ಬೇಕಾದ ಕಾರ್ಯಗಳನ್ನೆಲ್ಲಾ ಮಾಡುವೆನೆಂದು ಶಪಥಮಾಡುತ್ತಿರುವೆನು.'' ಇದನ್ನು ಕೇಳಿ ಕೇಶವನು ಕ್ರೋಧಾವಿಷ್ಟನಾಗಿ ರಥವನ್ನು ಹತ್ತಲು ಭೀಷ್ಮನು ಎಂದಿನಂತೆಯೇ ಜಯಹೊಂದುತ್ತಿದ್ದನು. ಅಷ್ಟರಲ್ಲಿ ಅಸ್ತಮಯ ಸಮಯವಾಗಲು ಒಂಭತ್ತನೆಯ ದಿನದ ಯುದ್ಧವು ಮುಗಿಯಿತು.

ಆದಿನರಾತ್ರಿ ಧರ್ಮನಂದನನು ತನ್ನ ಸೈನ್ಯವು ನಾಶವಾದುದಕ್ಕಾಗಿ ಹೆಚ್ಚಾಗಿ ವ್ಯಥೆಪಡುತ್ತಿರಲು, ಕೇಶವನು ಆ ಮಾತುಗಳನ್ನು ಕೇಳಿ ಆ ಶೂರೋತ್ತಂಸನನ್ನು ತಾನೇ ಸಂಹರಿಸುವೆನೆಂದು ಹೇಳುತ್ತಿರಲು, ಧರ್ಮಜನು ಸತ್ಯಪರಾಯಣನಾಗಿ ಕೃಷ್ಣನನ್ನು ಕುರಿತು ‘‘ಹಾಗೆ ಮಾಡತಕ್ಕುದು ಸಲ್ಲದು. ಭೀಷ್ಮನು ನಮಗೆ ಇಷ್ಟಕ್ಕೆ ಮೊದಲೇ ಹಿತವನ್ನು ತಿಳಿಸುವೆನೆಂದು ಹೇಳಿರುವನು ; ಅತನನ್ನು ವಧೆಮಾ ಡುವ ಉಪಾಯವನ್ನು ಅತನೇ ನಮಗೆ ತಿಳಿಸುವನಾದುದರಿಂದ ನಾವೆಲ್ಲರೂ ಅತನ ಬಳಿಗೆ ಹೋಗಿ ಹಿತವೇನೆಂಬುದನ್ನು ಕೇಳೋಣ'' ಎಂದು ಹೇಳಿ ಪುನಃ ಧರ್ಮಜನು ಹೆಚ್ಚಾದ ದುಃಖದಿಂದ ಕೂಡಿದವನಾಗಿ ‘‘ನಾವು ಬಾಲಕರಾಗಿ ಅನಾಥರಾಗಿರು ವಾಗ ಅತನು ನಮ್ಮನ್ನೆತ್ತಿ ಸಾಕಿದನು. ಅಂತಹ ಪಿತಾಮಹನನ್ನು ಈಗ ನಾನು ಕೊಲ್ಲಲು ಯತ್ನಿಸಬೇಕಾಗಿಬಂತು ; ಅಕ್ಕಟಾ! ಕ್ಷತ್ರಿಯ ಧರ್ಮವನ್ನು ಸುಡಬೇಕು.'' ಎಂದು ಹೇಳಲು ಮಾಧವನೂ ಪಾಂಡವರೈವರೂ ಆ ಬಳಿಕ ಕವಚವನ್ನೂ ಆಯುಧ ಗಳನ್ನೂ ತೆಗೆದಿಟ್ಟು ಭೀಷ್ಮನನ್ನು ವಧೆಮಾಡಲು ಉಪಾಯವನ್ನು ತಿಳಿಯುವುದಕ್ಕಾಗಿ ಅತನ ಬಳಿಗೆ ಹೋದರು. ಇದು ಈ ಕಾಲದವರಿಗೆ ಎಷ್ಟೋ ಆಶ್ಚರ್ಯಕರವಾಗಿ ತೋರುವುದು. ಭೀಷ್ಮನು ಅವರುಗಳನ್ನು ಆದರದಿಂದ ಬರಮಾಡಿಕೊಳ್ಳಲು ಯುಧಿ ಷ್ಠಿರನು ನಿನ್ನನ್ನು ಯುದ್ಧದಲ್ಲಿ ಸೋಲಿಸಿ ಸಂಹರಿಸುವುದಕ್ಕೆ ಉಪಾಯವೇನೆಂದು ಕೇಳಲು ಭೀಷ್ಮನು ಅತನನ್ನು ಕುರಿತು, ನಿಮಗಿಷ್ಟಬಂದಂತೆ ನೀವು ಬಾಣಗಳನ್ನು ಪ್ರಯೋಗಿಸಿದರೂ ನನ್ನ ಶರೀರದಲ್ಲಿ ಪ್ರಾಣಗಳಿರುವವರೆಗೂ ನೀವು ನನ್ನನ್ನು ಸೋಲಿ ಸಲಾರಿರಿ.' ಎಂದು ಹೇಳಿದನು. ‘ಹಾಗಾದಲ್ಲಿ ನಿನ್ನನ್ನು ನಾವು ವಧೆಮಾಡಲಾರೆವಲ್ಲ ವೇ?' ಎಂದು ಯುಧಿಷ್ಠಿರನು ಲಲಿತವಚನಗಳಿಂದ ವಿಜ್ಞಾಪಿಸಲು ಸುರನದೀತನಯನು ತನ್ನನ್ನು ಕೊಲ್ಲುವ ಉಪಾಯವಿಂತಹುದೆಂದು ಅವರಿಗೆ ತಿಳಿಯಪಡಿಸಿದನು. ಹೇಗೆಂ ದರೆ–ಅವರಂತಹ ಮನುಷ್ಯರಿಗೆ ಈಶ್ವರೇಚ್ಛೆಯೇ ತಮ್ಮ ಇಚ್ಛೆಯಾದುದರಿಂದ ಅವರು ತಮ್ಮನ್ನು ಈಶ್ವರಾಧೀನವಾಗಿ ತಿಳಿಯುತ್ತಾ ಎಂತಹ ವಿಚಾರದಲ್ಲಿಯೂ ಆಶೆಯನ್ನು

ಬಿಟ್ಟಿರುವರು. ‹‹ ನಿಮ್ಮ ಸೈನ್ಯದಲ್ಲಿರುವ ಶಿಖಂಡಿಯೆಂಬ ಯೋಧಾಗ್ರೇಸರನು ಮೊದಲು ಸ್ತ್ರೀಯಾಗಿದ್ದನಾದುದರಿಂದ ಆತನೊಡನೆ ನಾನು ಯುದ್ಧಮಾಡಲಿಷ್ಟ ಪಡೆನು. ಅರ್ಜುನನು ಶಿಖಂಡಿಯನ್ನು ಮುಂದಿಟ್ಟುಕೊಂಡು ಬಂದನಾದರೆ ನಾನು ಅಸ್ತ್ರಗಳನ್ನು ಮುಟ್ಟೆನು ; ಆ ಸಮಯದಲ್ಲಿ ನರನು ಶರಪರಂಪರೆಗಳಿಂದ ನನ್ನನ್ನು ಹೊಡೆಯಲಿ ’’ ಇದನ್ನು ಕೇಳಿ ಅರ್ಜುನನು ಮನಸ್ಸಿನಲ್ಲಿ ಹೆಚ್ಚಾದ ವ್ಯಾಕುಲವನ್ನು ಹೊಂದಿದವನಾಗಿ ಮುಖದಲ್ಲಿ ಲಜ್ಜೆ ತೋರುತಿರಲು, ವಾಸುದೇವನನ್ನು ಕುರಿತು ‹‹ ನನಗಿಂತಲೂ ಎಷ್ಟೋ ದೊಡ್ಡವನೂ ಉತ್ತಮಜ್ಞಾನವಂತನೂ ನಮ್ಮ ಕುಲದಲ್ಲೆಲ್ಲಾ ವೃದ್ಧನೂ ಆದ ಸಮ್ಮಜ್ಜನಿಗಿದಿರಾಗಿ ನಾನು ಹೇಗೆಹೋರಲಿ? ನಾನು ಬಾಲ್ಯಕ್ರೀಡೆಮಾಡುತ್ತಿರುವಲ್ಲಿ ಮಹಾಭಾಗನಾದ ಈ ಮಹಾತ್ಮನ ಶರೀರದ ಮೇಲೆ ಧೂಳಿಧೂಸರಿತಗಳಾದ ಅವಯವಗಳುಳ್ಳ ನಾನು ಹತ್ತಿ ಈತನ ಶರೀರವನ್ನು ಧೂಳಿನಿಂದ ಲೇಪಮಾಡುತ್ತಿದ್ದೆನು. ಅದೂ ಅಲ್ಲದೆ ಈತನು ನನ್ನ ತಂದೆಯಾದ ಪಾಂಡುರಾಜನಿಗ ತಂದೆಯಾಗಿರುವನು. ಒಂದುದಿನ ನಾನು ಚಿಕ್ಕವಯಸ್ಸಿನವನಾಗಿರುವಾಗ ಈತನ ಶರೀರದಮೇಲೆ ಹತ್ತುತ್ತಾ ಅಪ್ಪಾ ! ಎಂದು ಕರೆಯಲು ಈತನು ನಾನು ನಿನಗೆ ತಂದೆಯಲ್ಲ ; ನಿನ್ನ ತಂದೆಯ ತಂದೆಯಾಗಿರುವೆನೆಂದನು. ಇಂತಹ ಈತನನ್ನು ನಾನು ಕೊಲ್ಲಬೇಕಾಯಿತೆ? ಅಕ್ಕಟಾ ! ನನ್ನ ಸೈನ್ಯಗಳು ನಾಶಹೊಂದಿದರೂ ಹೊಂದಲಿ. ನನಗೆ ಮರಣಪ್ರಾಪ್ತವಾದರೂ ಜಯವುಂಟಾದರೂ ಯಾವ ಸಂದರ್ಭದಲ್ಲಿಯೂ ನಾನು ಈ ಮಹಾತ್ಮನೊಡನೆ ಯುದ್ಧಮಾಡಲೊಲ್ಲೆನು. ಕೃಷ್ಣಾ ! ನಿನ್ನ ಅಭಿಪ್ರಾಯವೇನು ?’’ ಎನ್ನಲು ದಾಮೋದರನು ಅರ್ಜುನನನ್ನು ಕುರಿತು ಗಂಭೀರವಚನಗಳಿಂದ ‹‹ ಭೀಷ್ಮನನ್ನು ಕೊಲ್ಲುವೆನೆಂದು ಶಪಥಮಾಡಿದ ಕ್ಷತ್ರಿಯನಾದ ನಿನಗೆ ಹಾಗೆ ಮಾಡದಿರುವುದು ಅಧರ್ಮವು. ಅದುವಿನಹ ನಿನಗೆ ಜಯವುಂಟಾಗಲಾರದು. ಮನಸ್ಸಿನಲ್ಲಿ ಕುಂದಿಲ್ಲದೆ ಹೋರುವಿಕೆಯೂ ಪ್ರಜೆಗಳನ್ನು ಕಾಪಾಡುವಿಕೆಯೂ ಯಜ್ಞಗಳನ್ನು ಮಾಡುವಿಕೆಯೂ ಸನಾತನವಾದ ಕ್ಷತ್ರಿಯ ಧರ್ಮಗಳು ’’ ಎಂದು ಹೇಳಲು, ಬಳಿಕ ಕೌಂತೇಯರು ಭೀಷ್ಮನ ಅಪ್ಪಣೆ ಪಡೆದು ಕರ್ತವ್ಯವನ್ನು ನಿಶ್ಚಯ ಮಾಡಿಕೊಂಡು ತಮ್ಮ ಶಿಬಿರವನ್ನು ಸೇರಿದರು. ಭೀಷ್ಮನನ್ನು ಯಜ್ಞಪಶುವಿನಂತೆ ಭಾವಿಸಿ ಅರ್ಜುನನೆಂಬ ಅಧ್ವರ್ಯುವು ಯಜ್ಞಮಾಡತಕ್ಕ ಹತ್ತನೆಯ ದಿನದ ಯುದ್ಧದ ಸಮಯವನ್ನಿದಿರುನೋಡುತ್ತಿದ್ದರು.

ಅನಂತರದಲ್ಲಿ ಸೂರ್ಯೋದಯಕಾಲಕ್ಕೆ ಶಿಖಂಡಿಯು ಸೇನೆಯು ಗಾಂಗೇಯನಮೇಲೆ ಹೊರಡಲು ಆತನೂ ಇವರಮೇಲೆ ಉರವಣಿಸಿ ಆ ಸೇನಾಪತಿಯನ್ನು ನೋಡಿ ಓಹೋ! ಇವನು ದೇವರು ಮೊದಲು ಸೃಷ್ಟಿಸಿದ ರೀತಿಯಲ್ಲಿ ಈಗಲೂ ಸ್ತ್ರೀಯೇ ಆಗಿರುವುದರಿಂದ ಇವನಮೇಲೆ ಬಾಣವನ್ನು ಹಾಕುವದಿಲ್ಲವೆಂದು ಸುಮ್ಮನಾದನು. ಮೊದಲಿಗಿಂತಲೂ ಆ ದಿನ ಭೀಷ್ಮನು ಅಸ್ತಮಯಕಾಲದ ಕೆಂಪಾದ ಸೂರ್ಯಬಿಂಬದಂತೆ ತನ್ನ ಸುತ್ತಲೂ ರಕ್ತವರ್ಣದ ಪ್ರಭೆಯಿಂದ ಪ್ರಕಾಶಿಸುತ್ತಿದ್ದನು. ಮರಣದೇವತೆಯ ಕುದುರೆಗಳಂತಿರುವ ಶ್ವೇತಾಶ್ವಗಳೊಡನೆ ಕೂಡಿದ ಅರ್ಜುನನೂ ಮತ್ತು ಭೀಷ್ಮನು ಯಾರೊಡನೆ ಯುದ್ಧಮಾಡುವುದಿಲ್ಲವೆಂದು ಶಪಥಮಾಡಿದ್ದನೋ ಅಂತಹ ಶಿಖಂಡಿಯೂ ಈ ಇಬ್ಬರು ವಿನಾ ಇನ್ನಾರೂ ಇವನನ್ನು ಇದಿರಿಸಲಾರದವರಾಗಿದ್ದರು. ಆತನು ಶಿಖಂಡಿಯನ್ನು ಲೆಕ್ಕಿಸದೇ ನರನಮೇಲೆಯೇ ಬಾಣಗಳನ್ನು ಪ್ರಯೋಗಿಸುತ್ತಿದ್ದನು. ಹೀಗೆ ಸಾಯಂಕಾಲಸಮಯವಾಗಲು ಭೀಷ್ಮನು ತಾನು ಇಷ್ಟಪಡದೆ ತನಗೆ ಮರಣವುಂಟಾಗದೆಂದು ತಿಳಿದಿದ್ದುದರಿಂದ ತನ್ನ ಮನಸ್ಸಿನಲ್ಲಿ ಇದು ಸಮಯವಾದುದರಿಂದ ನಾನು ಈಗ ಸಾವನ್ನು ಅಪೇಕ್ಷಿಸಬೇಕೆಂದು ಯೋಚಿಸಿದನು. ಆಗ ಆ ಬವರವನ್ನು ನೋಡುತ್ತಿದ್ದ ಋಷಿಗಳೂ ವಸುಗಳೂ ಆತನನ್ನು ಕುರಿತು, "ತಂದೇ! ನೀನು ಯೋಚಿಸಿದ ಯೋಚನೆಯು ನಮಗೆ ಸಮ್ಮತವು. ಹಾಗೆಯೇ ಮಾಡು. ನಿನ್ನ ಹೃದಯವನ್ನು ಯುದ್ಧದಿಂದ ತಿರುಗಿಸು." ಎಂದು ಹೇಳಲು ಆ ವೀರೋತ್ತಂಸನಮೇಲೆ ಕಮಲಗಂಧವುಳ್ಳ ಗಾಳಿಯು ಮೆಲ್ಲಮೆಲ್ಲಗೆ ಬೀಸಿತು. ಕುಸುಮವರ್ಷವು ಸುರಿಯಿತು. ಯೋಧಶ್ರೇಷ್ಠರೆಲ್ಲರೂ ಈತನ ಮೇಲೆ ಶರವೃಷ್ಟಿಯನ್ನು ಕರೆದಾಗ್ಯೂ ಆತನು ಚಲಿಸದಿದ್ದನು. ಅರ್ಜುನನ ತೀಕ್ಷ್ಣಬಾಣಗಳು ಆತನ ಶರೀರದಲ್ಲಿ ನಾಟಿ ರಕ್ತ ಸುರಿಯುವಂತೆ ಮಾಡಲು ಆಪಗೇಯನು ಮಂದಹಾಸ ತೋರುವಂತೆ ದುಶ್ಶಾಸನನೊಡನೆ ಇಂತು ಹೇಳಿದನು--"ಪುಂಖಾನುಪುಂಖಗಳಾಗಿ ನನ್ನ ಮೇಲೆ ಬರುವ ಬಾಣಗಳ ಏಟುಗಳು ಸಿಡಿಲುಗಳೋಪಾದಿಯಲ್ಲಿ ನೋಯಿಸುತ್ತಿರುವುವು. ಇವು ಅರ್ಜುನನು ಹೊಡೆದವುಗಳು; ಕಪಿಕೇತನನೂ ಜಿಷ್ಣುವೂ ಆದ ಗಾಂಡೀವಿಯೊಬ್ಬನಹೊರತು ಮಿಕ್ಕ ದೊರೆಗಳೆಲ್ಲರೂ ಒಂದಾಗಿ ಕೂಡಿದರೂ ನನ್ನನ್ನು ನೋಯಿಸಲಾರರು." ಅಷ್ಟರಲ್ಲಿ ಅರ್ಜುನನಿಂದ ಬಿಡಲ್ಪಟ್ಟ ತೀಕ್ಷ್ಣಾಗ್ರಗಳಾದ ಬಾಣಗಳು ಎಡೆಬಿಡದೆ ಭೀಷ್ಮನಮೇಲೆ ಬರುತ್ತಾ ಆತನ ಶರೀರದಲ್ಲಿ ಎರಡು ಬೆರಳಿನಷ್ಟು ಸ್ಥಳವನ್ನಾದರೂ ಬಿಡದೆ ನಾಟಿಕೊಂಡವು. ಭೀಷ್ಮನು ತನ್ನ ರಥದಿಂದ ಪೂರ್ವದಿಕ್ಕಿಗೆ

ತಲೆಯಾಗುವಂತೆ ಬಿದ್ದು ತನ್ನ ಶರೀರವೆಲ್ಲವೂ ಬಾಣಗಳಿಂದ ತುಂಬಿದ್ದುದರಿಂದ ಶರೀರವು ಭೂಮಿಗೆ ತಗಲದಿರುವಹಾಗೆ ಶರತಲ್ಪಗತನಾಗಿ ಬಿದ್ದನು. ಆ ರೀತಿಯಲ್ಲಿ ಆತನು ಬೀಳುವಾಗ ಸೂರ್ಯನು ದಕ್ಷಿಣಾಯನಗತನಾಗಿರುವುದನ್ನು ತಿಳಿದನು. ಅಂತರಿಕ್ಷದಿಂದ ಓಹೋ! ಯೋಧಾಗ್ರೇಸರನಾದ ಗಾಂಗೇಯನು ದಕ್ಷಿಣಾಯನದಲ್ಲಿ ಪ್ರಾಣಗಳನ್ನು ಬಿಡಬೇಕೇ? ಎಂದು ಗಗನಚರರು ಕೂಗಿಕೊಳ್ಳಲು ಆತನು ನಾನು ಜೀವಿಸಿರುವೆನೆಂದು ಉತ್ತರಹೇಳಿ ತನ್ನ ಇಂದ್ರಿಯಗಳನ್ನು ಹೋಗಗೊಡಿಸದೆ ತಡೆದನು. ಅಷ್ಟರಲ್ಲಿ ಗಂಗಾದೇವಿಯು ಹಂಸರೂಪಧಾರಿಗಳಾದ ಮಹರ್ಷಿಗಳನ್ನು ಆತನ ಬಳಿಗೆ ಕಳುಹಿಸಲು ಅವರು ಬಂದು ಅದರಂತೆಯೇ ಕೇಳಲು ಭೀಷ್ಮನು ಈರೀತಿ ಹೇಳಿದನು. "ಸೂರ್ಯನು ದಕ್ಷಿಣಾಯನಗತನಾಗಿರುವವರೆಗೂ ನಾನು ಪ್ರಾಣಗಳನ್ನು ಬಿಡೆನು. ಇಷ್ಟುಮಟ್ಟಿಗೆ ನಿಶ್ಚಯ; ರವಿಯು ಉತ್ತರಾಯಣಕ್ಕೆ ಸೇರಿದ ಮೇಲೆ ನಾನೂ ನನ್ನ ಪೂರ್ವಸ್ಥಳವನ್ನು ಸೇರುವೆನು. ನನ್ನ ತಂದೆಯು ನನಗೆ ಸ್ವಚ್ಛಂದಮರಣವುಂಟಾಗುವಂತೆ ಕೊಟ್ಟ ವರವು ನಿಶ್ಚಯವಾಗಲಿ. ನನ್ನ ಪ್ರಾಣಗಳು ನನ್ನ ಅಧೀನಗಳಾದುದರಿಂದ ಅವನ್ನು ಇನ್ನೂ ಧರಿಸಿರುವೆನು."

ಅನಂತರ ಎಲ್ಲರೂ ಯುದ್ಧವನ್ನು ನಿಲ್ಲಿಸಿ ಆಯುಧಗಳನ್ನು ಕೆಳಗಿಟ್ಟರು. ಸೂರ್ಯನು ನಿಸ್ತೇಜನಾದನು. ಆ ಮಹಾತ್ಮನ ಪತನಕ್ಕೆ ಭೂದೇವಿಯೇ ಶೋಕಿಸಿದಳು. ಎರಡುಪಕ್ಷದ ರಾಜರುಗಳೂ ಪೂರ್ವಸಂದರ್ಭಗಳನ್ನು ಮರೆತು ಹೆಚ್ಚಾದ ಭಕ್ತಿಯಿಂದ ಕೂಡಿದವರಾಗಿ ಆತನನ್ನು ನಮಸ್ಕರಿಸಲು ಆತನು ಎಲ್ಲರನ್ನೂ ಆಶೀರ್ವದಿಸಿದನು. ಆ ಸಮಯದಲ್ಲಿ ಆತನ ತಲೆಯು ಕೆಳಕ್ಕೆ ಜೋಲುತಿರುವುದನ್ನು ನೋಡಿ ಒಂದು ತಲೆದಿಂಬನ್ನು ತರುವುದೆಂದು ದುರ್ಯೋಧನನಿಗೆ ಹೇಳಲು ಆತನು ಮೃದುವಾಗಿರುವ ತಲೆದಿಂಬನ್ನು ತರಿಸಿಕೊಟ್ಟನು. ಭೀಷ್ಮನು ಅದನ್ನು ದೂರವಾಗಿಟ್ಟು ನಸುನಗುತ್ತ ಎಲೈ ನರಪತಿಗಳೇ, ಇದು ವೀರಶಯನೋಚಿತವಾದುದಲ್ಲವೆಂದು ಹೇಳಿ ಸಮೀಪದಲ್ಲಿದ್ದ ಪಾರ್ಥನನ್ನು ನೋಡಿ ಧನಂಜಯ! ಮಹಾಸ್ತ್ರವೇದೀ! ನನ್ನ ತಲೆಯು ಕೆಳಗೆ ಜೋಲುತಿರುವುದು. ನನಗೆ ಅನುರೂಪವಾದ ತಲೆದಿಂಬನ್ನು ತಂದು ಕೊಡಯ್ಯಾ ಎಂದು ಬೇಡಲು ಅರ್ಜುನನು ಕಣ್ಣುಗಳಲ್ಲಿ ನೀರುಸುರಿಸುತ್ತಾ ಮೂರು ಅಸ್ತ್ರಗಳನ್ನು ಅಭಿಮಂತ್ರಿಸಿ ಪಿತಾಮಹನಿಗೆ ತಲೆದಿಂಬನ್ನಾಗಿ ಮಾಡಲು ಆ ಶೂರವರನು ಹೆಚ್ಚಾಗಿ ಸಂತೋಷಪಟ್ಟು ಮುಖದಲ್ಲಿ ಮಂದಹಾಸವುಂಟಾಗುತ್ತಿರಲು ಅರ್ಜುನನನ್ನು ಕುರಿತು

‹‹ ಮಹಾಸ್ತ್ರವೇದಿಯಾದ ಓ ಪಾಂಡುತನಯ ! ನನ್ನ ಹಾಸಿಗೆಗೆ ಸರಿಯಾದ ತಲೆದಿಂಬನ್ನಿಟ್ಟೆ, ಈ ರೀತಿಯಲ್ಲಿ ಕ್ಷತ್ರಿಯನು ನಿಜಧರ್ಮವನ್ನು ನಡೆಯಿಸಿ ರಣರಂಗದಲ್ಲಿ ಶರತಲ್ಪದಲ್ಲಿ ಪವಳಿಸಬೇಕು '' ; ಎಂದು ಹೇಳಿ ತನ್ನ ಸುತ್ತಲೂ ಒಂದು ಹಳ್ಳವನ್ನು ತೋಡುವಂತೆ ಹೇಳಿ, ಆ ಪ್ರದೇಶದಲ್ಲಿಯಾದರೂ ಯುದ್ಧಮಾಡಕೂಡದೆಂದು ತಿಳಿಸಿ ಅವರುಗಳನ್ನು ನೋಡಿ ಇನ್ನು ವ್ಯಸನವನ್ನು ಮಾಡಬೇಡಿರೆಂದನು. ವೈದ್ಯರು ತನಗೆ ಚಿಕಿತ್ಸೆಮಾಡುವುದಕ್ಕೆ ಬರಲು ಕೂಡದೆಂದು ನಿವಾರಿಸಿ ಈಶ್ವರನನ್ನು ಧ್ಯಾನಿಸತೊಡಗಿದನು. ಮರುದಿನ ಬೆಳಿಗ್ಗೆ ಆ ವೀರೋತ್ತಮನು ಏಟುಗಳಿಂದ ನೊಂದ ತನ್ನ ಶರೀರವು ಉರಿಯುತ್ತಿರಲು ದಾಹಹೊಂದಿ ನೀರನ್ನು ತರುವುದೆಂದು ಹೇಳಲು ಅವರುಗಳು ತಂದ ಉದಕವನ್ನು ತೆಗೆದುಕೊಳ್ಳದೆ ಅರ್ಜುನನನ್ನು ಕರೆಸಿ ಆತನೊಡನೆ ‹‹ ಶರೀರವೆಲ್ಲವೂ ನಿನ್ನ ಬಾಣಗಳ ಏಟುಗಳಿಂದ ನೊಂದು ಹೆಚ್ಚಾದ ಬಾಧೆಯನ್ನು ಹೊಂದಿರುವುದು. ಎಲುಬುಗಳೂ ಸಹ ನೋಯುತ್ತಿರುವುವು. ಬಾಯಿಯಲ್ಲಿ ದ್ರವವಿಲ್ಲದೆ ಹೀಗೆ ಶ್ರಮಪಡುತ್ತಿರುವ ನನಗೆ ನೀರನ್ನು ತಂದುಕೊಡು. ನೀನು ಒಳ್ಳೆಯ ಧನುರ್ಧಾರಿಯಾದ ಕಾರಣ ಯೋಗ್ಯವಾದ ರೀತಿಯಲ್ಲಿ ನನಗೆ ನೀರನ್ನು ತರಿಸಿಕೊಡಬಲ್ಲೆ '' ಎನ್ನಲು ಭೀಭತ್ಸುವು ಗಾಂಡೀವವನ್ನು ಧ್ವನಿಮಾಡಿ ಒಂದು ಬಾಣವನ್ನು ಅಭಿಮಂತ್ರಿಸಿ ಭೂಮಿಯಮೇಲೆ ಹೊಡೆಯಲು ಅದು ಭೂಮಿಯನ್ನು ಭೇದಿಸಿತು. ಅಲ್ಲಿಂದ ನಿರ್ಮಲೋದಕವು ಹೊರಹೊರಡಲು ಅದನ್ನು ಪಾನಮಾಡೆಂದು ಭೀಷ್ಮನಿಗೆ ಕೊಟ್ಟನು. ಭೀಷ್ಮನು ಅದನ್ನು ಪಾನಮಾಡಿ ಶಾಂತನಾಗಿ ಅರ್ಜುನನನ್ನು ಹೊಗಳಿ ದುರ್ಯೋಧನನ್ನು ಕರೆಯಿಸಿ ಆತನನ್ನು ಕುರಿತು ‹‹ ಕೃಷ್ಣನೊಡನೆ ಕೂಡಿದ ಅರ್ಜುನನನ್ನು ಯಾರೂ ಜಯಿಸಲಾರರು; ಆದುದರಿಂದ ಇನ್ನುಮೇಲಾದರೂ ಯುದ್ಧವನ್ನು ನಿಲ್ಲಿಸಿ ಸಂಧಿಯನ್ನು ಮಾಡಿಕೊಳ್ಳುವುದು ಸುಖವು '' ಎಂದು ಹೇಳಿ ಸುಮ್ಮನಾಗಿ ತನ್ನ ಅವಯವಗಳು ಬಾಣಗಳಿಂದ ನಿಹತಗಳಾಗಿ ಬಾಧೆ ಹೊಂದಿದ್ದಾಗ್ಯೂ ಅದನ್ನು ಲೆಕ್ಕಿಸದೇ ಯೋಗವನ್ನು ಮಾಡತೊಡಗಿದನು. ಎಲ್ಲರೂ ಹೊರಟುಹೋದಮೇಲೆ ಕರ್ಣನು ಬಾಷ್ಪಪೂರಿತಲೋಚನನಾಗಿ ಅಲ್ಲಿಗೆ ಬಂದು ಆ ಮಹಾತ್ಮನ ಪಾದಗಳಿಗಡ್ಡಬಿದ್ದು ಓ ಕುರುಪುಂಗವಾ ! ಎಲ್ಲಾ ಕಾಲಗಳಲ್ಲಿಯೂ ನೀನು ನಿಂದಿಸುತ್ತಿದ್ದ ರಾಧಾತನಯನೇ ನಾನು ಎಂದು ಬಿನ್ನವಿಸಲು ಭೀಷ್ಮನು ಕಣ್ಣುಗಳನ್ನು ಬಿಟ್ಟು ಬಾಹುಗಳನ್ನು ನೀಡಿ ಕರ್ಣನನ್ನು ಅಪ್ಪಿಕೊಂಡು ಹಿತೋಕ್ತಿಗಳಿಂದ ಹೀಗೆ ಹೇಳಿದನು. ‹‹ ದೇವತೆಗಳಿಗೆ ಸಮಾನನಾದ ಕರ್ಣನೇ ನಿನ್ನನ್ನು ಹೋಲುವವರು ಮನುಷ್ಯರಲ್ಲಿಲ್ಲ ;

ಕುಲದಲ್ಲಿ ನಿನ್ನ ದೆಸೆಯಿಂದ ಕೇಡುಮೂಡುವುದೆಂದು ನಾನು ಯಾವಾಗಲೂ ನಿನ್ನನ್ನು ಕಾಠಿಣ್ಯದಿಂದ ನಿಂದಿಸುತ್ತಿದ್ದೆನು. ನೀನು ಅರ್ಜುನನಿಗೆ ಸಮನು. ಪಾಂಡುಪುತ್ರರು ನಿನಗೆ ಸಹೋದರರು. ಅವರೊಡನೆ ಕೂಡಿ ಸುಖಿಸು.''

ಇದನ್ನು ಕೇಳಿ ಕರ್ಣನು ಹಾಗೆ ಮಾಡಲಿಷ್ಟಪಡದೆ ‘‘ನಾನು ಪಾಂಡವರೊಡನೆ ವೈರವನ್ನು ಬಿಡಲಾರೆನು; ಅವರೊಡನೆ ಹೋರುವುದಕ್ಕೆ ನನಗಪ್ಪಣೆಮಾಡು; ಇದೇ ನನ್ನ ಅಭಿಮತವು; ನಾನು ಇಷ್ಟಕ್ಕೆ ಮುಂಚೆ ಯಾವಾಗಲಾದರೂ ಕೋಪದಿಂದಲಾದರೂ ಬುದ್ಧಿಯಿಲ್ಲದೆಯಾದರೂ ನಿನಗೇನು ಮಾಡಿದ್ದಾಗ್ಯೂ ಅವೆಲ್ಲವನ್ನೂ ಕ್ಷಮಿಸು.'' ಎಂದು ಬೇಡಲು ಭೀಷ್ಮನು ಆತನನ್ನು ಕುರಿತು ‘‘ಸ್ವರ್ಗಕಾಮನಾಗಿ ಸಮರಮಾಡಲು ನಿನಗನುಜ್ಞೆ ಕೊಟ್ಟಿರುವೆನು. ಕೋಪವನ್ನೂ ದೈನ್ಯವನ್ನೂ ಬಿಟ್ಟು ಶಕ್ತಿ ಧೈರ್ಯಗಳಿಗೆ ತಕ್ಕಂತೆ ಸತ್ಪುರುಷರ ಮಾರ್ಗವನ್ನನುಸರಿಸಿ ನಿನ್ನ ಒಡೆಯನಿಗೆ ಸಂತೋಷವನ್ನುಂಟುಮಾಡು.'' ಎಂದು ಅಪ್ಪಣೆಮಾಡಲು ರಾಧೇಯನು ಗಾಂಗೇಯನನ್ನು ಬಿಟ್ಟು ದುರ್ಯೋಧನನ ಬಳಿಗೆ ಹೋದನು.

ಹೀಗೆ ಭೀಷ್ಮನು ತನ್ನ ಇಷ್ಟದಿಂದ ಶರತಲ್ಪದಲ್ಲಿ ಮಲಗಿ ಮರಣ ಬರಬೇಕೆಂದು ಕೋರುತ್ತಾ ತನ್ನ ಶರೀರವು ಧರ್ಮಪರರಿಗಿದಿರಾಗಿ ಯುದ್ಧಮಾಡಿದಕಾರಣ ಅದಕ್ಕುಂಟಾದ ಬಾಧೆಯನ್ನನುಭವಿಸುತ್ತಾ ದಿನಗಳನ್ನು ಕಳೆಯುತ್ತಿದ್ದನು.

ಭೀಷ್ಮಪರ್ವ ಸಮಾಪ್ತ.

---

## ೭ ನೆಯ ಅಧ್ಯಾಯ.

### ಧರ್ಮಜನ ಶಾಪ.

### ದ್ರೋಣ ಪರ್ವ.

ಅನಂತರದಲ್ಲಿ ದೊರೆಗಳೆಲ್ಲರೂ ಮರಣವನ್ನು ಕಟ್ಟಿಹಾಕಿದ್ದ ಭೀಷ್ಮನನ್ನು ನೋಡಿ ವ್ಯಸನಪಟ್ಟು ಕಳವಳಹೊಂದಿದವರಾಗಿ ಪುನಃ ಹೊರಟು ಯುದ್ಧಮಾಡತೊಡಗಿದರು. ಆಗ ಕೌರವರಸೈನ್ಯದಲ್ಲಿ ಯೋಧಾಗ್ರೇಸರನಾದ ಕುರುಪಿತಾಮಹನಿಗೆ ಬದಲಾಗಿ ಯಾರು ಸೈನ್ಯಾಧಿಪತ್ಯವನ್ನು ಹೊಂದಬೇಕೆಂಬ ವಿಚಾರಬರಲು ಎಲ್ಲರೂ

ಹತ್ತು ದಿನಗಳಿಂದ ಯುದ್ಧಮಾಡದೆ ಸುಮ್ಮನಿದ್ದ ಕರ್ಣನಕಡೆಗೆ ನೋಡಿದರು. ಒಬ್ಬನು ಕರ್ಣನೇ ಸೈನ್ಯಾಧಿಪತಿಯಾಗಿರಬೇಕೆಂದನು. ಕರ್ಣನು ಭೀಷ್ಮನಅಪ್ಪಣೆಯಿಂದ ಯು ದ್ಧಸನ್ನದ್ಧನಾಗಿರಲು ದುರ್ಯೋಧನನು ಆತನ ಬಳಿಗೆ ಬಂದು ಹೀಗೆಂದನು. ಭೀಷ್ಮ ನಿಗೆ ಬದಲಾಗಿ ನೀನು ಸೈನ್ಯವನ್ನು ನಡೆಸು. ಹಾಗಾಗದಿದ್ದಲ್ಲಿ ಮತ್ತಿಯಾರನ್ನಾದರೂ ಆ ಕಾರ್ಯದಲ್ಲಿ ನಿಯಮಿಸು ಎನ್ನಲು ಕರ್ಣನು ನಮ್ಮೆಲ್ಲರಿಗೂ. ಅಸ್ತ್ರವಿದ್ಯೆಯನ್ನು ಕಲಿಸಿದ ಧನುರಾಚಾರ್ಯನಾದ ದ್ರೋಣನನ್ನು ಸೇನಾಪತಿಯನ್ನಾಗಿ ಪಟ್ಟಗಟ್ಟಿ ನಾ ವೆಲ್ಲರೂ ಆತನ ಅಪ್ಪಣೆಯಂತೆ ನಡೆಯೋಣವೆಂದು ಹೇಳಲು ಎಲ್ಲಾ ನೃಪತಿಗಳು ಸಂತೋಷದಿಂದ ಅಟ್ಟಹಾಸ ಹೊಂದಿದರು. ದ್ರೋಣನು ಅದಕ್ಕೆ ಸಮ್ಮತಿಸಿ ಸಮು ಚಿತವಿಧಾನದಿಂದ ಪಟ್ಟಾಭಿಷಿಕ್ತನಾಗಿ ಹನ್ನೊಂದನೆಯ ದಿನ ವೈರಿಗಳಿಗೆ ಎದುರಾಗಿ ಹೋರಲು ತಮ್ಮ ಸೈನ್ಯಗಳನ್ನು ಉತ್ಸಾಹಗೊಳಿಸಿದನು. ಆತನ ಸೈನ್ಯಾಧಿಪತ್ಯದಲ್ಲಿ ಜರುಗಿದ ಚರಿತ್ರೆಗಳು ದ್ರೋಣಪರ್ವದಲ್ಲಿ ಹೇಳಲ್ಪಟ್ಟಿರುವುವು. ಸಂಗ್ರಾಮವನ್ನು ಪ್ರಾರಂಭಿಸುವುದಕ್ಕೆ ಮೊದಲು ದ್ರೋಣನು ದುರ್ಯೋಧನನನ್ನುನೋಡಿ ಒಂದು ವರ ವನ್ನು ಕೋರು, ಕೊಡುವೆನೆನ್ನಲು ಆ ದೊರೆಯಿಂತೆಂದನು. ಧರ್ಮನಂದನನನ್ನು ಹಿಡಿದು ಕೊಡು ಇದೇ ನನ್ನ ಅಭಿಮತವು. ಆತನನ್ನು ಸಂಹಾರಮಾಡಿದೆವಾದರೆ ಆತನ ತಮ್ಮಂ ದಿರು ನಮ್ಮೆಲ್ಲರನ್ನೂ ನಾಶಮಾಡುವರು. ಆತನು ಜೀವಸಹಿತನಾಗಿ ಹಿಡಿಯಲ್ಪಟ್ಟರೆ ಅವನ ತಮ್ಮಂದಿರು ಆತನಿಗೆ ವಿಧೇಯರಾಗಿರುವರು. ನಾವು ಆತನನ್ನು ಪುನಃ ಜೂಜಿ ನಲ್ಲಿ ಸೋಲಿಸಿ ಕಾಡಿಗೆಕಳುಹಿಸಬಹುದು; ಎಂದು ಕುಟಿಲವಚನಗಳಿಂದ ಹೇಳಲು ಭಾರದ್ವಾಜನು ಅರ್ಜುನನು ಆತನಿಗೆ ಸಹಾಯಕನಾಗಿರದಿದ್ದಲ್ಲಿ ಯುಧಿಷ್ಠಿರನನ್ನು ಹಿ ಡಿದುಕೊಡುವೆನೆಂದನು. ಪಾಂಡವರು ಈ ಸಂದರ್ಭವನ್ನು ತಿಳಿದುಕೊಂಡು ಅದಕ್ಕೆ ಪ್ರತಿಕಾರವೇನೆಂದು ಯೋಚಿಸುತ್ತಿರಲು ಅರ್ಜುನನು " ನಾನು ಗುರುವನ್ನು ಕೊಲ್ಲೆ ನಾದರೂ ನಾನು ಪ್ರಾಣಗಳನ್ನು ಧರಿಸಿರುವವರೆಗೂ ದ್ರೋಣನು ಧರ್ಮಜನನ್ನು ಹಿಡಿ ಯಲು ಅವಕಾಶಕೊಡೆನು " ಎಂದು ಶಪಥಮಾಡಿದನು. ಹೀಗೆ ಯುಧಿಷ್ಠಿರನನ್ನು ಹಿಡಿಯುವುದೇ ಪ್ರಧಾನವಾಗುಳ್ಳ ಆ ಬವರವು ಪ್ರಾರಂಭವಾಗಿ ಉಭಯಪಕ್ಷದ ವರೂ ಪರಾಕ್ರಮದಿಂದ ಹೋರಿದರು. ಪಾರ್ಥನಸತ್ಪುತ್ರನಾದ ಅಭಿಮನ್ಯುವು ಬಾಲ ಕನಾದಾಗ್ಯೂ ಅವಕ್ರ ವಿಕ್ರಮದಿಂದ ಪೌರವ, ಜಯದ್ರಥ ಶಲ್ಯರೊಡನೆ ದ್ವಂದ್ವ ಯುದ್ಧಮಾಡಿ ಜಯಹೊಂದಿದನು. ಭೀಮನ ಕುಮಾರನಾದ ಘಟೋತ್ಕಚನೆಂಬ ರಾಕ್ಷಸನು ಅತಿ ಮಾನುಷಕೃತ್ಯಗಳನ್ನುಮಾಡುತ್ತಾ ತನ್ನ ಶಕ್ತಿಯನ್ನು ಪ್ರಕಾಶಪಡಿ

ಸಿದನು. ಆ ಕಡೆಯಲ್ಲಿ ದ್ರೋಣನು ಶೋಣವರ್ಣದ ಉತ್ತಮಾಶ್ವಗಳನ್ನು ಕಟ್ಟಿದ ರಥದಲ್ಲಿ ಮೆರೆಯುತ್ತ ಧರ್ಮತನಯನಿದ್ದ ಸ್ಥಳಕ್ಕೆ ಮಹಾಪರಾಕ್ರಮದಿಂದ ಉರವಣಿಸುತ್ತ ತನ್ನನ್ನಿದಿರಿಸಿದವರನ್ನೆಲ್ಲಾ ನಿಶಿತಬಾಣಗಳಿಂದ ಹೊಡೆದಟ್ಟಿ ಧರ್ಮತನಯನ ಬಳಿಗೆ ಆನೆಯ ಬಳಿಗೆ ಸಿಂಹವು ಹಾರಿಬರುವಂತೆ ಶೀಘ್ರವಾಗಿ ಬರಲು ಕೌರವರೆಲ್ಲರೂ ಧರ್ಮಜನು ಹಿಡಿಯಲ್ಪಟ್ಟನೆಂದು ಭಾವಿಸಿ ಜಯಜಯಧ್ವನಿಗೈದರು. ಇಷ್ಟರಲ್ಲಿ ಕೃಷ್ಣಚೋದಿತಗಳಾದ ಅರ್ಜುನನ ಧವಳ ತುರಂಗಗಳು ಸಿಡಿಲುಗಳ ತೆರದಲ್ಲಿ ಧ್ವನಿ ಮಾಡುತ್ತಾ ಬಹು ತೀವ್ರವಾಗಿ ಅಲ್ಲಿಗೆ ಹಾರಿಬರಲು ಧನಂಜಯನು ಮಹೋಗ್ರ ಬಾಣಪರಂಪರೆಗಳಿಂದ ಅವರೆಲ್ಲರನ್ನೂ ನಾಲ್ಕುದಿಕ್ಕುಗಳಿಗೂ ಓಡಿಸಿ ಅಣ್ಣನಿಗೆ ತೊಂದರೆ ಸಂಭವಿಸದಂತೆ ಕಾಪಾಡಿದನು. ಅಷ್ಟರಲ್ಲಿ ಅಂಬುಜಮಿತ್ರನು ಅಸ್ತಾದ್ರಿಯನ್ನು ಸೇರಿದನು.

ಆ ದಿನ ರಾತ್ರಿ ತ್ರಿಗರ್ತದೇಶಾಧೀಶರಾದ ಸಂಶಪ್ತಕರೆಂಬ ಸುಶರ್ಮನೂ ಅವನ ತಮ್ಮಂದಿರಾದ ಸತ್ಯರಥ, ಸತ್ಯಕರ್ಣ, ಸತ್ಯಧರ್ಮ, ಸತ್ಯವರ್ಮ, ಸತ್ಯಸೇನರೆಂಬವರೂ “ನಾವು ಅರ್ಜುನನನ್ನು ಸಂಹಾರ ಮಾಡುವೆವು. ಹಾಗಲ್ಲದಿದ್ದರೆ ಅವನಿಂದ ಸಾಯುವೆವು” ಎಂದು ಶಪಥಮಾಡಿ ಮರುದಿನ ಸವ್ಯಸಾಚಿಯನ್ನು ನೋಡಿ ನೀನು ನಮ್ಮೊಡನೆ ಹೋರುವಿಯಾ ? ಎಂದು ಕೇಳಲು ಅವನು ಯುದ್ಧಕ್ಕೆ ಕರೆದವರೊಡನೆ ಯಾವಾಗಲೂ ಹೋರದಿರೆನೆಂದು ತನ್ನ ಗಾಂಡೀವದ ಮೇಲೆ ಆಣೆಯಿಟ್ಟುಕೊಂಡವನಾದುದರಿಂದ ಧರ್ಮಜನನ್ನು ‘ ಕುರಿತು ಸಾತ್ಯಕಿಯು ನಿನಗೆ ಸಹಾಯಕನಾಗಿರುವನು. ನಾನು ಸಂಶಪ್ತಕರನ್ನು ಕೊಲ್ಲಲು ಅಪ್ಪಣೆ ಮಾಡು ’ ಎನ್ನಲು ಧರ್ಮಜನು ಹಾಗೆಯೇ ಆಗಲೆಂದನು. ಅನಂತರ ಕಿರೀಟಿಯು ಅವರಿದ್ದ ಸ್ಥಳಕ್ಕೆ ಹೋಗಿ ದಾರುಣವಾದ ಯುದ್ಧವನ್ನು ಮಾಡುತ್ತಿದ್ದನು. ಆ ಸಮಯಲ್ಲಿ ದ್ರೋಣನು ಧರ್ಮತನಯನ ಮೇಲೆ ಕವಿದು ಆತನ ರಕ್ಷಕರನ್ನು ನಿಶಿತಗಳಾದ ಸಾಯಕಗಳಿಂದ ನೋಯಿಸಿ ಪ್ರಚಂಡಮಾರುತನಂತೆ ಅವನ ಸೈನ್ಯವನ್ನು ಚದರಿಸಿ ಓಡಿಸಲಾಗಿ ಯುಧಿಷ್ಠಿರನೂ ಗುರುವಿಗೆದುರಾಗಿ ಯುದ್ಧಮಾಡಲಾರದೆ ಸೋತು ಹಿಂದಕ್ಕೆ ಓಡಿದನು. ಭೀಮನು ಬಹು ವೇಗವಾಗಿ ಬಂದು ಯುದ್ಧಮಾಡಿದನು. ಈ ಮಧ್ಯೆ ಆನೆಯೊಂದು ಯೋಧರನ್ನೂ ಕುದುರೆಗಳನ್ನೂ ರಥಗಳನ್ನೂ ನಾಶಮಾಡುತ್ತಾ ಬಹಳವಾಗಿ ಹೋರುತ್ತಿತ್ತು. ಅದರ ಸಂಗಡ ಸಾಹಸದಿಂದ ಕಾದ ಭೀಮನು ವಿಶೇಷ ಪರಾಕ್ರಮ

ವನ್ನು ತೋರಿಸುತ್ತಿದ್ದಾಗ್ಯೂ ಪಾಂಡವರ ಸೈನ್ಯವೇನೋ ಚದರಿಹೋಗಿದ್ದಿತು. ಯುಧಿಷ್ಠಿರನ ಮೇಲೆ ದ್ರೋಣನು ಈ ರೀತಿಯಲ್ಲಿ ಯುದ್ಧಮಾಡುತ್ತಿರುವುದನ್ನೂ ತನ್ನ ಸೈನ್ಯದ ಪರಾಜಯವನ್ನೂ ಅರ್ಜುನನು ತಿಳಿದೂ ಸಂಶಪ್ತಕರ ಮೇಲೆ ಯುದ್ಧಮಾಡುತ್ತಿರುವುದನ್ನು ಬಿಟ್ಟುಹೋಗಲಾರದೆ ಡೋಲಾಯಮಾನಮಾನಸನಾಗಿ ಸ್ವಲ್ಪಹೊತ್ತು ಸುಮ್ಮನಿದ್ದು ಅನಂತರ ಇವರನ್ನು ಬಿಟ್ಟು ಹೋಗಲಾಗದೆಂದೆಣಿಸಿ ಇವರನ್ನು ಮೊದಲು ನೆಟ್ಟಗೆ ಮಾಡಲೇಬೇಕೆಂದು ಪ್ರಳಯಕಾಲದ ರುದ್ರನಂತೆ ಕೋಪ ಹೆಚ್ಚುತಿರಲು ಆ ಸಂಶಪ್ತಕರ ಮೇಲೆ ಬತ್ತಳಿಕೆಯಿಂದ ಬಾಣಗಳನ್ನು ತೆಗೆಯುವುದೂ ಬಿಲ್ಲಿನಲ್ಲಿ ಸೇರಿಸುವುದೂ ಪ್ರಯೋಗಿಸುವುದೂ ಒಬ್ಬರಿಗೂ ಗೋಚರವಾಗದಿರುವಷ್ಟು ಜಾಗ್ರತೆಯಿಂದ ಬಾಣಸಮೂಹಗಳನ್ನು ಹೊಡೆದು ಅವರನ್ನು ನಾಶಪಡಿಸಿದನು. ಅನಂತರದಲ್ಲಿ ಉತ್ತಮಾಶ್ವಗಳಿಂದ ಕೂಡಿದ ರಥದೊಡನೆ ದ್ರೋಣನ ಮೇಲೆ ಹೊರಟು ಅನೇಕರನ್ನು ನಾಶಪಡಿಸುತ್ತಾ ಬರುತ್ತಿದ್ದನು. ಆ ಸಮಯದಲ್ಲಿ ಸೈನ್ಯವನ್ನು ನಷ್ಟಪಡಿಸುತ್ತಿದ್ದ ಮಾತಂಗದ ಮೇಲೆ ಬರುತ್ತಿದ್ದ ಭಗದತ್ತನನ್ನು ನೋಡಿ ಅವನ ಮೇಲೆ ಯುದ್ಧಮಾಡಲು ಯತ್ನಿಸುತ್ತಿರಲು ಕೇಶವಪ್ರಚೋದಿತವಾದ ಅವನ ರಥವು ಮುಂದಕ್ಕೆ ಹೋದುದರಿಂದ ಭಗದತ್ತನನ್ನು ಹಿಂಭಾಗದಿಂದ ಹೊಡೆಯಬಾರದೆಂದೆಣಿಸಿ ಪುನಃ ಅವನಿಗೆ ಅಭಿಮುಖವಾಗಿ ಬಂದನು. ಭಗದತ್ತನು ಅರ್ಜುನನ ಮೇಲೆ ಒಂದು ದಿವ್ಯಾಸ್ತ್ರವನ್ನು ಪ್ರಯೋಗಿಸಲು ಕೃಷ್ಣನು ಜಿಷ್ಣುತನಯನಿಗಡ್ಡವಾಗಿ ನಿಲ್ಲಲು ಆ ಅಸ್ತ್ರವು ಆತನ ಎದೆಗೆ ತಗುಲಿ ಪುಷ್ಪಮಾಲಿಕೆಯನ್ನನುಕರಿಸಿತು. ಅದನ್ನು ನೋಡಿ ಕುಂತೀನಂದನನು ಅವಮಾನಿತನಾದುದಾಗಿ ತಿಳಿದು ಕೋಪಾಟೋಪದಿಂದ ನಾನು ಹಿಂದೆಗೆಯದೇ ಯುದ್ಧಮಾಡುತ್ತಿದ್ದರೂ ನೀನೇತಕ್ಕೆ ಅಡ್ಡವಾಗಿ ಬಂದೆಯೆಂದು ಕೇಳಲು ದೇವಕೀನಂದನನು ಮೃದುವಚನಗಳಿಂದ “ ಇದು ವೈಷ್ಣವಾಸ್ತ್ರವು. ಇದು ನನ್ನ ಸಂಬಂಧವಾದುದಾದಕಾರಣ ಇದನ್ನು ಜಯಿಸುವುದಕ್ಕೆ ನನ್ನ ಹೊರತು ಯಾರಿಗೂ ಅಳವಲ್ಲ. ಇದನ್ನು ಮೊದಲು ಭೂದೇವಿಯು ನನ್ನಿಂದ ತನ್ನ ತನಯನಾದ ನರಕನಿಗಾಗಿ ಹೊಂದಿದಳು. ನರಕನ ದೆಸೆಯಿಂದ ಭಗದತ್ತನು ಹೊಂದಿದನು. ಇದು ಇವನ ಕೈಯಲ್ಲಿರುವವರೆಗೂ ಇವನು ಅಜೇಯನು. ಆ ಮಹಾಸ್ತ್ರವು ಈಗ ಅವನಲ್ಲಿಲ್ಲದೇ ಹೋದುದರಿಂದ ನೀನು ಇವನನ್ನೂ ಇವನ ಆನೆಯನ್ನೂ ಜೀವರಹಿತಗಳನ್ನಾಗಿ ಮಾಡಬಹುದಾಗಿದೆ ” ಎಂದು ಹೇಳಿ ಸಮಾಧಾನಪಡಿಸಿದನು.

ಅಷ್ಟರಲ್ಲಿ ಅಂಬುಜಮಿತ್ರನು ಚರಮಗಿರಿ ಶಿಖರಾಂತರ್ಹಿತನಾಗಲು ಹನ್ನೆರಡನೆಯ ದಿನದ ಯುದ್ಧವು ಮುಗಿಯಿತು. ಪಾಂಡವರು ವಿಜಯವನ್ನು ಹೊಂದಿದರು. ಯುಧಿಷ್ಠಿರನನ್ನು ಹಿಡಿದುಕೊಡುವೆನೆಂದು ದ್ರೋಣನು ಮಾಡಿದ ಶಪಥವು ಕೈಗೂಡಲಿಲ್ಲ.

ಹದಿಮೂರನೆಯ ದಿನ ಪುನಃ ಯುದ್ಧವು ಸಂಪ್ರಾಪ್ತವಾಯಿತು. ಕೃಷ್ಣನ ತಂಗಿಯಾದ ಸುಭದ್ರೆಗೆ ಅಭಿಮನ್ಯುವೆಂಬ ಹೆಸರಿನಿಂದ ಮಗನಾಗಿ ಹುಟ್ಟಿದ ವರ್ಚಸ್ಸು ಆದಿನ ಸ್ವರ್ಗಕ್ಕೆ ತೆರಳಿದನು. ಆ ದಿನ ಜಯವು ವೀರವರನಾದ ಆ ಕುಮಾರನಿಂದ ಹೊಂದಲ್ಪಟ್ಟಿತು. ಹದಿನಾರು ಸಂವತ್ಸರಗಳ ಬಾಲಕನಾದರೂ ಆತನು ಪ್ರೌಢನತೆರದಲ್ಲಿ ಯುದ್ಧಮಾಡಿ ಎಲ್ಲರನ್ನೂ ಜಯಿಸಿದನು. ಅರ್ಜುನನು ಪುನಃ ಆಹವಕ್ಕೆ ಕರೆಯಲ್ಪಟ್ಟು ಮತ್ತೊಂದು ಕಡೆಗೆ ಹೊರಡಲು ಧರ್ಮತನಯನು ವರ್ತುಲಾಕಾರವಾಗಿ ತಮ್ಮ ಸೈನ್ಯಗಳನ್ನು ನಿಲ್ಲಿಸಿ ದ್ರೋಣನು ತಮ್ಮ ಕಡೆಗೆ ಬರುತಿರುವುದನ್ನು ನೋಡಿ ಅರ್ಜುನನೂ ಕೃಷ್ಣನೂ ಪ್ರದ್ಯುಮ್ನನೂ ಅಭಿಮನ್ಯುವೂ ಇವರ ಹೊರತು ಇತರರಿಗೆ ಸಾಧ್ಯವಲ್ಲದುದರಿಂದ ಅಭಿಮನ್ಯುವನ್ನು ನೋಡಿ ಹೀಗೆಂದನು. 'ವತ್ಸ, ನೀನು ಈ ವ್ಯೂಹವನ್ನು ಒಡೆಯಲು ಸಮರ್ಥನಾದುದರಿಂದ ನೀನು ಅದನ್ನು ಭೇದಿಸಲೆತ್ನಿಸು. ನಾವೆಲ್ಲರೂ ನಿನ್ನ ಹಿಂದೆ ಸಹಾಯಕರಾಗಿ ಬರುವೆವು ?' ಎಂದು ನಿಯೋಗಿಸಲು ಅಭಿಮನ್ಯುವು ಹೆಚ್ಚಾದ ಸಂತೋಷದಿಂದ ಹಾಗೆಯೇ ಆಗಲೆಂದೊಪ್ಪಿಕೊಂಡು ಕೃಷ್ಣಾರ್ಜುನರ ಶಪಥವನ್ನು ಗೆಲ್ಲುವೆನೆಂದು ಶಪಥಮಾಡಿ ತನ್ನ ಸಾರಥಿಯು ಒಪ್ಪದಿದ್ದರೂ ಆನೆಯಮೇಲೆ ಉರವಣಿಸಿ ಬರುವ ಸಿಂಹದೋಪಾದಿಯಲ್ಲಿ ವೈರಿಗಳಮೇಲೆ ರಥವನ್ನು ನಡೆಯಿಸೆಂದು ಅಪ್ಪಣೆಮಾಡಿದನು. ಆತನು ಹಾಗೆಯೇ ಮಾಡಲು ಅಭಿಮನ್ಯುವು ಅವರ ಮೇಲೆ ಕವಿದು ಪೌರುಷವು ಪ್ರಕಾಶಿಸುವಂತೆ ಹೋರಿ ಆ ವ್ಯೂಹವನ್ನು ಭೇದಿಸಿ ದುರ್ಯೋಧನನ ಮೇಲೆ ಕವಿಯಲು ಅವನಿಗಡ್ಡವಾಗಿ ಬಂದ ದ್ರೋಣನನ್ನೂ ಆತನ ತನಯನನ್ನೂ ಕೃಪಕರ್ಣರನ್ನೂ ಇನ್ನೂ ಅನೇಕ ಯೋಧಾಗ್ರೇಸರರನ್ನೂ ಒಬ್ಬನೇ ಇದಿರಿಸಿ ಹೋರಿ ದುಶ್ಶಾಸನನನ್ನು ಬಲಹೀನನನ್ನಾಗಿ ಮಾಡಿ ಕರ್ಣನ ತಮ್ಮನನ್ನು ನಿಶಿತಭಲ್ಲದಿಂದ ಹೊಡೆದು ಕೊಂದು ಉಳಿದವರನ್ನು ಓಡಿಹೋಗುವಂತೆ ಮಾಡಿ ವಿಕ್ರಮವನ್ನು ತೋರಿಸಿದನು. ಅನಂತರ ಸಿಂಧುದೇಶಾಧೀಶ್ವರನಾದ ಜಯದ್ರಥನು ಓಡಿಹೋಗುತ್ತಿದ್ದ ಕೌರವಸೈನ್ಯವನ್ನು ಧೈರ್ಯಗೊಳಿಸಿ ಯುದ್ಧೋನ್ಮುಖರನ್ನಾಗಿ ಮಾಡಲು ದುರ್ಯೋಧನನು ಎರಡನೆಯ ಸಾರಿ ಅಭಿಮನ್ಯುವಿನ ಮೇಲೆ ಹೋರಿ ಆ

ವಿರೋತ್ತಂಸನ ಬಾಣವರ್ಷಗಳನ್ನು ಸಹಿಸಲಾರದೆ ಹಿಂದಿರುಗಿ ಓಡಿದನು. ಆ ಮಹೀನಾಥನ ಪುತ್ರನಾದ ಲಕ್ಷ್ಮಣನು ಆ ಕುಮಾರನಿಗಿದಿರಾಗಲು ಅಭಿಮನ್ಯುವು ಸಿಂಹದಂತೆ ಗರ್ಜಿಸುತ್ತಾ ತೀವ್ರಶರಪರಂಪರೆಗಳಿಂದ ಹೊಡೆದು ಯಮಸದನಕ್ಕೆ ಕಳುಹಿಸಿದನು. ಯಾರೊಬ್ಬರೂ ಆತನಿಗಿದಿರಾಗಿ ನಿಲ್ಲಲಾರದೆ ಹೋದರು. ಅಷ್ಟರಲ್ಲಿ ದ್ರೋಣಾಶ್ವತ್ಥಾಮ ಕೃಪ ಕರ್ಣ ಕೃತವರ್ಮ ಬೃಹದ್ಬಲರೆಂಬ ಆರ್ವರು ರಥಿಕರೂ ಒಂದೇ ಸಲ ಆ ಕುಮಾರನ ಮೇಲೆ ಯುದ್ಧಕ್ಕೆ ನಿಂತು ಹೋರುತಿರಲು ಜಯದ್ರಥನು ಅಭಿಮನ್ಯುವಿಗೆ ಸಹಾಯವಾಗಿ ಬರುತ್ತಿದ್ದ ಧರ್ಮಜನನ್ನೂ ಅವನ ಕಡೆಯ ಸೈನ್ಯವನ್ನೂ ತಡೆದು ಹೋರಾಟಮಾಡುತ್ತಾ ಆತನನ್ನು ಅಭಿಮನ್ಯುವಿನ ಬಳಿಗೆ ಹೋಗಗೊಳಿಸದೆ ಅಡ್ಡಿಮಾಡಿದನು. ಆ ಬಾಲಕನೂ ಹಿಂದಾಗದೆ ಅವರೊಡನೆ ಯುದ್ಧಮಾಡುತಿರಲು ದ್ರೋಣನ ಅಪ್ಪಣೆಯಿಂದ ಕರ್ಣನು ತೀಕ್ಷ್ಣಶಿಲೀಮುಖಗಳಿಂದ ಅವನ ಬಿಲ್ಲನ್ನು ಕತ್ತರಿಸಿದನು. ಕೃತವರ್ಮನು ಆತನ ಕುದುರೆಗಳನ್ನು ಕೊಂದನು. ಕೃಪನು ಆತನ ಸಾರಥಿಗಳಿಬ್ಬರನ್ನೂ ಮೃತ್ಯುವಿಗೊಪ್ಪಿಸಿದನು. ಹೀಗೆ ವಿರಥನೂ ವಿಗತಚಾಪನೂ ಆದ ಅಭಿಮನ್ಯುವು ಜಾತಮನ್ಯುವಾಗಿ ಕತ್ತಿ ಮತ್ತು ಗುರಾಣಿಗಳನ್ನು ತೆಗೆದುಕೊಂಡು ದ್ರೋಣನ ಮೇಲೆ ಉರವಣಿಸಿ ಯುದ್ಧಮಾಡಿದನು. ಇವನ ಶತ್ರುಗಳು ಇವನ್ನು ಛೇದಿಸಿದರು. ಆಗ ಅವನು ಚಕ್ರಧಾರಿಯಾದ ವಿಷ್ಣುವನ್ನನುಕರಿಸುತ್ತಿರಲು ಆ ವಿರರು ತೀಕ್ಷ್ಣಬಾಣಗಳಿಂದ ಅದನ್ನು ತುಮುರು ತುಮುರಾಗಿ ಮಾಡಿದರು. ಬಳಿಕ ಆ ಬಾಲಕನು ಒಂದು ಗದೆಯನ್ನು ತೆಗೆದುಕೊಂಡು ಅಶ್ವತ್ಥಾಮನ ಮೇಲೆ ಹಾರಿ ಆತನನ್ನು ಓಡಿಸಿ ದುಶ್ಶಾಸನ ತನಯನ ಕುದುರೆಗಳನ್ನು ಕೆಡವಿ ಪರಾಕ್ರಮವನ್ನು ತೋರಿಸಿದನು. ಇದೇ ಆ ಕುಮಾರನ ಕಡೇ ವಿಜಯವು. ಆ ಸಮಯದಲ್ಲಿ ಆ ಇಬ್ಬರೂ ಒಬ್ಬರನ್ನೊಬ್ಬರು ಹೊಡೆಯುತ್ತಾ ನೆಲದಲ್ಲಿ ಬೀಳಲು ದುಶ್ಶಾಸನಾತ್ಮಜನು ಜಾಗ್ರತೆಯಿಂದೆದ್ದು ಅಭಿಮನ್ಯುವಿನ ತಲೆಯನ್ನು ಕತ್ತರಿಸಲು ಮಹಾಸ್ತ್ರವೇದಿಯಾದ ಆ ಬಾಲಕನು ಶರೀರತ್ಯಾಗಮಾಡಿ ಸ್ವರ್ಗಕ್ಕೆ ತೆರಳಿದನು.

ಹೀಗೆ ಅಭಿಮನ್ಯುವು ಬೀಳಲು ಯುದ್ಧವು ನಿಂತಿತು. ಧರ್ಮಜನು ಆತನಿಗೆ ಸಹಾಯಮಾಡುವುದಕ್ಕಾಗಿ ಅರಿಸೈನ್ಯವನ್ನು ಹೊಗಲು ಯತ್ನಿಸಿ ಸಾಧ್ಯವಿಲ್ಲದೆ ಹೋಗಿ ವ್ಯಥೆ ಹೊಂದುತ್ತಾ ಈಗ ಆತನ ಸಾವನ್ನು ಕೇಳಿ ದುಃಖಾರ್ಣವಮಗ್ನನಾಗಿ ಅಯ್ಯೋ ನಾನು ಹೇಗೆ ಅರ್ಜುನನನ್ನು ನೋಡಿ ನಿನ್ನ ಪ್ರಿಯ ಪುತ್ರನು ಮೃತನಾದನೆಂದು ಹೇಳಲಿ ಎಂದು ಬಹಳವಾಗಿ ಹಂಬಲಿಸುತ್ತಿದ್ದನು. ಅಲ್ಲಿಗೆ ವೇದವ್ಯಾಸನು ಬಂದು

ಆತನಿಗೆ ಕಾಣಿಸಿಕೊಂಡು ಮೃತ್ಯುದೇವತೆಯ ವೃತ್ತಾಂತವನ್ನು ಸ್ಪಷ್ಟವಾಗಿ ತಿಳಿಯಪಡಿಸಿ ಮತ್ತೆ ಹೀಗೆಂದನು:—ಧೀಮಂತರು ಸತ್ತವರಿಗಾಗಿ ವ್ಯಥೆಪಡರು. ಬದುಕಿರತಕ್ಕವರು ಮೃತರಾದವರಿಗೆ ಸಂತೋಷವೂ ಪ್ರಾಭವವೂ ಸೌಖ್ಯವೂ ಉಂಟಾಗಲೆಂದು ಅಪೇಕ್ಷಿಸಬೇಕು. ಎಂದು ಹೀಗೆ ವ್ಯಾಸನು ಶಾಂತಿವಚನಗಳನ್ನು ಉಪನ್ಯಸಿಸುತ್ತಾ ಆತನನ್ನು ಸಮಾಧಾನಗೊಳಿಸಿ ಅಂತರ್ಧಾನನಾಗಲು ಆತನು ಮನಸ್ಸಿನ ವ್ಯಥೆಯನ್ನು ಕಡಿಮೆಮಾಡಿಕೊಂಡಾಗ್ಯೂ ಅರ್ಜುನನೊಡನೆ ನಾನೇನು ಹೇಳಲೆಂದು ಯೋಚಿಸುತ್ತಾ ಪ್ರಲಾಪಿಸುತ್ತಿದ್ದನು.

ಅಷ್ಟರಲ್ಲಿ ಅರ್ಜುನನು ಸಂಶಪ್ತಕರ ಸೈನ್ಯವನ್ನು ಕಾಡುಗಿಚ್ಚಿನಂತೆ ದಹಿಸಿ ಹಿಂದಕ್ಕೆ ಬರುತ್ತಾ ದುರ್ನಿಮಿತ್ತಗಳನ್ನು ನೋಡುತ್ತಾ ತನಗೆಂತಹ ಅಶುಭವುಂಟಾಗುವುದೋ ತಿಳಿಸಬೇಕೆಂದು ಕೃಷ್ಣನನ್ನು ಪ್ರಾರ್ಥಿಸುತ್ತಾ ಸದ್ದಿಲ್ಲದಿರುವ ಶಿಬಿರವನ್ನು ಪ್ರವೇಶಿಸಿ ವ್ಯಾಕುಲಿತವಾಗಿರುವ ಮನಸ್ಸಿನಿಂದ ಮುಂದಕ್ಕೆ ಬಂದು ವ್ಯಸನಾಕ್ರಾಂತರಾಗಿ ಏನನ್ನೂ ಹೇಳದೆ ಸುಮ್ಮನೆ ಕುಳಿತಿದ್ದ ತನ್ನ ಸಹೋದರರನ್ನು ನೋಡಿ ತನ್ನ ಮುದ್ದುಮಗನು ಅಲ್ಲಿಲ್ಲದಿದ್ದುದರಿಂದ ಧೀಮಂತನಾದ ಆತನು ಮನಸ್ಸಿನಲ್ಲಿ ನಿಜವನ್ನೂಹಿಸಿ ಅಭಿಮನ್ಯುವೆಲ್ಲಿ ಹೋದನೆಂದು ಕೇಳುತ್ತಾ ಹೀಗೆಂದನು.—ಅವನ ವಿನಾ ನಿಮ್ಮಲ್ಲೊಬ್ಬರೂ ಆ ವ್ಯೂಹವನ್ನು ಭೇದಿಸಲು ಸಮರ್ಥರಲ್ಲ. ನಾನು ಅವನಿಗೆ ಅಂತಹ ವ್ಯೂಹವನ್ನು ಪ್ರವೇಶಿಸುವುದನ್ನು ಮಾತ್ರ ಕಲಿಸಿದ್ದೆನೇ ಹೊರತು ಹಿಂದಕ್ಕೆ ಬರತಕ್ಕ ವಿಧವನ್ನು ತಿಳಿಸಿರಲಿಲ್ಲ. ಆ ಬಾಲಕನನ್ನು ಸೈನ್ಯದಲ್ಲಿ ಪ್ರವೇಶಿಸುವಂತೆ ನೀವು ಗೊತ್ತುಮಾಡಿದಿರಾ ? ಎಂದು ಹೇಳಿ ಉತ್ತರವನ್ನಪೇಕ್ಷಿಸದೆ ಮಗನ ಮರಣಕ್ಕಾಗಿ ಹೀಗೆ ಪ್ರಲಾಪ ಮಾಡ ತೊಡಗಿದನು. ಅಕಟಾ! ಕೃಪ ದ್ರೋಣ ಕರ್ಣರು ನನ್ನ ಪ್ರಿಯ ಸುತನಿಗೆ ಇದಿರಾಗಿ ಹೋರುವಲ್ಲಿ ನನ್ನ ತಂದೆಯು ಈ ತೊಂದರೆಯಿಂದ ನನ್ನನ್ನು ಕಾಪಾಡುವನೆಂದು ಸ್ಮರಿಸಿರಬಹುದಲ್ಲವೆ? ನೀವೂ ಪಾಂಚಾಲರೂ ಆ ಕುಮಾರನನ್ನು ಕಾಪಾಡಲಾರದೇ ಹೋದಿರಾ ? ನೀವು ಕವಚಗಳನ್ನು ಹಾಕಿಕೊಳ್ಳುವುದು ಅಲಂಕಾರಕ್ಕಾಗಿಯೇ ? ಅರಾತಿವರ್ಗವು ಅಭಿಮನ್ಯುವನ್ನು ಕೊಲ್ಲುತ್ತಿದ್ದರೆ ನೀವೇನು ಮಾಡುತ್ತಿದ್ದಿರಿ ಎಂದು ಈ ರೀತಿಯಲ್ಲಿ ಅರ್ಜುನನು ಹಂಬಲಿಸುತ್ತಿರಲು ವಾಸುದೇವನೂ ಧರ್ಮತನಯನೂ ಎಲ್ಲ ವಿಧಗಳಲ್ಲಿಯೂ ಆತನಿಗೆ ಪ್ರಿಯರಾದುದರಿಂದ ಅವರವಿನಾ ಮತ್ತೆ ಯಾರೂ ಬದಲು ಹೇಳಲು ಧೈರ್ಯವಿಲ್ಲದವರಾಗಿ ಸುಮ್ಮನಿದ್ದರು. ಧರ್ಮಜನು ಧನಂಜಯನೊಡನೆ ಹೀಗೆಂದನು. ಆ ಪದ್ಮವ್ಯೂಹವನ್ನು ಪ್ರವೇಶಿಸುವಂತೆ ನಾನು

ಕಳುಹಿಸಲು ಅಭಿಮನ್ಯುವು ಅದರಲ್ಲಿ ಹೊಕ್ಕನು. ನಾವೆಲ್ಲರೂ ಅವನಿಗೆ ಸಹಾಯ ಮಾಡುವುದಕ್ಕಾಗಿ ಆತನ ಹಿಂದೆ ಹೋಗುತ್ತಿರಲು ಸೈಂಧವನು ನಮಗಡ್ಡವಾಗಿ ಬಂದು ನಮ್ಮನ್ನು ಹೋಗಗೊಡಿಸದೆ ತಡೆದನು; ಎನ್ನಲು ಭೀಭತ್ಸುವು ಕೋಪೋದ್ದೀಪಿತನಾಗಿ ಹೀಗೆ ಶಪಥಮಾಡಿದನು. ಹಾಗಾದರೆ ನಾನು ಸೈಂಧವನನ್ನು ಕೊಲ್ಲುವುದು ನಿಶ್ಚಯವು. ನಾಳೆ ನಾನು ಅವನನ್ನು ಕೊಲ್ಲುವುದಕ್ಕೆ ಮೊದಲು ಸೂರ್ಯನು ಅಸ್ತಂಗತನಾದಲ್ಲಿ ನಾನು ಅಗ್ನಿಪ್ರವೇಶಮಾಡುವೆನು. ಎಂದು ಹೇಳುತ್ತಾ ದೇವದತ್ತವೆಂಬ ಶಂಖವನ್ನು ಪೂರಿಸಿದನು. ಆ ಪ್ರತಿಜ್ಞೆಯನ್ನು ಕೇಳಿ ಜಯದ್ರಥನು ಬಹಳವಾಗಿ ಭಯ ಹೊಂದಿ ಪಾಳಯದಿಂದ ಓಡಿಹೋಗಬೇಕೆಂದು ಯೋಚಿಸುತ್ತಿರಲು ದುರ್ಯೋಧನಾಧಿಗಳು ನಾವು ನಿನ್ನನ್ನು ಕಾಪಾಡುವವರಿರುವಲ್ಲಿ ನೀನು ಭಯಪಡಲೇಕೆಂದು ಸಮಾಧಾನ ಪಡಿಸಿ ನಿಲ್ಲಿಸಿದರು. ಸೈಂಧವನು ದ್ರೋಣನನ್ನು ನೋಡಿ ನನಗೂ ಸವ್ಯಸಾಚಿಗೂ ಧನುರ್ವಿದ್ಯೆಯಲ್ಲಿರುವ ತಾರತಮ್ಯವೆಂತಹುದೆಂದು ಕೇಳಲು ಗುರುವು ಅವನನ್ನು ಕುರಿತು ‘‘ನೀನೂ ನರನೂ ಧನುರ್ವಿದ್ಯೆಯಲ್ಲಿ ಸಮಾನರೇ ಆದರೂ ಆತನು ಶ್ರಮಿಸ ಹಿಷ್ಟ್ಣವಾಗಿ ಯೋಗವನ್ನುಮಾಡತಕ್ಕವನಾದುದರಿಂದ ನಿನಗಿಂತಲೂ ಹೆಚ್ಚಿನವನೇ ಆಗಿರುವನು. ಆದರೂ ನಾನು ನಿನ್ನನ್ನು ಕಾಪಾಡುವೆನು. ಪಾರ್ಥನು ಪ್ರವೇಶಿಸಲಸಾಧ್ಯವಾದ ವ್ಯೂಹವನ್ನೊಡ್ಡುವೆನು’’ ಎಂದು ಹೇಳಿದನು.

ಇಷ್ಟರಲ್ಲಿ ವಾಸುದೇವನು ವಾಸವಿಯು ಮಾಡಿದ ಪ್ರತಿಜ್ಞೆಯನ್ನು ಕೇಳಿ ಆತನನ್ನು ದೂರುತ್ತ ‘‘ನನ್ನೊಡನೆ ಆಲೋಚಿಸದೆ ನೀನು ಇಂತಹ ಘೋರವಾದ ಶಪಥವನ್ನು ಮಾಡಬಹುದೆ ? ನೀನು ಹೀಗೆ ಪ್ರತಿಜ್ಞೆಯನ್ನು ಮಾಡಿದ ಕಾರಣ ಕೌರವರಲ್ಲಿ ಆರ್ವರು ಯೋಧಾಗ್ರೇಸರರು ಸಿಂಧು ರಾಜನಿಗೆ ಮುಂದೆ ನಿಲ್ಲುವರು. ಅಭೇದ್ಯವಾದ ವ್ಯೂಹವನ್ನು ಕಟ್ಟಿ ಅದರ ಮಧ್ಯದಲ್ಲಿ ಸೈಂಧವನನ್ನು ನಿಲ್ಲಿಸುವರು. ಆದರೂ ನೀನು ಮಾಡಿದ ಪ್ರತಿಜ್ಞೆಯು ತಪ್ಪಿಹೋಗದಹಾಗೆ ತಕ್ಕ ಉಪಾಯವನ್ನು ಹುಡುಕಿ ನಿನ್ನನ್ನು ಕಾಪಾಡುವೆನು.’’ ಎಂದು ಹೇಳಿ ಗೋವಿಂದನು ತನ್ನ ರಥವನ್ನೂ ಆಯುಧಗಳನ್ನೂ ಭದ್ರಪಡಿಸುವಂತೆ ನಿಯಮಿಸಿದನು. ಅನಂತರದಲ್ಲಿ ಅರ್ಜುನನು ನಿದ್ರಿಸಲು ಪಂಕಜಾಕ್ಷನು ಆತನಿಗೆ ಕಾಣಿಸಿಕೊಂಡು ಆತನು ಸ್ಥೂಲಶರೀರವನ್ನು ಬಿಟ್ಟುಬರುವಂತೆ ಮಾಡಿ ಆತನನ್ನು ಕೈಲಾಸಕ್ಕೆ ಕರೆದುಕೊಂಡುಹೋದನು. ಅಲ್ಲಿ ಮಹಾದೇವನು ಅಪ್ರತರ್ಕ್ಯಮಹಿಮೆಯಿಂದ ಪ್ರಕಾಶಿಸುತ್ತಾ ಕುಳಿತಿರಲು ಕೇಶವಾರ್ಜುನರು ಆ ಮಹಾದೇವನಿಗೆ ನಮಸ್ಕರಿಸಿ ಅನೇಕ ವಿಧಗಳಿಂದ ಪೂಜಿಸಿ ಮರುದಿನದ ಉಪ

ಯೋಗಕ್ಕಾಗಿ ಮಹಾದೇವನ ಮಹಾಸ್ತ್ರವಾದ ಪಾಶುಪತವನ್ನು ಆ ದೇವನದೆಸೆ ಯಿಂದ ಹೊಂದಿ ಇನ್ನು ನಮಗೆ ಜಯವು ನಿಶ್ಚಯವೆಂದು ಸಂತೋಷಿಸುತ್ತ ಮತ್ತೆ ಬಂದರು. ಹದಿನಾಲ್ಕನೆಯ ದಿನ ಯುದ್ಧವು ಸಂಪ್ರಾಪ್ತವಾಗುತಿರಲು ಅರ್ಜುನನು ಧರ್ಮಜನಿಗೆ ಸಹಾಯಮಾಡುವುದಕ್ಕೆ ಸಾತ್ಯಕಿಯನ್ನು ನಿಯಮಿಸಿ ತನ್ನ ಪ್ರತಿಜ್ಞೆ ಯನ್ನು ನೆರವೇರಿಸಿಕೊಳ್ಳುವುದಕ್ಕಾಗಿ ಸಿಂಧುಪತಿಯಮೇಲೆ ಹೊರಟನು. ಹೀಗೆ ಹೊರಟು ಆನೆಯಮೇಲೆ ಬರುತ್ತಿದ್ದ ದುರ್ಮರ್ಷಣನನ್ನು ಓಡಿಸಿ ಅವನ ಸೈನ್ಯವನ್ನು ನುಗ್ಗುನುಚ್ಚುಮಾಡಿ ತನ್ನ ಗುರುವಾದ ದ್ರೋಣನನ್ನು ನೋಡಿ ಭಕ್ತಿವಿನಯಗಳಿಂದ ಆತನಿಗೆ ನಮಸ್ಕರಿಸಿ ಆತನು ಜಯದ್ರಥನಿಗೆ ರಕ್ಷಕನಾದುದರಿಂದ ಮೊದಲು ಆತ ನೊಡನೆ ಹೋರತೊಡಗಿದನು. ಎಷ್ಟು ಪರಾಕ್ರಮದಿಂದ ಹೋರಿದರೂ ಪಾರ್ಥನು ದ್ರೋಣನನ್ನು ಗೆಲ್ಲಲಾರದೆಹೋದನು. ಅನಂತರ ಮಾಧವನ ಮಾತಿನಿಂದ ಅರ್ಜುನನು ಹಿಂದಕ್ಕೆ ತಿರುಗಿ ಬೇರೆಮಾರ್ಗದಿಂದ ಶತ್ರುವಿನ ಬಳಿಗೆ ಹೋಗಲು ಯತ್ನಿಸಿದನು. ಅಲ್ಲಿ ಶ್ರುತಾಯುವೂ ಅಚ್ಯುತಾಯುವೂ ಇವನ ಮೇಲೆ ಬೀಳಲು ಅವರ ಬಾಣಹತಿಯಿಂದ ನೊಂದು ಕೌಂತೇಯನು ಮೂರ್ಛಿತನಾಗಿ ತನ್ನ ಧ್ವಜಸ್ತಂಭಕ್ಕೆ ಸ್ವಲ್ಪಹೊತ್ತು ಒರ ಗಿದ್ದು ಕೂಡಲೆ ಪ್ರಜ್ಞೆಹೊಂದಿ ಅವರುಗಳನ್ನು ಐಂದ್ರಾಸ್ತ್ರಪ್ರಯೋಗದಿಂದ ಗತ ಜೀವರನ್ನಾಗಿ ಮಾಡಿ ಮುಂದೆ ಹೊರಡುತ್ತಿದ್ದನು. ಅಷ್ಟರಲ್ಲಿ ಕೇಶವನು ಸಮೀಪ ದಲ್ಲಿ ವೈರಿಗಳಿಲ್ಲದಿರುವ ಸಮಯದಲ್ಲಿ ಕುದುರೆಗಳಿಗೆ ಸ್ನಾನಮಾಡಿಸಿ ದಾಹವನ್ನು ತೀರಿ ಸಿಕೊಂಡು ಬರಲು ಧನಂಜಯನು ಪುನಃ ರಥವನ್ನು ಹತ್ತಿ ತನ್ನನ್ನಿದಿರಿಸಿದವರನ್ನು ಗೆಲ್ಲುತ್ತಾ ದ್ರೋಣನ ಮಂತ್ರಿಗಳಿಂದ ಅಭೇದ್ಯನಾಗಿ ಮಾಡಲ್ಪಟ್ಟ ಕಾಯಬಲವುಳ್ಳ ದುರ್ಯೋಧನನು ತನಗಿದಿರಾಗಿ ಬಂದರೂ ಅವನನ್ನು ಲೆಕ್ಕಿಸದೇ ಮುಂದೆ ಹೋಗುತ್ತಿ ದ್ದನು. ಅಷ್ಟರಲ್ಲಿ ದ್ರೋಣನು ಯುಧಿಷ್ಠಿರನನ್ನು ವಿರಥನನ್ನಾಗಿ ಮಾಡಿ ಆ ಮನು ಜೇಶ್ವರನನ್ನು ಹಿಡಿಯಹೋಗಲು ವೀರವರನಾದ ಸಾತ್ಯಕಿಯು ತಪ್ಪಿಸಿದನು. ಧರ್ಮ ಜನಿಂದ ಕಳುಹಿಸಲ್ಪಟ್ಟು ಸಾತ್ಯಕಿಯು ಅರ್ಜುನನ ಬಳಿಗೆಹೋಗಿ ದ್ರೋಣನ ವ್ಯೂಹ ವನ್ನು ಭೇದಿಸಿ ಆತನ ಸಾರಥಿಯನ್ನು ನಾಶಮಾಡಲು ಆತನ ಕುದುರೆಗಳು ರಥದೊಡನೆ ಆತನನ್ನು ಎಳೆದುಕೊಂಡು ಓಡಿಹೋದುವು. ಭೀಮನು ಅತಿ ಮಾನುಷ ಪರಾಕ್ರಮವನ್ನು ತೋರಿಸುತ್ತಾ ತನ್ನ ಗದೆಯೊಡನೆ ಗುರುವಿನ ರಥವನ್ನು ತುಮುರು ತುಮುರಾಗಿ ಮಾಡಲು ದ್ರೋಣನು ಭೂಮಿಯ ಮೇಲಕ್ಕೆ ಧುಮಿಕಿ ಪ್ರಾಣ ಗಳನ್ನು ಕಾಪಾಡಿಕೊಂಡನು. ಬಳಿಕ ಭೀಮನು ಕರ್ಣನಮೇಲೆ ಬಿದ್ದು ಅವ

ನನ್ನು ಓಡಿಸಲು ಅವನು ಪುನಃ ಬಂದು ಭೀಮನಿಗಿದಿರಾಗಿ ಹೋರತೊಡಗಿದನು. ಅಷ್ಟರಲ್ಲಿ ಸ್ವಲ್ಪಹೊತ್ತಿಗೇ ಕರ್ಣನು ವಾಯುಜನಪೆಟ್ಟುಗಳಿಂದ ನೊಂದಿರಲು ಆತನು ಅರ್ಜುನನ ಶಪಥವನ್ನು ಜ್ಞಾಪಕಮಾಡಿಕೊಂಡು ಆತನನ್ನು ಕೊಲ್ಲದೆಬಿಟ್ಟನು. ಸ್ವಲ್ಪ ಹೊತ್ತಿಗೆ ಇದು ವ್ಯತ್ಯಸ್ತವಾಗಲು ಕರ್ಣನು ತಾನು ಕುಂತಿಗೆ ಕೊಟ್ಟ ಭಾಷೆಯನ್ನು ಸ್ಮರಿಸಿ ಭೀಮನನ್ನು ಕೊಲ್ಲದೆ ಬಿಟ್ಟನು. ಅಷ್ಟರಲ್ಲಿ ಅಂಬರಮಣಿಯು ಅಸ್ತಾಚಲ ಶೃಂಗವನ್ನಲಂಕರಿಸುತ್ತಿದ್ದನಾದರೂ ಅರ್ಜುನನ ಪ್ರತಿಜ್ಞೆಯು ನೆರವೇರದಂತಾಯಿತು. ಎಲ್ಲರೂ ಬಹು ಎಚ್ಚರಿಕೆಯಿಂದ ಸೈಂಧವನನ್ನು ಮೈಗಾವಲಿನಲ್ಲಿಟ್ಟು ಅರ್ಜುನನ ಕಣ್ಣಿನಿಂದ ಮರೆಮಾಡಿದ್ದರು. ಆ ಸಮಯದಲ್ಲಿ ಜನಾರ್ದನನು ತನ್ನ ಯೋಗವಶ ದಿಂದ ಸೂರ್ಯನನ್ನು ತನ್ನ ಚಕ್ರದಿಂದ ಮರೆಮಾಡಲು ಸೂರ್ಯನಸ್ತಮಿಸಿದ ತೆರ ದಲ್ಲಿ ಕಾಣಬಂತು. ಇನ್ನು ನನಗೆ ಭಯವಿಲ್ಲವೆಂದು ಯೋಚಿಸುತ್ತಾ ಸಿಂಧುರಾಜನು ಹೊರಹೊರಟು ಎಲ್ಲರ ಜತೆಯಲ್ಲಿ ಬಂದು ನಿಂತನು. ಆಗ ಅರ್ಜುನನು ಅವನಮೇಲೆ ಉರವಣಿಸಿ ಆತನನ್ನು ಕಾಯುತ್ತಿದ್ದ ಆರ್ವರು ರಥಿಕರಮೇಲೆ ಸುನಿಶಿತಗಳಾದ ಬಾಣಗಳನ್ನು ಪ್ರಯೋಗಿಸಿ ಅವರನ್ನು ಓಡಿಸಿ ಬಂದು ಕ್ರೂರಾಸ್ತ್ರವನ್ನು ಅಭಿ ಮಂತ್ರಿಸಿ ಜಯದ್ರಥನಮೇಲೆ ಪ್ರಯೋಗಿಸಿ ಅವನ ತಲೆಯನ್ನು ಛೇದಿಸಿದನು. ಅಷ್ಟ ರಲ್ಲಿ ಶ್ರೀಕೃಷ್ಣನು ಗಾಂಡೀವಿಯನ್ನು ಕುರಿತು ''ಈ ಸೈಂಧವನ ತಲೆಯನ್ನು ಭೂಮಿ ಯಮೇಲೆ ಹಾಕುವವನ ತಲೆಯು ನೂರುಪಾಲಾಗಿ ಒಡೆಯುವಂತೆ ಇವನ ತಂದೆಯು ಶಪಿಸಿರುವನಾದುದರಿಂದ ಅದನ್ನು ಭೂಮಿಯಮೇಲೆ ಬೀಳಿಸದಿರೆಂದು ಹೇಳಲು ಅರ್ಜು ನನು ಸಂಗಡಲೇ ಶರಪರಂಪರೆಗಳನ್ನು ಹೊಡೆಯುತ್ತಾ ಅವನ ತಲೆಯನ್ನು ಅವನ ತಂದೆಯಾದ ವೃದ್ಧಕ್ಷತ್ರನ ತೊಡೆಯಮೇಲೆ ಬೀಳುವಂತೆ ಮಾಡಲು ಆತನು ಇದೇ ನೆಂದು ಗಾಬರಿ ಬಿದ್ದೆದ್ದು ಆ ಶಿರಸ್ಸನ್ನು ನೆಲದಮೇಲೆ ಬೀಳಿಸಲು ಆತನು ತನ್ನ ಶಾಪದಿಂದ ತಾನೇ ಮೃತನಾದನು. ಹೀಗೆ ಸೈಂಧವನನ್ನು ವಧೆಮಾಡಿ ಅರ್ಜುನನು ತಾನು ಮಾಡಿದ ಪ್ರತಿಜ್ಞೆಯನ್ನು ನೆರವೇರಿಸಲು ಸೂರ್ಯಮಂಡಲವು ಪುನಃ ಕಾಣಬಂತು. ಆ ಕೂಡಲೆ ವಿಜಯನು ಕೃಪಾಶ್ವತ್ಥಾಮರ ಸೈನ್ಯಗಳ ಮೇಲೆ ಬಿದ್ದು ಓಡಿಸಿದನು. ಸಾತ್ಯಕಿಯು ಕರ್ಣನನ್ನು ಪುನಃ ವಿರಥನನ್ನಾಗಿ ಮಾಡಿದನು. ಹೊತ್ತು ಮುಳುಗಿದಾಗ್ಯೂ ಆದಿನ ಎಂದಿನಂತೆ ಯುದ್ಧವು ನಿಲ್ಲಿಸಲ್ಪಡದೆ ದಟ್ಟವಾದ ಕತ್ತಲೆ ಯಲ್ಲೂ ಘೋರವಾದ ಯುದ್ಧವು ನಡೆಯುತಿದ್ದಿತು. ಆ ರಾತ್ರಿ ಕರ್ಣ ಘಟೋತ್ಕ ಚರಿಗೆ ಮಹಾಯುದ್ಧ ಪ್ರಾಪ್ತವಾಗಲು ಘಟೋತ್ಕಚನ ಬಾಣಹತಿಗೆ ಆಯಾಸ

ಹೊಂದಿ ಆತನು ಮಾಡುತಿದ್ದ ಮಾಯೆಗಳಿಗೆ ಪ್ರತಿಯನ್ನಾಚರಿಸಲು ತೋರದವನಾಗಿ ಪೂರ್ವದಲ್ಲಿ ತನ್ನ ಸಹಜ ಕವಚ ಕುಂಡಲಗಳಿಗೆ ಬದಲಾಗಿ ಮಹೇಂದ್ರನು ಕೊಟ್ಟ ವೈಜಯಂತಿಯೆಂಬ ದಿವ್ಯ ಶಕ್ತಿಯನ್ನು ಆ ರಾಕ್ಷಸನಮೇಲೆ ಪ್ರಯೋಗಿಸಿದನು. ಅದು ಅಮೋಘವಾದುದಾದುದರಿಂದ ಅವನ ಶರೀರವನ್ನು ಸಿಡಿಲಿನಂತೆ ಭೇದಿಸಿ ವಿಗತಾಸುವನ್ನಾಗಿ ಮಾಡಲು ಅವನು ಘೋರನೆ ನೆಲದಲ್ಲಿ ಬಿದ್ದನು. ಕೌರವರಲ್ಲಿ ಜಯ ಜಯನಿನದವುಂಟಾಯಿತು. ಹೀಗೆ ಮೃತನಾದ ಘಟೋತ್ಕಚನಿಗಾಗಿ ಪಾಂಡವರೆಲ್ಲರೂ ಶೋಕಸಂತಪ್ತರಾದರು. ಕೃಷ್ಣನು ಸಂತೋಷದಿಂದುಬ್ಬುತ್ತಾ ಅರ್ಜುನನನ್ನಾಲಂಗಿಸಿದನು. ಅದಕ್ಕೆ ಅರ್ಜುನನು ಆಶ್ಚರ್ಯಪಡುತ್ತಾ ಏಕೆ ಹೀಗೆ ಸಂತೋಷಪಡುತ್ತಿರುವಿಯೆಂದು ಕೇಳಲು ಮುರಾರಿಯು ಅವನನ್ನು ಕುರಿತು “ಇಂದ್ರದತ್ತವಾದ ಶಕ್ತಿಯು ಕರ್ಣನ ಬಳಿಯಲ್ಲಿರುವವರೆಗೂ ಆತನು ತನಗಿಷ್ಟಬಂದ ಶತ್ರುವೊಬ್ಬನನ್ನು ಸಂಹರಿಸಲು ಶಕ್ತನಾಗಿದ್ದನು. ಈಗ ಅದು ಪ್ರಯೋಗಿಸಲ್ಪಟ್ಟಿತಾದ ಕಾರಣ ನಿನ್ನ ಪ್ರಾಣಗಳಿಗೆ ಇನ್ನು ಭಯವಿಲ್ಲ. ನೀನು ಇನ್ನು ಅವನನ್ನು ಸಂಹರಿಸಲು ಶಕ್ತನಾದೆ” ಎಂದು ಹೇಳಿದನು. ನಿಜವಾಗಿಯೂ ಕರ್ಣನು ಆ ಶಕ್ತಿಯನ್ನು ತೆಗೆದುಕೊಂಡು ಅರ್ಜುನನನ್ನು ಕೊಲ್ಲಬೇಕೆಂದೆಣಿಸಿದ್ದನಲ್ಲದೆ ಸಮರವೊದಗಿಸಿದಾಗಲೆಲ್ಲಾ ಅದನ್ನು ಪ್ರಯೋಗಿಸದೇ ಮರೆತಿದ್ದನು. ಈಗ ಆ ಶಕ್ತಿಯು ಪ್ರಯೋಗಿಸಲ್ಪಟ್ಟಿತಾದುದರಿಂದ ಅವನ ಬಲವೆಲ್ಲವೂ ವೆಚ್ಚವಾಯಿತು. ತಾನಿನ್ನು ಬದುಕಿರುವುದು ಕಷ್ಟವೆಂದು ಆತನೂ ತಿಳಿದನು. ಅನಂತರ ಅರ್ಧರಾತ್ರಿಯಾಗಲು ಆ ವೀರರು ಯುದ್ಧಮಾಡಿ ಬೇಸತ್ತು ನಿದ್ರೆಮಾಡಲು ಯತ್ನಿಸಲು ಇಂದ್ರತನಯನು ಚಂದ್ರನು ಉದಯವಾಗುವವರೆಗೆ ನಿಲ್ಲಿಸಿದನು.

ಪುನಃ ಹದಿನೈದನೆಯ ದಿನದ ಬವರಕ್ಕೆ ಆ ವೀರರು ಪ್ರಯತ್ನಿಸಿದರು. ಆ ದಿನ ದ್ರೋಣಾರ್ಜುನರಿಗೆ ಭೀಕರವಾದ ದ್ವಂದ್ವಯುದ್ಧ ಉಂಟಾಗಲು ಅದರಲ್ಲಿ ಒಬ್ಬರಿಗೂ ಜಯವುಂಟಾಗದಂತಾಯತು. ಅನಂತರ ಅವರಿಬ್ಬರೂ ಒಬ್ಬರೊಡನೊಬ್ಬರು ಕಾದುವುದನ್ನು ಬಿಟ್ಟು ಇತರ ಶತ್ರುಗಳಿಗೆ ಇದಿರಾಗಿ ಹೋರುತ್ತಾ ಅನೇಕರನ್ನು ಸಂಹರಿಸುತ್ತಿರಲು ಅಶ್ವತ್ಥಾಮನು ಮೃತನಾದನೆಂದು ದ್ರೋಣನೊಡನೆ ಯಾರಾದರೂ ಹೇಳಬೇಕೆಂದು ಮುರಾಂತಕನು ಹೇಳಲು ನರನು ಅದಕ್ಕೊಡಂಬಡದೆ ಹೋದನು. ಭೀಮನು ಅಶ್ವತ್ಥಾಮವೆಂಬ ಹೆಸರುಳ್ಳ ಕುಂಜರವನ್ನು ತಾನು ಸಂಹರಿಸಿದನಾದಕಾ

ರಣ ದ್ರೋಣನನ್ನು ನೋಡಿ ಉಚ್ಚಸ್ವರದಿಂದ ಅಶ್ವತ್ಥಾಮನು ಸತ್ತನೆಂದು ನಿಗೂಢ ಭಾವದಿಂದ ಹೇಳಿದನು. ಆ ಮಾತುಗಳನ್ನು ಕೇಳಿ ದ್ರೋಣನು ಸ್ವಲ್ಪಕಾಲ ನಿರ್ವಿಣ್ಣಚೇತಸನಾಗಿದ್ದು ಪುನಃ ಈ ಮಾತು ಅಸತ್ಯವಾಗಿರಬಹುದೋ ಏನೋ ಎಂದು ಯೋಚಿಸುತ್ತಿದ್ದನು. ಆ ಸಮಯದಲ್ಲಿ ಕೆಲವುಮಂದಿ ಮಹರ್ಷಿಗಳು ದ್ರೋಣನೊಡನೆ ನೀನು ಈ ಮನುಷ್ಯಲೋಕವನ್ನು ಬಿಡಬೇಕಾದ ಸಮಯವು ಸಮೀಪವಾಯಿತೆಂದು ಹೇಳಿದರು. ಅಷ್ಟರಲ್ಲಿ ಅವನನ್ನು ಸಂಹರಿಸುವುದಕ್ಕಾಗಿ ಹುಟ್ಟಿದ್ದ ಧೃಷ್ಟದ್ಯುಮ್ನನು ಆ ಸ್ಥಳಕ್ಕೆ ಬಂದು ಆತನ ಮುಂದೆ ಕಾಣಿಸಿಕೊಳ್ಳಲು ಆತನ ಮನಸ್ಸು ವ್ಯಸನಗೊಂಡಿತು. ಆಗ ದ್ರೋಣನು ತನ್ನವರೊಡನೆ “ಧರ್ಮನಂದನನು ತ್ರಿಲೋಕಾಧಿಪತ್ಯವನ್ನು ಕೊಟ್ಟಾಗ್ಯೂ ಅಸತ್ಯ ಹೇಳಲಾರನೆಂದು ನಾನು ಚೆನ್ನಾಗಿ ಬಲ್ಲೆನು. ಆತನನ್ನು ನೋಡಿ ನನ್ನ ಮಗನು ಸತ್ತನೆಂಬುದು ನಿಜವೇ ಎಂಬದಾಗಿ ಕೇಳಿಬನ್ನಿ” ಎಂದು ಹೇಳಿಕಳುಹಿಸಿದನು. ಆಗ ಕೇಶವನು ದ್ರೋಣತನಯನು ಸತ್ತನೆಂದು ಹೇಳೆಂಬದಾಗಿ ಧರ್ಮಜನಿಗಪ್ಪಣೆಮಾಡಿದನು. ಇದೇನು ? ಅಸತ್ಯಹೇಳೆಂದು ಶ್ರೀಕೃಷ್ಣನು ಆಜ್ಞಮಾಡಿದನೇ ? ಎಂದು ಸಂದೇಹಪಡ ಕೆಲಸವಿಲ್ಲ. ಭಗವಂತನು ಯುಧಿಷ್ಠಿರನ ಸತ್ಯಪರಾಯಣತೆಯನ್ನು ಪರೀಕ್ಷಿಸುವುದಕ್ಕಾಗಿ ಹೀಗೆ ಧರ್ಮಜನಿಗೆ ಅಸತ್ಯ ಹೇಳೆಂದು ನುಡಿದನು. ಆ ಮಹೀಪತಿಗೆ ತನ್ನ ಪ್ರತಿಜ್ಞೆ ಯಾವ ರೀತಿಯಿರುವುದೋ ಅದರಂತೆ ನಡೆಸದೆ ಇತರರ ಮಾತುಗಳನ್ನು ಕೇಳತಕ್ಕದ್ದು ಸ್ವಭಾವವಾದ ದುರ್ಗುಣವಾಗಿತ್ತು. ಆತನೆಷ್ಟು ಧರ್ಮಪರನಾಗಿದ್ದರೂ ಶಾಂತನಾಗಿದ್ದರೂ ಸೈರಣೆಯುಳ್ಳವನಾಗಿದ್ದರೂ ಅನಘನಾಗಿದ್ದರೂ ಈ ದುರ್ಗುಣವೊಂದು ಆತನಲ್ಲಿದ್ದುದರಿಂದ ಅದು ಈಗ ಬಯಲಿಗೆ ಬಂದು ಆತನಿಗೆ ಭಂಗವನ್ನುಂಟುಮಾಡುವ ಸಂದರ್ಭವೊದಗಿತಾದುದರಿಂದ ಆತನು ಈ ರೀತಿಯಲ್ಲಿ ಭಗವಂತನಿಂದ ಪರೀಕ್ಷಿಸಲ್ಪಟ್ಟವನಾಗಿ ಭಂಗಹೊಂದಿದನು. ಹೀಗೆ ಕೃಷ್ಣಪ್ರೇರಿತನಾಗಿ ಅಜಾತಶತ್ರುವು ಗಟ್ಟಿಯಾದ ಧ್ವನಿಯಿಂದ ಅಶ್ವತ್ಥಾಮಾ ಹತ ನಾದನೆಂದು ಒತ್ತಿಹೇಳಿ ಮೆಲ್ಲಗೆ ಕುಂಜರ ವೆಂದು ಹೇಳಿ ಅಸತ್ಯದೋಷವುಂಟಾಗದಿರುವುದಕ್ಕಾಗಿ ಇಂತಹ ಕುತ್ಸಿತವನ್ನು ಮಾಡಿದನಾದರೂ ಪರೀಕ್ಷಿಸಿದಲ್ಲಿ ಇದು ಕೇವಲ ಅನೃತವನ್ನು ಖಂಡಿತವಾಗಿ ಹೇಳುವುದಕ್ಕಿಂತಲೂ ನಿಂದ್ಯವಾದುದೇ ಸರಿ. ಆತನು ಹೀಗೆ ಹೇಳಲು ಯಾವಾಗಲೂ ಭೂಮಿಯಿಂದ ಮೇಲ್ಭಾಗದಲ್ಲಿ ನಾಲ್ಕುಬೆಟ್ಟಿನಷ್ಟು ಎತ್ತರದಲ್ಲಿ ನಿಂತಿರುತ್ತಿದ್ದ ಆತನ ರಥವೂ ಕುದುರೆಗಳೂ

ಸಹ ಭೂಮಿಯ ಮೇಲೆ ನಿಂತು ಆತನ ಅಸತ್ಯವನ್ನು ಲೋಕಕ್ಕೆಲ್ಲಾ ಪ್ರಕಟಮಾಡಿದವು. ಆದರೂ ಈ ಭಂಗದಿಂದಲೂ ಅನೃತಭಾಷೆಯಿಂದಲೂ ತನ್ನ ಗುರುವನ್ನು ಸಂಹರಿಸಿದೆನೆಂದು ಆತನಿಗುಂಟಾದ ಶಾಶ್ವತವಾದ ದುಃಖದಿಂದಲೂ ಮೊದಲು ಹೇಳಿದ ಆತನ ಅವಗುಣವು ಹೋಯಿತು. ಕೊನೆಗೆ ಆತನ ಅವಸಾನ ಕಾಲದಲ್ಲಿ ಒಬ್ಬ ದೇವತೆಯು ಆತನನ್ನು ಪರೀಕ್ಷಿಸುವುದಕ್ಕಾಗಿ ಅವನ ಹಿಂದೆ ಬಂದ ನಾಯಿಯನ್ನು ಬಿಟ್ಟುಬಿಡೆಂದು ಬೋಧಿಸಲು ಆತನು ಅಧರ್ಮಕ್ಕೆ ಅಂಜಿ, ಸ್ವರ್ಗವನ್ನಾದರೂ ಬಿಡುವೆನೇ ಹೊರತು ನನ್ನನ್ನಾಶ್ರಯಿಸಿದವರನ್ನು ಬಿಡಲೊಲ್ಲೆನೆಂದು ಹೇಳಿ ಧರ್ಮಪರನಾದನು. ಹೀಗೆ ನಮ್ಮಲ್ಲಿರುವ ದೋಷಗಳನ್ನು ಬಯಲುಮಾಡಿ ನಮ್ಮ ಪ್ರತಿಜ್ಞೆಗೆ ಪ್ರತಿಯಾಗಿ ಬಹಳ ಹೆಚ್ಚಾದ ಆಪತ್ತುಗಳೊದಗಿದಾಗ್ಯೂ ನಮ್ಮನ್ನು ದೋಷರಹಿತರನ್ನಾಗಿ ಮಾಡುವುದಕ್ಕಾಗಿ ದೇವತೆಗಳು ಈ ರೀತಿಯಲ್ಲಿ ನಮ್ಮನ್ನು ಪರೀಕ್ಷೆ ಮಾಡಿಸುತ್ತಲೇ ಇರುವರು.

ಭೀಮಯುಧಿಷ್ಠಿರರ ಮಾತುಗಳಿಂದ ತನ್ನ ಸುತನು ಮೃತನಾದನೆಂದು ತಿಳಿದು ದ್ರೋಣಾಚಾರ್ಯನು ಆಯುಧಗಳನ್ನು ಬಿಟ್ಟು ರಥದಮೇಲೆ ಕುಳಿತುಕೊಂಡು ಯೋಗವನ್ನು ಮಾಡತೊಡಗಿದನು. ಆ ಸಮಯದಲ್ಲಿ ಧೃಷ್ಟದ್ಯುಮ್ನನು ತನ್ನ ತೇರಿನಿಂದ ಭೂಮಿಯ ಮೇಲಕ್ಕೆ ಲಂಘಿಸಿ ಖಡ್ಗಪಾಣಿಯಾಗಿ ನಿರಾಯುಧನಾಗಿದ್ದ ಆ ವೀರವರನ ಮೇಲೆ ಕವಿಯಲು ಆತನು ಅಷ್ಟರಲ್ಲಿ ಅವನತಮುಖನಾಗಿ ಶರೀರವನ್ನು ಬಿಟ್ಟು ವಿರಾಜಮಾನ ತೇಜೋರೂಪದಿಂದ ಅಂತರಿಕ್ಷಮಾರ್ಗಕ್ಕೆ ಹಾರಿದನು. ಹೀಗೆ ಆ ಮಹನೀಯನು ಹೋಗುತಿರಲು ಅವನ ಕಳೇಬರವು ರಣಾಂಗಣದಲ್ಲಿ ಕೆಳಗೆಬಿತ್ತು. ಅಷ್ಟರಲ್ಲಿ ಅರ್ಜುನನು ಓಹೋ! ನಮ್ಮ ಗುರುವನ್ನು ಕೊಲ್ಲಲಾಗದು. ಆದುದರಿಂದ ಆತನನ್ನು ಪ್ರಾಣಸಹಿತವಾಗಿ ಹಿಡಿದುಕೊಂಡು ಬನ್ನಿರೆಂದು ಗಟ್ಟಿಯಾಗಿ ಅರಚಿಕೊಳ್ಳುತ್ತಿದ್ದಾಗ್ಯೂ ಧೃಷ್ಟದ್ಯುಮ್ನನು ಆ ಮಾತುಗಳನ್ನು ಕೇಳದೆಯೇ ನಿಜಗುರುವೂ ಎಂಭತ್ತುವರ್ಷ ವಯಸ್ಸುಳ್ಳವನೂ ಉಭಯ ಸೇನಾನಾಯಕರಿಗೆ ಆಚಾರ್ಯನೂ ಆದ ಭಾರದ್ವಾಜನ ಧವಳಶಿರೋಜಗಳನ್ನು ಹಿಡಿದುಕೊಂಡು ಪೂಜನೀಯವಾದ ಅವನ ತಲೆಯನ್ನು ಛೇದಿಸಿದನು. ಆತನ ಕತ್ತಿಯು ಸೋಕುವುದಕ್ಕೆ ಮೊದಲೇ ದ್ರೋಣನು ಪ್ರಾಣಗಳನ್ನು ಬಿಟ್ಟು ಬ್ರಹ್ಮಲೋಕಕ್ಕೆ ಹೊರಟುಹೋಗಿದ್ದನಾದುದರಿಂದ ಆ ಪೆಟ್ಟು ಆತನಿಗೆ ನೋವನ್ನುಂಟುಮಾಡಲಿಲ್ಲ.

ಹೀಗೆ ಧನುರಾಚಾರ್ಯನು ಬೀಳಲು ಕೌರವಸೈನ್ಯಗಳು ಬಿಚ್ಚಿ ಚದರಿಹೋಗಿ ನಾಲ್ಕುಕಡೆಗೂ ಓಡಲು ಯತ್ನಿಸಿದವು. ಅಶ್ವತ್ಥಾಮನು ತಂದೆಯ ಮರಣವನ್ನು ಕೇಳಿ ಧೃಷ್ಟದ್ಯುಮ್ನನು ಪೂಜ್ಯವಾದ ಆತನ ಬಿಳುಪಾದ ಕೂದಲುಗಳನ್ನು ಹಿಡಿದು ಪರಿಭ ವಿಸಿದುದನ್ನು ತಿಳಿದು ನನ್ನ ಜನಕನನ್ನು ಕೊಂದವರನ್ನು ಆಹುತಿಮಾಡುವೆನೆಂದು ಶಪ ಥಮಾಡಿ ಯುದ್ಧಗಳಲ್ಲಿ ಎಂತಹ ಶತ್ರುಗಳನ್ನಾದರೂ- ನಾಶಮಾಡತಕ್ಕ ಶಕ್ತಿಯುಳ್ಳ ನಾರಾಯಣಾಸ್ತ್ರವನ್ನು ಕೈಯಲ್ಲಿ ಹಿಡಿದು ಓಡುತ್ತಿರುವ ಸೈನಿಕರನ್ನು ಹಿಂದಿರುಗಿಸಿ ಯುದ್ಧ ನಡೆಸುವಂತೆ ಹುರಿಮಾಡಿದನು. ಆಸ್ಥಳದಲ್ಲಿ ಇಂದ್ರತನಯನು ಗುರುವಿನ ಮರಣವು ತನ್ನ ಹೃದಯವನ್ನು ಭೇದಿಸುತ್ತಿರಲು ಹೀಗೆ ಹಂಬಲಿಸಿದನು. ಮಹಾ ತ್ಮಾ! ನೀನು ಇಂತಹ ಘೋರವಾದ ಮರಣವನ್ನು ಹೊಂದುತಿರಲು ನಾನು ನೋಡು ತ್ತಿದ್ದೆನಲ್ಲ. ದೇವ! ನಿಂದ್ಯವಾದ ಈ ಕರ್ಮಕ್ಕಾಗಿ ನಾನು ನರಕದಲ್ಲಿ ಬದ್ಧನಾದೆ ನು. ಎಂದು ಪ್ರಲಾಪಿಸುತ್ತಿರಲು ಭೀಮ ಧೃಷ್ಟದ್ಯುಮ್ನರು ಆತನನ್ನು ದೂಷಿಸಿದ ರು. ಸಾತ್ಯಕಿಯು ನೆರನಂತೆಯೇ ಧೃಷ್ಟದ್ಯುಮ್ನನನ್ನು ಅನೇಕ ವಿಧಗಳಿಂದ ದೂಷಿ ಸಲು ಅವರಿಬ್ಬರೂ ಕ್ರೋಧಾತಿಶಯದಿಂದ ಒಬ್ಬರೊಬ್ಬರು ಹೋರಾಟ ಮಾಡಲು ಯ ತ್ನಿಸಿದರು. ಅಷ್ಟರಲ್ಲಿ ಕೌರವರು ಅವರ ಮೇಲೆ ಬಂದು ಬೀಳಲು ಅವರು ತಮ್ಮತಮ್ಮ ಲ್ಲಿನ ಹೋರಾಟವನ್ನು ಬಿಟ್ಟು ವೈರಿಗಳ ಮೇಲೆ ಯುದ್ಧಕ್ಕಾಗಿ ಹೊರಟರು. ಅಶ್ವ ತ್ಥಾಮನು ಪಾಂಡವರ ಸೈನ್ಯಗಳ ಮೇಲೆ ಅಮೋಘವಾದ ನಾರಾಯಣಾಸ್ತ್ರವನ್ನು ಪ್ರಯೋಗಿಸಲು ಅದು ಮಹಾದ್ಯುತಿಯಿಂದ ಪ್ರಕಾಶಿಸುತ್ತಾ ಆ ಸೇನೆಗಳನ್ನು ಭಸ್ಮ ಮಾಡತೊಡಗಿತು. ಶ್ರೀಕೃಷ್ಣನು ಅವರನ್ನು ನೋಡಿ ನೀವೆಲ್ಲರೂ ನಿರಾಯುಧರಾಗಿ ಭೂಮಿಯಲ್ಲಿ ನಿಂತಿದ್ದರೆ ಈ ಮಹಾಸ್ತ್ರವು ನಿಮ್ಮನ್ನು ಕಾಪಾಡುವುದೆಂದು ಗಟ್ಟಿ ಯಾಗಿ ಕೂಗಿ ಹೇಳಲು ಎಲ್ಲರೂ ಹಾಗೆಯೇ ಮಾಡಿದರು. ಭೀಮಸೇನನೊಬ್ಬನು ಮಾತ್ರ ಹಾಗೆ ಮಾಡದೇ ಆ ಅಸ್ತ್ರದೊಡನೆ ಹೋರಾಟ ಮಾಡುತ್ತಿರಲು ಆ ದಿವ್ಯಾ ಸ್ತ್ರವು ಮಹಾ ಮಹಿಮೆಯುಳ್ಳದಾದುದರಿಂದ ಹೆಚ್ಚಾಗಿ ಉರಿಗಳುಂಟಾಗಿ ಭೀಮ ನನ್ನು ಆವರಿಸಿಕೊಂಡವು. ಆ ಸಮಯದಲ್ಲಿ ಕೇಶವಾರ್ಜುನರು ಆತನನ್ನು ರಥದಿಂದ ಇಳಿ ಎಂದು ಬೋಧಿಸಿದರೂ ಆತನು ಕೇಳದಿರಲು ಅವರಿಬ್ಬರೂ ಆತನನ್ನು ಹಿಡಿದೆಳೆದು ಭೂಮಿಯಲ್ಲಿ ಕೆಡವಿದರು. ಅದರಿಂದ ಆ ಅಸ್ತ್ರವು ಶಾಂತಿಹೊಂದಿತು. ದುರ್ಯೋಧ ನನು ಅತಿ ಸಂಭ್ರಮದಿಂದ ಪುನಃ ಆ ಅಸ್ತ್ರವನ್ನು ಪಾಂಡವರಮೇಲೆ ಪ್ರಯೋಗಿಸೆಂದು

ಗುರುತನಯನನ್ನು ಬೇಡಲು ಆತನು ಇದನ್ನು ಒಂದೇಸಾರಿ ಪ್ರಯೋಗಿಸಬೇಕೇ ಹೊರತು ಎರಡನೆಯವೇಳೆ ಇದನ್ನು ಪ್ರಯೋಗಿಸಲಾಗದು. ಕೃಷ್ಣನು ಇದರ ಜ್ವಾಲೆಯಿಂದ ಅವರನ್ನು ತಪ್ಪಿಸಿದನಾದುದರಿಂದ ವೈರಿಗಳಿನ್ನೂ ಸೋಲದಿರುವರು ಎಂದು ಸವಿಷಾದನಾಗಿ ಹೇಳಿದನು. ಪುನಃ ಯುದ್ಧಕ್ಕೆ ಎರಡು ಪಕ್ಷದವರೂ ಅನುವಾದರು. ಭೀಮನ ಸಾರಥಿಯು ನೆಲದಲ್ಲಿ ಬೀಳಲು ಅವನ ಕುದುರೆಗಳು ತೇರಿನೊಡನೆ ಆತನೆನ್ನು ಎಳೆದುಕೊಂಡು ಓಡಿದುವು. ಕಿರೀಟಿಯು ದ್ರೌಣಿಯಮೇಲೆ ಬಿದ್ದು ಹೋರಿ ಆತನಿಂದ ಪ್ರಯುಕ್ತವಾದ ಒಂದು ದಿವ್ಯಾಸ್ತ್ರದಿಂದ ಅನೇಕ ಬಾಣಗಳುತ್ಪನ್ನವಾಗಿ ಕತ್ತಲೆಯನ್ನುಂಟುಮಾಡಿ ಒಂದಕ್ಷೋಹಿಣಿಸೈನ್ಯವನ್ನು ನಾಶಮಾಡಲು ಆಯಸ್ತ್ರವನ್ನು ಬ್ರಹ್ಮಾಸ್ತ್ರದಿಂದ ತಿರುಗಿಸಿದನು. ಅವನು ನೋವು ಹೊಂದದೆ ವಿಜಯಹೊಂದಿರುವುದನ್ನು ನೋಡಿ ಅಶ್ವತ್ಥಾಮನು ಕೇಶವಾರ್ಜುನರನ್ನು ಕೊಲ್ಲಲಾರದವನಾದೆನೆಂದು ನಾಚಿಕೆಗೊಂಡು ಖಿನ್ನನಾಗಿ ರಣರಂಗದಿಂದ ಓಡಿಹೋದನು. ಹೀಗೆ ಹೋಗುತ್ತಾ ಗುರುಸುತನು ವೇದವ್ಯಾಸನನ್ನು ನೋಡಿ ಆ ಮುನೀಂದ್ರನ ದೆಸೆಯಿಂದ ಕೇಶವಾರ್ಜುನರ ಪ್ರಭಾವವನ್ನೂ ತನ್ನ ಅಸ್ತ್ರವು ಅವರನ್ನು ಕೊಲ್ಲಲಾರದೆ ಹೋದುದಕ್ಕೆ ಕಾರಣವನ್ನೂ ತಿಳಿದು ತನ್ನ ಸೇನೆಗೆ ಯುದ್ಧವನ್ನು ನಿಲ್ಲಿಸಿ ನಿದ್ರೆಮಾಡಿರೆಂದಪ್ಪಣೆ ಮಾಡಲು ಆ ದಿನದ ಯುದ್ಧವು ಕೊನೆಮುಟ್ಟಿತು. ಅಷ್ಟರಲ್ಲಿ ವೇದವ್ಯಾಸನು ಅರ್ಜುನನಿಗೆ ಕಾಣಿಸಿಕೊಳ್ಳಲು ಆತನು ಆ ತಪೋಧನನೊಡನೆ ನನ್ನ ರಥಕ್ಕೆ ಮುಂಭಾಗದಲ್ಲಿ ಹೊರಟು ನಾನು ಬಾಣಪ್ರಯೋಗಮಾಡುವವರನ್ನು ಸಂಹರಿಸುವಂತಹ ಆ ದಿವ್ಯಪುರುಷನಾರೆಂಬುದನ್ನು ಹೇಳಬೇಕೆಂದು ವೇದವ್ಯಾಸನನ್ನು ಕೇಳಲು ಆತನು ಪರಮೇಶ್ವರನಾದ ಮಹಾದೇವನೇ ಆ ಪುರುಷನೆಂದು ತಿಳಿಸಿ ಆ ದೇವನ ದಿವ್ಯಮಹಿಮೆಗಳನ್ನು ವರ್ಣಿಸಿದನು

ಇಲ್ಲಿಗೆ ದ್ರೋಣಪರ್ವವು ಮುಗಿದುದು.



# ಕರ್ಣಪರ್ವ.

ಹದಿನಾರನೆಯದಿನದ ಯುದ್ಧದಲ್ಲಿ ಕರ್ಣನು ಸೇನಾನಾಯಕನಾಗಿ ನಿಯಮಿತನಾಗಿ ಅತ್ಯದ್ಭುತಪರಾಕ್ರಮದಿಂದ ಯುದ್ಧವನ್ನು ಪ್ರಾರಂಭಿಸಿ ನಕುಲನನ್ನಿದಿರಿಸಿ ಆತನನ್ನು ವಿರಥನನ್ನಾಗಿ ಮಾಡಿ ಕುದುರೆಗಳನ್ನು ಹೊಡೆದು ಯೋಧರನ್ನು ಪುಡಿಪುಡಿ ಮಾಡಿ ಕುಂತಿಗೋಸ್ಕರ ಆತನನ್ನು ಕೊಲ್ಲದೆ ಬಿಲ್ಲಿನ ನಾರಿಯನ್ನು ಆತನಿಗೆ ಮಾಲೆಹಾಕಿ ಪ್ರಾಣಸಹಿತವಾಗಿ ಬಿಟ್ಟನು. ನಕುಲನು ನಾಚಿಕೆ ಹೊಂದಿ ಸೋತು ಓಡಿದನು. ಧರ್ಮತನಯನು ದುರ್ಯೋಧನನ್ನಿದಿರಿಸಿ ಅವನನ್ನು ಮೂರ್ಛಿತನನ್ನಾಗಿ ಮಾಡಿದರೂ ಭೀಮನ ಪ್ರತಿಜ್ಞೆಯನ್ನು ಸ್ಮರಿಸಿ ಅವನನ್ನು ಸಂಹರಿಸದೇ ಬಿಟ್ಟನು. ಆದಿನದ ವಿಜಯಪತಾಕೆಯನ್ನು ಅರ್ಜುನನೇ ಏರಿಸಿದನು. ಕೃಷ್ಣಚೋದಿತಗಳಾದ ಆತನ ಶ್ವೇತಾಶ್ವಗಳು ಯಾವಕಡೆ ಹೊರಟಾಗ್ಯೂ ಆಕಡೆಗಳಲ್ಲೆಲ್ಲ ವಿಜಯವು ಕೈಸೇರಿತು. ಆದಿನ ರಾತ್ರಿ ಕರ್ಣನು ಮರುದಿನ ನಾನು ಅರ್ಜುನನಮೇಲೆ ಹೋರುವೆನೆಂದು ನಿಶ್ಚಯಿಸಿ ಹದಿನೇಳನೆಯ ದಿನ ಪ್ರಾತಃಕಾಲ "ಈ ದಿನ ನಾನು ಅರ್ಜುನನನ್ನು ಸಂಹರಿಸುವೆನು ಅಥವಾ ಅವನಿಂದ ಸಾಯುವೆನು." ಎಂದು ಶಪಥಮಾಡಿ ಅರ್ಜುನನಿಗೆ ಪ್ರತಿಭಟಿಸಿ ಹೋರುವುದಕ್ಕಾಗಿ ಮದ್ರದೇಶಾಧಿಪತಿಯಾದ ಶಲ್ಯನನ್ನು ತನಗೆ ಸಾರಥ್ಯಮಾಡಬೇಕೆಂದು ಬೇಡಿಕೊಂಡನು. ಆ ಮಾತುಗಳನ್ನು ಕೇಳಿ ಶಲ್ಯನು ತನ್ನನ್ನು ಕರ್ಣನು ಅವಮಾನಮಾಡಿದನೆಂದು ಯೋಚಿಸಿ ಕೋಪೋದ್ದೀಪಿತನಾಗಲು ದುರ್ಯೋಧನನು ಆತನನ್ನು ಲಲಿತವಚನಗಳಿಂದ ಸಮಾಧಾನಪಡಿಸಿ "ನೀನು ಸಾರಥ್ಯಕ್ಕೆ ಒಪ್ಪಿಕೊಂಡೆಯಾದರೆ ಕೇಶವನೊಡನೆ ಸಮನಾಗುವಿ. ಮೊದಲು ಈಶ್ವರನ ರಥವನ್ನು ಬ್ರಹ್ಮನು ಸಾರಥಿಯಾಗಿ ನಡೆಸಲಿಲ್ಲವೇ?" ಎಂದು ಹೇಳಿ ಆತನನ್ನೊಡಂಬಡಿಸಿದನು. ಹೀಗೆ ಶಲ್ಯನು ಸಾರಥ್ಯವನ್ನು ಮಾಡುತ್ತಿರಲು ಕರ್ಣನು ರಣರಂಗದಲ್ಲಿ ಹೊರಟನು. ಶಲ್ಯನು ಅರ್ಜುನನ ಪರಾಕ್ರಮವನ್ನು ಹೊಗಳುತ್ತಾ ಕರ್ಣನನ್ನು ದೂಷಿಸುತ್ತಿರಲು ಅವರಿಬ್ಬರಿಗೂ ಅಶುಭಸೂಚಕವಾಗಿ ವಾಕ್ಕಲಹವು ಪ್ರಾಪ್ತವಾಯಿತು.

ಕರ್ಣನು ಮೊಟ್ಟಮೊದಲು ಧರ್ಮತನಯನನ್ನು ಪ್ರತಿಭಟಿಸಿ ಆತನನ್ನು ವಿರಥನನ್ನಾಗಿ ಮಾಡಿ ಓಡಿಸಲು ಭೀಮನು ಕರ್ಣನಮೇಲೆ ಬಿದ್ದು ಹೊಡೆದು ಮೂರ್ಛಿತನನ್ನಾಗಿ ಮಾಡಿ ತನ್ನಣ್ಣನಿಗೆ ಅವನು ಮಾಡಿದ ಪರಾಭವಕ್ಕೆ ಪ್ರತಿಯನ್ನಾಚರಿಸಿ

ದನು. ಅವನ ಸಾರಥಿಯು ಕರ್ಣನನ್ನು ರಥದೊಡನೆ ಬೇರೆಕಡೆಗೆ ಕರೆದುಕೊಂಡು ಹೋದನು. ಕರ್ಣನು ಪುನಃ ಸಮರಾಂಗಣಕ್ಕೆ ಬಂದು ನಕುಲಸಹದೇವಸಹಿತನಾದ ಧರ್ಮಜನೊಡನೆ ಹೋರಿ ಅವರು ಮೂವರನ್ನೂ ಜಯಿಸಿ ಭೀಮನಿಂದ ನೋವು ಹೊಂದಿದ ದುರ್ಯೋಧನನಿಗೆ ಸಹಾಯಮಾಡಲು ಹೋದನು. ಅಷ್ಟರಲ್ಲಿ ಅರ್ಜುನನು ದ್ರೋಣಪುತ್ರರನ್ನು ಸೋಲಿಸಿ ಧರ್ಮಜನ ರೀತಿಯನ್ನು ತಿಳಿಯಲಪೇಕ್ಷಿಸಿ ಆತನ ಬಳಿಗೆ ಬರಲು ಆತನು ತನ್ನ ತಮ್ಮನು ರಣಾಂಗಣವನ್ನು ಬಿಟ್ಟು ಮರಳಿ ಬಂದುದನ್ನು ನೋಡಿ ಕರ್ಣನು ಈತನಿಂದ ನಿಹತನಾಗಿರಬೇಕೆಂದು ನಿಶ್ಚಯಿಸಿ ಮನಸ್ಸಿನಲ್ಲಿ ಹೆಚ್ಚಾದ ಸಂತೋಷವುಳ್ಳವನಾಗಿ ಆತನೊಡನೆ ಕರ್ಣನನ್ನು ಕೊಂದು ವಿಜಯವನ್ನು ಹೊಂದಿ ಬಂದೆಯಾ ಎಂದು ಕುಶಲ ಸಂಭಾಷಣೆಮಾಡಿ ಕರ್ಣನಿನ್ನೂ ನಿಹತನಾಗದಿರುವುದನ್ನು ಆತನಿಂದ ತಿಳಿದು ತನಗುಂಟಾದ ಪರಾಜಯಕ್ಕೆ ಮನಸ್ಸಿನಲ್ಲಿ ಕಟಕಟಹೊಂದಿ ಅರ್ಜುನನನ್ನು ಅನೇಕವಿಧವಾಗಿ ನಿಂದಿಸಿ ನೀನಿಷ್ಟು ಅಂಜುಬುರುಕಿಯಾದುದರಿಂದ ನಿನ್ನ ಗಾಂಡೀವವನ್ನು ನಿನಗಿಂತಲೂ ಬಲಿಷ್ಠನಕೈಗೆ ಕೊಡೆಂದನು. ಆ ಮಾತುಗಳನ್ನು ಕೇಳಿ ಧನಂಜಯನು ಖಡ್ಗವನ್ನು ಕೈಗೆ ತೆಗೆದುಕೊಳ್ಳಲು, ಗೋವಿಂದನು 'ಹೋ! ಇದು ಯುಕ್ತವಲ್ಲ' ಎಂದು ನಿವಾರಿಸಲು ಬೀಭತ್ಸುವು ಆತನನ್ನು ಕುರಿತು "ಕೇಶವಾ! ನನ್ನ ಗಾಂಡೀವವನ್ನು ಇತರರಕೈಗೆ ಕೊಡೆಂದು ಯಾವನು ಹೇಳುವನೋ ಅವನನ್ನು ಛೇದಿಸುವೆನೆಂದು ಪ್ರತಿಜ್ಞೆಮಾಡಿರುವೆನು. ಆದುದರಿಂದ ಈರೀತಿಯಲ್ಲಿ ಧರ್ಮನಂದನನನ್ನು ಛೇದಿಸಿ ಸತ್ಯವನ್ನು ಪರಿಪಾಲಿಸುವೆನು" ಎಂದು ಹೇಳಿದನು. ಪಂಕಜನಾಭನು ನರನನ್ನು ಕುರಿತು ನಿನ್ನ ಅಗ್ರಜನೂ ಪ್ರಭುವೂ ಆದ ಈತನನ್ನು ಹೀಗೆ ಕೊಲ್ಲಲು ಯತ್ನಿಸುವುದು ನಿನಗೆ ತಕ್ಕುದೇ? ಇಂತಹ ಘೋರಕೃತ್ಯವನ್ನು ನಿಲ್ಲಿಸು" ಎಂದು ಹೇಳಿ ಗದ್ದರಿಸಲು ಅರ್ಜುನನು ಆತನಿಗೆ ನಮಸ್ಕರಿಸಿ ದೇವಾ! ನನ್ನ ಅಗ್ರಜನನ್ನು ಕೊಲ್ಲದೆ ನಾನು ಯಾವರೀತಿಯಲ್ಲಿ ಕೃತ ಪ್ರತಿಜ್ಞನಾಗಬಹುದೋ ಆ ರೀತಿಯನ್ನು ಅಪ್ಪಣೆಮಾಡಬೇಕೆಂದು ಪ್ರಾರ್ಥಿಸಲು ಕೃಷ್ಣನು "ದೊಡ್ಡವರಿಗೆ ಅವಮಾನಮಾಡುವುದು ಕೊಂದುದಕ್ಕೆ ಸಮನಾಗಿರುವುದು. ಆದುದರಿಂದ ನಿಮ್ಮಣ್ಣನಿಗೆ ಸ್ವಲ್ಪ ಅವಮಾನಮಾಡಿ ಆಕೂಡಲೆ ಆತನ ಪಾದಗಳಿಗೆ ನಮಸ್ಕರಿಸಿ ಪ್ರಶಾಂತನನ್ನು ಮಾಡು." ಎಂದಾಜ್ಞೆಮಾಡಲು ಕಿರೀಟಿಯು ಪರುಷವಚನಗಳಿಂದ ಧರ್ಮಜನನ್ನು ನಿಂದಿಸಿ ಹೀಗೆ ಅಣ್ಣನನ್ನು ದೂಷಣೆಮಾಡಿದೆನಲ್ಲಾ ಎಂದು ಮನಸ್ಸಿನಲ್ಲಿ ಕಳವಳ ಹೊಂದಿ ಆ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ಮೃತಿಹೊಂದುವೆನೆಂದು ಯೋಚಿಸಿ

ಪುನಃ ಒರೆಯಿಂದ ಆತ್ಮಹತ್ಯೆಕ್ಕಾಗಿ ಕತ್ತಿಯನ್ನು ಹಿರಿದನು. ಅದನ್ನು ನೋಡಿ ತಾಮರಸಾಕ್ಷನು ಆತನೊಡನೆ ಇದು ಕೂಡದೆಂದು ಅನೇಕ ವಿಧಗಳಿಂದ ಹೇಳಿ ನಿವಾರಿಸಲು ಅರ್ಜುನನು ತನ್ನ ಅಣ್ಣನ ಪಾದಗಳಿಗೆ ನಮಸ್ಕರಿಸಿ ನಾನು ರಾಧೇಯನನ್ನು ತಪ್ಪದೆ ಸಮಾಪ್ತಿಮಾಡುವೆನೆಂದು ಭಾಷೆಮಾಡಿ ನಾನು ಮಾಡಿದ ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. ಧರ್ಮತನಯನು ಬಹಳವಾಗಿ ಸಂತಾಪಹೊಂದಿ ನನ್ನ ಪ್ರಿಯ ಸಹೋದರನನ್ನು ಈ ರೀತಿಯಲ್ಲಿ ಪರುಷವಚನಗಳಿಂದ ದೂಷಿಸಿದೆನಲ್ಲಾ! ನನ್ನ ಶರೀರವನ್ನು ಸುಡಲೇ ಎಂದು ಆತ್ಮನಿಂದೆಯನ್ನು ಮಾಡಿಕೊಳ್ಳುತ್ತಾ ಇನ್ನು ನನಗೆ ರಾಜ್ಯಸುಖವೇತಕ್ಕೆಂದು ತನ್ನ ಕಿರೀಟವನ್ನು ಕೆಳಗೆ ಹಾಕಲು ಯತ್ನಿಸಿದನು. ಮಾಧವನು ಪುನಃ ದೀನನಾಗಿರುವ ಆ ಪಾರ್ಥಿವೇಶ್ವರನನ್ನು ಸಮಾಧಾನಮಾಡಲು ಧರ್ಮತನಯನು ತನ್ನ ಪಾದಗಳಲ್ಲಿ ಬಿದ್ದಿರುವ ಅರ್ಜುನನನ್ನು ಮೇಲಕ್ಕೆತ್ತಿ ಶ್ರೀಕೃಷ್ಣನನ್ನು ಕೊಂಡಾಡುತ್ತಾ ತಮ್ಮನನ್ನಾಲಿಂಗಿಸಿಕೊಂಡನು. ಹೀಗೆ ಆ ಉಪಪ್ಲವವು ಶಾಂತವಾಗಲು ಫಲ್ಗುನನು ಯುಧಿಷ್ಠಿರನ ಆಶೀರ್ವಾದವನ್ನು ಹೊಂದಿ ಸೂತಪುತ್ರನನ್ನು ನಾಶಮಾಡದೆ ಪುನಃ ಬರೆನೆಂದು ಪ್ರತಿಜ್ಞೆಮಾಡಿ ರಣಭೂಮಿಗೆ ಹೊರಟನು.

ಅರ್ಜುನನು ರಣರಂಗದಲ್ಲಿಲ್ಲದಿರುವಾಗ ಯುದ್ಧವೆಲ್ಲವೂ ವೃಕೋದರನ ಪಾಲಿನದಾಗಿತ್ತು. ಹಾಗೆ ಕಿಕ್ಕಿರಿದಿದ್ದ ಆ ಸೇನೆಯನ್ನು ಹೊಕ್ಕು ರಭಸದಿಂದ ಬರುತ್ತಿದ್ದ ಬೀಭತ್ಸುವಿನ ವಿರಾಜಮಾನವಾದ ಕಿರೀಟವನ್ನು ನೋಡಿ ಅನಿಲತನಯನು ವಿಶೇಷವಾಗಿ ಸಂತೋಷಹೊಂದಿದನು. ಹೀಗೆ ಹೊಕ್ಕು ಅರ್ಜುನನು ಮಹೋಗ್ರವಾದ ಸಂಗ್ರಾಮವನ್ನು ಮಾಡಿ ಆಯಾಸಹೊಂದಿದ್ದ ಭೀಮನಿಗೆ ಸ್ವಲ್ಪ ಸಹಾಯಮಾಡಿ ಆತನನ್ನು ಬಿಟ್ಟು ಕರ್ಣನಿದ್ದ ಸ್ಥಳಕ್ಕೆ ಹೊರಟನು. ಇಷ್ಟರಲ್ಲಿ ದುಶ್ಶಾಸನನು ಪವನತನಯನಮೇಲೆ ಉರವಣಿಸಲು ಅವರಿಬ್ಬರಿಗೂ ಘೋರಯುದ್ಧ ಪ್ರಾಪ್ತವಾಯಿತು. ಅದರಲ್ಲಿ ಭೀಮನು ಉದ್ದಂಡವಾದ ನಿಜಗದಾದಂಡವನ್ನು ಗಿರಗಿರನೆ ತಿರುಗಿಸಿ ಶತ್ರುವನ್ನು ಶೌರ್ಯದಿಂದ ಹೊಡೆಯಲು ದುಶ್ಶಾಸನನು ನೆಲದಲ್ಲಿ ಬಿದ್ದನು. ವಾಯುಜನು ನೆಲಕ್ಕೆ ಲಂಘಿಸಿ ದ್ರುಪದತನಯೆಗೆ ಅವನು ಮಾಡಿದ ಅವಮತಿಗೋಸ್ಕರ ತಾನು ಮಾಡಿದ್ದ ಪ್ರತಿಜ್ಞೆಯನ್ನು ಜ್ಞಾಪಕಕ್ಕೆ ತಂದುಕೊಂಡು ಖಡ್ಗವನ್ನು ಕೈಯಲ್ಲಿ ತೆಗೆದುಕೊಂಡು ಅವನ ಎದೆಯನ್ನು ಸೀಳಿ ರಕ್ತದಿಂದ ತನ್ನ ತುಟಿಯನ್ನು ಕೆಂಪುಮಾಡಿಕೊಂಡು ಆ ಪಾಪಾತ್ಮನ ಮಸ್ತಕವನ್ನು ಛೇದಿಸಿದನು. ಇದು ಅವನು ಹಿಂದೆಮಾ

ಡಿದ ಘೋರಪಾಪಕ್ಕಾಗಿ ತಕ್ಕ ಫಲವು. ಈ ಭಯಂಕರವಾದ ಕೃತ್ಯವನ್ನು ನೋಡಿದವರ ಮನಸ್ಸೆಲ್ಲವೂ ತಲ್ಲಣಿಸಿಹೋಯಿತು.

ಅನಂತರ ಅರ್ಜುನನು ಅಷ್ಟಕ್ಕೆ ಮೊದಲೇ ನಕುಲನನ್ನು ಸೋಲಿಸಿದ ಕರ್ಣನ ಬಳಿಗೆ ಸೇರಿ ಆತನ ಕಣ್ಣೆದಿರಿಗೇ ಆತನ ಮಗನನ್ನು ಸಂಹರಿಸಿ ಅನಂತರ ಆ ಕರ್ಣನ ಮೇಲೆಯೇ ಬಿದ್ದನು. ದೇವಾಸುರರು ಆ ಕರ್ಣಾರ್ಜುನರ ಯುದ್ಧವನ್ನು ನೋಡುವುದಕ್ಕಾಗಿ ಬಂದು ದೇವತೆಗಳು ಅರ್ಜುನನ ಪಕ್ಷವನ್ನೂ ಅಸುರರು ಕರ್ಣನ ಪಕ್ಷವನ್ನೂ ವಹಿಸಿದರು ಅವರು ಮೊದಲುಮೊದಲು ಧನುರ್ಯುದ್ಧವನ್ನು ಮಾಡಿ ಜಯಾಪಜಯಗಳನ್ನು ಒಬ್ಬರೂ ಹೊಂದದಿರಲು ನರನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಕರ್ಣನು ಉಪಸಂಹಾರಮಾಡಿ ಕ್ರೂರವಾದ ಬೆಂಕಿಯನ್ನು ಕಾರುವ ನಾಗಾಸ್ತ್ರವನ್ನು ಅರ್ಜುನನ ಮೇಲೆ ಪ್ರಯೋಗಿಸಿದನು. ಅದು ಖಾಂಡವದಹನದಲ್ಲಿ ತನ್ನ ತಾಯಿಯನ್ನು ಕಳೆದುಕೊಂಡ ಒಂದು ಮಹಾಸರ್ಪವು ಕ್ರೂರನಾರಾಚ ರೂಪದಲ್ಲಿ ಕರ್ಣನ ತೂಣೀರವನ್ನು ಹೊಕ್ಕು ಆತನ ಬಿಲ್ಲಿನಿಂದ ಪ್ರಯೋಗಿಸಲ್ಪಟ್ಟು ಬೋರೆಂದು ಗಗನಮಾರ್ಗದಲ್ಲಿ ಬರುತಿರುವುದನ್ನು ನೋಡಿ ಗೋವಿಂದನು ಪಾರ್ಥನ ರಥವನ್ನು ಭೂಮಿಯೊಳಕ್ಕೆ ಅದುಮಿ ಒಂದು ಮೊಳದಷ್ಟು ಹೂಳಿಸಿದನು. ಅದರ ಶ್ವೇತಾಶ್ವಗಳು ಭೂಮಿಯಮೇಲೆ ಮಲಗಿದುವು. ಆ ಮಹಾನಾಗಾಸ್ತ್ರವು ಅಂತರಿಕ್ಷದಲ್ಲಿ ಜ್ವಾಲೆಗಳನ್ನು ಹೊರಡಿಸುತ್ತಾ ಬಂದು ಇಂದ್ರದತ್ತವಾದ ನರನ ಕಿರೀಟವನ್ನು ತೆಗೆದುಕೊಂಡು ಅದನ್ನು ಚೂರ್ಣಮಾಡಿತು. ಅರ್ಜುನನು ತನ್ನ ರಥದೊಡನೆ ಕುಗ್ಗಿದುದರಿಂದ ಆತನನ್ನು ಕೊಲ್ಲಲಾರದುದಾಯಿತು. ಹೀಗೆ ಕೃಷ್ಣನ ಸಹಾಯದಿಂದ ಅರ್ಜುನನು ಮರಣದಿಂದ ತಪ್ಪಿಸಿಕೊಂಡನು. ಆ ಸರ್ಪವು ಕರ್ಣನ ಬಳಿಗೆ ಹೋಗಿ ನರನ ಮೇಲೆ ಪುನಃ ನನ್ನನ್ನು ಪ್ರಯೋಗಮಾಡೆಂದು ಬೇಡಲು, ಆತನು ಒಂದು ಬಾಣವನ್ನು ಎರಡುಬಾರಿ ಹೊಡೆಯೆನು, ಎಂದು ಹೇಳಿದನು. ಅನಂತರ ಆ ಭುಜಂಗವು ತಾನೇ ಅರ್ಜುನನಮೇಲೆ ಬರಲು ಆ ವೀರಾಗ್ರಗಣ್ಯನು ಭಲ್ಲೆಯುಗಳಿಂದ ಅದನ್ನು ಕತ್ತರಿಸಿದನು. ಅನಂತರ ಅರ್ಜುನನು ಮೇಲಾಗಿ ಶತ್ರುವಿಗೆ ದಿಕ್ಕುತೋರದಿರುವಂತೆ ಮಾಡಿ ಅಸ್ತ್ರಗಳನ್ನು ಕೆಳಗೆ ಹಾಕಿ ಸುಮ್ಮನಿರುವ ಆತನನ್ನು ಕೊಲ್ಲಲಾಗದೆಂದು ಸ್ವಲ್ಪಹೊತ್ತು ಸುಮ್ಮನಾದನು. ಕೇಶವನು ಅರ್ಜುನಾ! ಅವನನ್ನು ನಿಲ್ಲಿಸದೆ ಸಂಹರಿಸೆಂದು ಪಾರ್ಥನನ್ನು ಹುರಿಗೊಳಿಸಿದನು. ಇಷ್ಟರಲ್ಲಿ ಕರ್ಣನು ತನ್ನ ಬಿಲ್ಲನ್ನು ತೆಗೆದುಕೊಳ್ಳಲು ಒಂದು ಅಶರೀರವಾಣಿಯು, ನಿನ್ನ ತೇರಿನ ಚಕ್ರವು ಭೂಮಿಯಲ್ಲಿ

ಹೂತುಕೊಳ್ಳುವುದೆಂದು ಕರ್ಣನಿಗೆ ಕೇಳಿಸಿತು. ಕೂಡಲೇ ಅವನ ರಥದ ಎಡಭಾಗದ ಚಕ್ರವು ಹೂತುಹೋಯಿತು. ಮೊದಲು ಕರ್ಣನು ಒಬ್ಬ ಬ್ರಾಹ್ಮಣನ ಕರುವನ್ನು ಪ್ರಮಾದದಿಂದ ಸಂಹರಿಸಲು ಆ ಭೂಸುರನು " ಮೃತ್ಯುವು ಸನ್ನಿಹಿತವಾದಾಗ ನಿನ್ನ ರಥವು ಭೂಮಿಯಲ್ಲಿ ಹೂತುಕೊಳ್ಳಲಿ. " ಎಂದು ಶಾಪಕೊಟ್ಟಿದ್ದನು. ಆ ಶಾಪ ಕಾರಣದಿಂದ ಹೀಗಾಯಿತು. ಅನಂತರ ರಾಧೇಯನು ಧೈರ್ಯಗುಂದಿ ಧರ್ಮವನ್ನು ನಿಂದಿಸಿ ಪುನಃ ಭಯಂಕರವಾಗಿ ಹೋರುತ್ತಾ ಚಕ್ರವು ಹೂತಿರುವುದರಿಂದ ತೇರಿನ ಮೇಲಿರುವುದಕ್ಕೆ ಯತ್ನವಿಲ್ಲದೆ ಅದನ್ನು ಎತ್ತಲು ಪ್ರಯತ್ನಿಸಿ ಭೂಮಿಯ ಮೇಲಕ್ಕೆ ಲಂಘಿಸಿ, ಅರ್ಜುನನನ್ನು ನೋಡಿ ನೀನು ಧರ್ಮಪರನಾದುದರಿಂದ ಧರ್ಮವನ್ನು ಸ್ಮರಿಸಿ ನಾನು ಚಕ್ರವನ್ನೆತ್ತುವವರೆಗೂ ನೀನು ಯುದ್ಧವನ್ನು ನಿಲ್ಲಿಸುವುದೆಂದು ಬೇಡಿದನು. ವಾಸುದೇವನು ಆ ಮಾತುಗಳನ್ನು ಕೇಳಿ ರೋಷದಿಂದ ಕೂಡಿದವನಾಗಿ ಕರ್ಣನನ್ನು ಕುರಿತು– " ನಿನಗೆ ವಿಪತ್ತುಂಟಾದಾಗ ನೀನು ಧರ್ಮವನ್ನು ಸ್ಮರಿಸುವುದು ಎಷ್ಟು ಯೋಗ್ಯವಾದುದು ಪಾಂಡವರಿಗೆ ಕೇಡುಮಾಡುವಾಗಲೆಲ್ಲಾ ಧರ್ಮವನ್ನು ಮರೆತಿದ್ದೆ. ಭೀಮನಿಗೆ ವಿಷಾನ್ನವನ್ನಿಟ್ಟಾಗಲೂ, ಲಾಕ್ಷಾಗೃಹ ದಹನಸಮಯದಲ್ಲಿಯೂ, ದ್ರೌಪದಿಯನ್ನು ಪರಿಭವಿಸಿದ ಸಮಯದಲ್ಲಿಯೂ ನಿನ್ನ ಧರ್ಮವೆಲ್ಲಿಹೋಗಿತ್ತು ? ಆ ಸಮಯಗಳಲ್ಲೆಲ್ಲಾ ಇಲ್ಲದಿದ್ದ ಧರ್ಮಶಬ್ದವನ್ನು ಈಗಲೇಕೆ ವೃಥಾ ಉಚ್ಚರಿಸುತ್ತಾ ಕೇವಲ ಕಂಠಶೋಷಣೆ ಮಾಡಿಕೊಳ್ಳುತ್ತಿರುವೆ ? " ಎಂದು ಶ್ರೀ ಕೃಷ್ಣನು ನುಡಿಯಲು, ಕರ್ಣನು ಚಕ್ರವನ್ನೆತ್ತುವುದನ್ನು ಬಿಟ್ಟು ಪಾರ್ಥನ ಮೇಲೆ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿ ಆತನಿಗೆ ಗಲಿಬಿಲಿಯನ್ನುಂಟುಮಾಡಿ ಕೈಯಾಡಿಸಲಾರದಂತೆ ಮಾಡಿ ಪುನಃ ಭೂಮಿಯಮೇಲಕ್ಕೆ ಲಂಘಿಸಿ ಚಕ್ರವನ್ನು ಮೇಲಕ್ಕೆ ಎತ್ತಲು ಪ್ರಯತ್ನಿಸಿದನು. ಅಷ್ಟರಲ್ಲಿ ಕುಂತೀ ನಂದನನು ಚೇತರಿಸಿಕೊಂಡು ವೈರಿಯಮೇಲೆ ಅಸ್ತ್ರವನ್ನು ಹಾಕಿ ಅವನ ಅಸ್ತ್ರವನ್ನು ಕತ್ತರಿಸಿ ಧ್ವಜಸ್ತಂಭವನ್ನು ಛೇದಿಸಿ ನಾನು ಸತ್ಯವ್ರತನಾಗಿಯೂ ಧರ್ಮಪರಾಯಣನಾಗಿಯೂ ಇರುವುದಾದರೆ ಈ ಅಸ್ತ್ರವು ಕರ್ಣನ ತಲೆಯನ್ನು ಕತ್ತರಿಸಲಿ ಎಂದು ಹೇಳಿ ಒಂದು ಕ್ರೂರನಾರಾಚವನ್ನು ಪ್ರಯೋಗಿಸಿ ಅವನ ತಲೆಯನ್ನು ಛೇದಿಸಿದನು. ಹೀಗೆ ರವಿತನಯನು ಬೀಳಲು ಅವನ ಶರೀರದಿಂದ ದೇದೀಪ್ಯಮಾನವಾದ ಒಂದು ತೇಜಸ್ಸು ಹೊರಹೊರಟು ಮೇಲಕ್ಕೆ ಹಾರಿ ಸೂರ್ಯಮಂಡಲವನ್ನು ಪ್ರವೇಶಿಸಿತು. ಅಷ್ಟರಲ್ಲಿ ದಿನಕರ ಕರನಿಕರಗಳು ಕರ್ಣನ ಶರೀರವನ್ನು ತಗುಲಿದುದರಿಂದ

ಆತನ ರಕ್ತಪರಿಷಿಕ್ತಗಳಾದುವೋ ಎಂಬಂತೆ ಅರುಣಚ್ಛವಿಗಳಾಗಿ ಗಗನತಲವನ್ನು ಕೆಂಪಾಗಿ ಮಾಡಿದುವು. ಅನಂತರ ಸೂರ್ಯನೂ ಸಹ ಪುತ್ರಶೋಕದಿಂದಲೋ ಎಂಬಂತೆ ಕಾಂತಿಹೀನನಾಗಿ ಮುಖವನ್ನೇ ಮರೆಮಾಡಿಕೊಂಡನು. ಅಷ್ಟಕ್ಕೆ ಯುದ್ಧವು ಪರಿಸಮಾಪ್ತಿಯಾಯಿತು. ಕೌರವಪಾಳಯದಲ್ಲಿ ಗೋಳಾಟವೂ ಪಾಂಡವರ ಪಾಳಯದಲ್ಲಿ ಜಯಜಯ ನಿನದವೂ ಉಂಟಾದುವು.

ಕರ್ಣಪರ್ವವು ಮುಗಿದುದು.

---

## ಶಲ್ಯಪರ್ವ.

ಹದಿನೆಂಟನೆಯದಿನ ಶಲ್ಯನು ಸೇನಾನಾಯಕನಾಗಿ ನಿಯಮಿಸಲ್ಪಟ್ಟನು. ಆತನ ಯುದ್ಧವನ್ನು ಶಲ್ಯಪರ್ವವು ಹೇಳುತ್ತಿರುವುದು. ಆತನಿಗೆ ಪ್ರತಿಭಟಿಸಿ ಯುಧಿಷ್ಠಿರನು ಸೇನೆಗಳನ್ನು ಆತನ ಮೇಲೆ ನಡೆಸಲು ಎರಡುಪಕ್ಷದವರೂ ಮಹಾಘೋರವಾಗಿ ಕಾದಿದರು. ಧರ್ಮಜನು ಅನೇಕವೇಳೆ ಮದ್ರಪತಿಯನ್ನು ಇದಿರಿಸಲು ಉಳಿದವರು ಆತನಿಗಡ್ಡವಾಗಿಬರುತ್ತಿದ್ದರು. ಕಟ್ಟಕಡೆಗೆ ಯುಧಿಷ್ಠಿರನು ಶಲ್ಯನಿಗಿದಿರಾಗಿ ಯುದ್ಧಮಾಡಿ ಅವನ ಸಾರಥಿಯನ್ನೂ ಅಶ್ವಗಳನ್ನೂ ಕೊಂದು ಸಮುಜ್ಜ್ವಲವಾದ ಒಂದು ಅಸ್ತ್ರವನ್ನು ಅಭಿಮಂತ್ರಿಸಿ ಪ್ರಯೋಗಿಸಲು ಅದು ಶಲ್ಯನ ಎದೆಯಲ್ಲಿ ಹೊಕ್ಕು ಸೀಳಿ ಅವನನ್ನು ಭೂಮಿಯಮೇಲೆ ಉರುಳಿಸಿತು.

ಅನಂತರದಲ್ಲಿ ಯುದ್ಧವು ಇನ್ನೂ ನಡೆಯುತ್ತಿತ್ತಾದರೂ ಕೌರವರು ರಣರಂಗದಲ್ಲಿ ಯುದ್ಧಮಾಡಿ ಸಾಯುವುದಕ್ಕಿಂತ ಬೇರೆ ಶರಣವಿಲ್ಲವೆಂದು ಮನಸ್ಸಿನಲ್ಲಿ ವಿಗತಾಶರಾದರು. ಅಷ್ಟರಲ್ಲಿ ದುರ್ಯೋಧನ ಸುಶರ್ಮರಿಬ್ಬರು ಹೊರತಾಗಿ ಉಳಿದ ಧೃತರಾಷ್ಟ್ರತನಯರೆಲ್ಲರೂ ಒಬ್ಬೊಬ್ಬರಾಗಿ ಮಡಿದರು. ಕೊನೆಗೆ ದುರ್ಯೋಧನನು ಒಬ್ಬಂಟಿಗನಾದನು. ಕಡೆಗೆ ತನ್ನ ಕುದುರೆಯೂ ಸತ್ತುಹೋಗಲು ಒಂದು 'ಮಡುವಿನ ಬಳಿಗೆ ಹೋಗಿ ಒಂದು ಮಹಾ ಮಂತ್ರದಮಹಿಮೆಯಿಂದ ಅಲ್ಲಿನ ಜಲವನ್ನು ಭೇದಿಸಿ ಅದರಲ್ಲಿ ಅವಿತುಕೊಂಡನು. ಆ ಮಹಾಹವದಲ್ಲಿ ದುರ್ಯೋಧನನು ತಾನೊಬ್ಬನೇ ಅವಶಿಷ್ಟನಾದೆನೆಂದು ತಿಳಿದನಾದರೂ ಕೃಪಾಶ್ವತ್ಥಾಮ ಕೃತವರ್ಮರೆಂಬ

ಮೂವರು ರಥಿಕರು ಹತಶೇಷರಾದರು. ಅವರು ಜೀವಿಸಿದ್ದುದನ್ನು ದುರ್ಯೋಧನನು ತಿಳಿಯದೇಹೋದನು. ಆ ಮೂವರೂ ದುರ್ಯೋಧನನು ಮಡುವಿನಲ್ಲಿ ಅವಿತಿರುವುದನ್ನು ಸಂಜಯನಿಂದ ತಿಳಿದವರಾಗಿ ಆ ದಿನರಾತ್ರಿ ಆತನ ಬಳಿಗೆ ಹೋಗಿ ಪುನಃ ಯುದ್ಧಕ್ಕೆ ಯತ್ನಿಸೆಂದು ಬೋಧಿಸಲು ಆತನು ಬಳಲಿದ್ದುದರಿಂದ ಯುದ್ಧಮಾಡಲು ಒಪ್ಪಲಿಲ್ಲ. ಆಕಡೆ ಬಂದ ಕೆಲವರು ಬೇಟೆಗಾರರು ಆ ಮಡುವಿನಬಳಿಗೆ ಬಂದು ಅವರ ಮಾತುಗಳನ್ನು ಕೇಳಿ ಆ ಹ್ರದದಲ್ಲಿ ಅವಿತುಕೊಂಡಿರತಕ್ಕವನು ದುರ್ಯೋಧನನಾಗಿರಬೇಕೆಂದು ಊಹಿಸಿ ಪಾಂಡವರಬಳಿಗೆ ಬಂದು ಆ ವೃತ್ತಾಂತವನ್ನು ತಿಳಿಸಲು ಪಾಂಡವರು ಕೂಡಲೆ ಪರಾಜಿತನಾದ ಆ ದೊರೆಯು ಶರಣುಹೊಂದಿದ್ದ ಮಡುವಿನ ಬಳಿಗೆ ಹೋದರು. ಅವರಲ್ಲಿ ಧರ್ಮನಂದನನು ದುರ್ಯೋಧನನೊಡನೆ ನೀನು ಮಡುವಿನಿಂದ ಹೊರಟುಬಂದು ನಮ್ಮೊಡನೆ ಯುದ್ಧಮಾಡಿ ರಾಜ್ಯವನ್ನು ತೆಗೆದುಕೊಳ್ಳುವುದೆಂದು ಹೇಳಲು, ಆತನು 'ನಾನೀಗ ಆಯಾಸಹೊಂದಿರುವೆನು. ಸ್ವಲ್ಪಕಾಲ ವಿರಾಮಕೊಟ್ಟಲ್ಲಿ ಸ್ವಲ್ಪ ವಿಶ್ರಮಿಸಿಕೊಂಡು ಆ ಕೂಡಲೆ ಇಲ್ಲಿಂದ ಹೊರಗೆ ಬಂದು ಯುದ್ಧಮಾಡುವೆನು' ಎಂದು ಪ್ರತ್ಯುತ್ತರ ಕೊಟ್ಟನು. ಪುನಃ ಕೌಂತೇಯನು ಗಾಂಧಾರೇಯನನ್ನು ಬಲಾತ್ಕಾರದಿಂದ ಕರೆಯಲು, ಆತನು 'ನಾನು ಹೆಚ್ಚಾಗಿ ನೊಂದಿರುವೆನು. ನನ್ನವರೆಲ್ಲರೂ ನಾಶವಾದರು. ಭೂಮಿಯು ಈಗ ನನಗೆ ಮರುಭೂಮಿಯಾಯಿತು. ಆದುದರಿಂದ ನಾನು ಇನ್ನುಮೇಲೆ ಅರಣ್ಯಕ್ಕೆ ಹೊರಡುವೆನು. ಸಮಸ್ತವೂ ನಾಶವಾಗಿರುವ ಈ ಭೂಮಿಯನ್ನು ನೀನೇ ಪರಿಪಾಲಿಸು' ಎಂದು ಹೇಳಿದನು. ಧರ್ಮಜನು ಪರಿಹಾಸದೊಡನೆ ಆತನನ್ನು ಕುರಿತು ರಾಜ್ಯಭ್ರಷ್ಟನಾಗಿರುವ ನಿನ್ನಿಂದ ನಾನು ಈಗ ಈ ಭೂಮಿಯನ್ನು ದಾನವಾಗಿ ಪರಿಗ್ರಹಿಸಲೊಲ್ಲೆನು ; ಆದುದರಿಂದ ನೀನು ಈ ಮಡುವಿನಿಂದ ಹೊರಗೆಬಂದು ಯುದ್ಧಮಾಡುವುದು ಎಂದು ಕರೆಯಲು, ದುರ್ಯೋಧನನಿಂತೆಂದನು. ''ನಾನು ಒಬ್ಬಂಟಿಗನಾಗಿಯೂ ಬಲರಹಿತನಾಗಿಯೂ ಇರುವೆನು. ರಥಾಶ್ವಗಳು ನನಗಿಲ್ಲ; ನಿರಾಯುಧನಾಗಿರುವೆನು. ಇಂತಹ ಅವಸ್ಥೆಯಲ್ಲಿ ನಾನು ಭೂಮಿಯಮೇಲೆ ನಿಂತು ಸಾಯುಧರೂ ರಥಾರೂಢರೂ ಆದ ಅನೇಕ ಯೋಧರೊಡನೆ ಒಬ್ಬನೇ ಯಾವರೀತಿಯಲ್ಲಿ ಯುದ್ಧವನ್ನು ಮಾಡಲಿ'' ಎಂದು ಹೇಳಿದರೂ ಆತನ ಧೈರ್ಯಸ್ಥೈರ್ಯಗಳು ಆತನ ಆಪತ್ಕಾಲದಲ್ಲಿಯೂ ಕಡಿಮೆಯಾಗದಿದ್ದುದರಿಂದ ಪುನಃ ಯುಧಿಷ್ಠಿರನನ್ನು ಕುರಿತು, ''ಧರ್ಮನಂದನ ! ನಾನು ನಿಸ್ಸಹಾಯನಾದಾಗ್ಯೂ ಸಮರಕ್ಕೆತೊಡಗಿದೆನಾದರೆ ನಿಮ್ಮೆಲ್ಲರನ್ನೂ ನಾಶಮಾಡುವೆನು. ನೀವೆಲ್ಲ

ರೂ ನನ್ನೊಡನೆ ಒಬ್ಬೊಬ್ಬರಾಗಿ ಹೋರಿರಿ'' ಎಂದು ಹೇಳಲು ಧರ್ಮತನಯನು ಹಾಗೆ ಯೇಮಾಡುವೆವೆಂದು ಒಪ್ಪಿಕೊಂಡು ''ನೆಮ್ಮಲ್ಲಿ ಯಾರೊಬ್ಬನನ್ನು ನೀನು ಕೊಂದೆ ಯಾದರೂ ರಾಜ್ಯವನ್ನು ನೀನೇ ತೆಗೆದುಕೊಳ್ಳಬಹುದು'' ಎಂದು ಹೇಳಿದನು. ಸುಯೋಧನನು ನನ್ನೊಡನೆ ನಿಮ್ಮಲ್ಲೊಬ್ಬನೇ ಭೂಮಿಯಮೇಲೆ ನಿಂತು ಗದಾಯುದ್ಧವನ್ನು ಮಾಡಲಿಷ್ಟವುಂಟೇ ಎಂದು ಹೇಳಲು, ಧರ್ಮನಂದನನು ಅದಕ್ಕೆ ಸಮ್ಮತಿಪಟ್ಟನು. ಧಾರ್ತರಾಷ್ಟ್ರನು ಹ್ರದದಿಂದ ಹೊರಹೊರಟನು. ಯುಧಿಷ್ಠಿರನು ಅವನಿಗೆಬೇಕಾದ ಯುದ್ಧಸಾಮಗ್ರಿಗಳನ್ನೊದಗಿಸಿ ಅವನೊಡನೆ ಗದಾಯುದ್ಧಮಾಡುವಂತೆ ಭೀಮನನ್ನು ನಿಯಮಿಸಿದನು. ಹೀಗೆ ಭೀಮದುರ್ಯೋಧನರು ಗದಾಯುದ್ಧವನ್ನು ಮಾಡುವಂತೆ ಗೊತ್ತುಮಾಡಿಕೊಳ್ಳಲು ಅದನ್ನು ನೋಡಲಪೇಕ್ಷಿಸಿ ಎಲ್ಲರೂ ಅವರನ್ನು ಪರಿವೇಷ್ಟಿಸಿ ಕುಳಿತರು. ಯೋಧವರರು ಆ ಜನ್ಮಸಿದ್ಧವಾದ ವೈರವನ್ನು ಕೊನೆಗಾಣಿಸತಕ್ಕ ಅವರ ಕಡೇಯುದ್ಧವನ್ನು ನೋಡಲು ಶ್ರೀಕೃಷ್ಣನ ಅಣ್ಣನಾದ ಬಲರಾಮನೂ ಬಂದನು.

(ಗದಾಪರ್ವ) ಹಲಾಯುಧನು ಅಷ್ಟಕ್ಕೆಮೊದಲೇ ಯುದ್ಧದಲ್ಲಿ ತಾನು ಒಬ್ಬರಿಗೂ ಸಹಾಯಮಾಡುವುದಿಲ್ಲವೆಂದು ಶಪಥಮಾಡಿ ತೀರ್ಥಯಾತ್ರೆಗಾಗಿ ಹೊರಟು ಅನೇಕ ಪುಣ್ಯತೀರ್ಥಗಳಲ್ಲಿ ಸ್ನಾನಮಾಡುತ್ತಾ ಕುರುರಾಜನು ಉಳುತ್ತಿದ್ದುದರಿಂದ ಕುರುಕ್ಷೇತ್ರಕ್ಕೆ ಆ ಹೆಸರು ಬಂತೆಂದು ತಿಳಿದವನಾದುದರಿಂದ ಆತನು ಅವರೊಡನೆ ನೀವು ಕುರುಕ್ಷೇತ್ರಕ್ಕೆಹೋಗಿ ದ್ವಂದ್ವಯುದ್ಧವನ್ನು ಮಾಡಿರೆಂದು ಬೋಧಿಸಲು ಅವರೆಲ್ಲರೂ ಆ ಸ್ಥಳವನ್ನು ಸೇರಿದರು. ಅನಂತರ ಸಮಾನಪರಾಕ್ರಮವುಳ್ಳ ಆ ವೀರೋತ್ತಂಸರು ಒಬ್ಬರನ್ನೊಬ್ಬರು ತಾಕಿ ಭಯಂಕರವಾದ ಪೆಟ್ಟುಗಳಿಂದ ಒಬ್ಬರನ್ನೊಬ್ಬರು ಹೊಡೆಯುತ್ತಾ ಮಹೋಗ್ರವಾಗಿ ಹೋರತೊಡಗಿದರು. ಹೀಗೆ ಅವರಿಬ್ಬರೂ ಹೋರುತ್ತಿರಲು ಗೋವಿಂದನು ಪಾರ್ಥನೊಡನೆ ಭೀಮನು ಮೊದಲುಮಾಡಿದ್ದ ಪ್ರತಿಜ್ಞೆಯನ್ನು ಜ್ಞಾಪಿಸಿದನು. ಅರ್ಜುನನು ಭೀಮನು ನೋಡುತ್ತಿರುವಹಾಗೆ ತನ್ನ ಎಡತೊಡೆಯನ್ನು ತಟ್ಟಿದನು. ಭೀಮಸೇನನು ಆ ಸನ್ನೆಯನ್ನು ತಿಳಿದು ಸಮಯವನ್ನು ನೋಡಿ ತನ್ನ ಗದಾದಂಡವನ್ನು ಗಿರಗಿರನೆ ತಿರಗಿಸುತ್ತಾ ಅದರಿಂದ ಶತ್ರುವನ್ನು ಸಂಹರಿಸುವುದಕ್ಕಾಗಿ ಅವನ ಕಡೆಗೆ ನುಗ್ಗಿ ಹೊಡೆಯಲು ದುರ್ಯೋಧನನು ಆ ಏಟಿನಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಮೇಲಕ್ಕೆ ಹಾರಿದನು ಹೀಗೆ ಹಾರಲು ವೃಕೋದರನು ತನ್ನ ಗದಾದಂಡವನ್ನು ಆ ಕುರುಭೂಪಾಲಕನ ತೊಡೆಗಳಮೇಲೆ ಪರಾಕ್ರಮ

ದಿಂದ ಹೊಡೆದು ಅವುಗಳನ್ನು ಮುರಿದುಬಿಟ್ಟನು. ಅನಂತರ ಬಕಾಂತಕನು ಅವನು ತಮಗೆ ಮೊದಲು ಮಾಡಿದ ಅಪಕಾರಗಳನ್ನು ಯೋಚಿಸುತ್ತಾ ದೀನನಾಗಿ ಬಿದ್ದಿರುವ ತನ್ನ ವೈರಿಯ ಸಮೀಪಕ್ಕೆ ಹೋಗಿ, ಎಲೋ ಪಾಪಾತ್ಮಾ! ನೀನು ಮೊದಲು ದ್ರೌಪದಿಗೆ ಮಾಡಿದ ಅವಮಾನಗಳನ್ನು ಈಗ ಮನಸ್ಸಿಗೆ ತಂದುಕೋ, ಎಂಬದಾಗಿ ಹೇಳುತ್ತಾ ಅವನ ಮಸ್ತಕವನ್ನು ತನ್ನ ವಾಮಪಾದದಿಂದ ಸ್ಪರ್ಶಿಸಿದನು. ಅದನ್ನು ನೋಡಿ ಸಮೀಪದಲ್ಲಿದ್ದ ರಾಜರುಗಳು ಇದು ಯೋಗ್ಯವಲ್ಲವೆಂದು ಹೇಳುತಿರಲು ಧರ್ಮತನಯನು ಭೀಮಸೇನನನ್ನು ಕುರಿತು, ಎಲೈ ಭೀಮಾ! ‹ದುರ್ಯೋಧನನು ಮಹೀಪತಿಯು, ನಿನಗೆ ಜ್ಞಾತಿಯು; ಆತನೀಗ ನೆಲದಲ್ಲಿ ಬಿದ್ದು ಪರಾಜಿತನಾಗಿರುವನು. ಆದುದರಿಂದ ನೀನು ಆತನನ್ನು ಒದೆಯುವುದು ಯುಕ್ತವಲ್ಲ.' ಎಂದು ಹೇಳಿ ಕರುಣಾಪೂರ್ಣನಾಗಿ ದುರ್ಯೋಧನನಿಗುಂಟಾದ ಆಪತ್ತುಗಳನ್ನು ಹೇಳುತ್ತಾ ಅವನ ಬಳಿಗೆ ಹೋಗಿ ‹‹ನೀನು ಈ ರೀತಿಯಲ್ಲಿ ವೀರಶಯನದಲ್ಲಿ ಮೃತನಾಗುವಿಕೆಯು ರಣನಿಹತರಾದ ಬಂಧುಗಳ ಪತ್ನಿಯರ ನಿಂದೆಗಳನ್ನು ಕೇಳುತ್ತಾ ನನ್ನಂತೆಯೂ ನನ್ನ ತಮ್ಮಂದಿರಂತೆಯೂ ಬದುಕುವುದಕ್ಕಿಂತಲೂ ಅತ್ಯಂತ ಉತ್ತಮವಾದುದರಿಂದ ನೀನು ವ್ಯಥೆಹೊಂದಬೇಡ.'' ಎಂದು ಸಮಾಧಾನಮಾಡಿದನು

ಗದಾಯುದ್ಧವನ್ನು ಮಾಡತಕ್ಕವರು ನಡುವಿನಿಂದ ಕೆಳಕ್ಕೆ ಹೊಡೆಯುವುದು ಅಧರ್ಮವಾದುದರಿಂದ ಭೀಮನು ಹೀಗೆ ದುರ್ಯೋಧನನ ತೊಡೆಗಳನ್ನು ಮುರಿದು ಹಾಕಿದುದನ್ನು ನೋಡಿ ಬಲರಾಮನು ಕೋಪೋದ್ದೀಪಿತನಾಗಿ ಇವನನ್ನು ಕೊಂದು ಬಿಡುವೆನೆಂದು ಭೀಮನಮೇಲೆ ಉರವಣಿಸಲು ಅಷ್ಟರಲ್ಲಿ ಕೇಶವನು ತನ್ನ ಬಾಹುಗಳಿಂದ ಆತನನ್ನು ಅಪ್ಪಿ ಭದ್ರವಾಗಿ ಹಿಡಿದುಕೊಂಡು ಭೀಮನ ಪ್ರತಿಜ್ಞೆಯನ್ನು ತಿಳಿಯಪಡಿಸಿ ಲಲಿತವಾದ ವಚನಗಳಿಂದ ಆತನ ಕೋಪವನ್ನು ಶಾಂತಿಮಾಡಿದನು. ಅನಂತರ ಕೇಶವಾಗ್ರಜನು ರಥವನ್ನಧಿರೋಹಿಸಿ ಹೊರಟನು. ಪಾಂಡವರು ಶೋಕಸಂತಪ್ತರಾದರು. ಹೀಗೆ ದುರ್ಯೋಧನನು ಧರ್ಮವಿರೋಧದಿಂದ ನಡೆದು ಹೊಡೆಯಲ್ಪಟ್ಟು ಮರಣವನ್ನು ನಿರೀಕ್ಷಿಸುತ್ತಿದ್ದನಾದರೂ ಅವನ ಧೈರ್ಯವು ಆತನನ್ನು ಬಿಡಲಿಲ್ಲ. ಮುರಾಂತಕನು ತನ್ನನ್ನು ದೂಷಿಸಿದರೂ ಆ ದುರ್ಯೋಧನನು ಆತನನ್ನು ಕುರಿತು ‹‹ನಾನು ವೇದಗಳನ್ನು ವಿಧಿವತ್ತಾಗಿ ಅಧ್ಯಯನ ಮಾಡಿರುವೆನು. ಶಾಸ್ತ್ರೋಕ್ತವಾಗಿ ದಾನಗಳನ್ನು ಮಾಡಿದೆನು. ಪಾರಾವಾರಪರೀತವಾದ ಭೂಮಂಡಲವನ್ನೆಲ್ಲಾ ಪಾಲಿಸಿದೆನು. ನನ್ನ ಶತ್ರುಗಳನ್ನು ಹಿಮ್ಮೆಟ್ಟಿದ್ದೆನು. ನನಗೆ ಸಮಾನನಾದ ಭಾಗ್ಯವಂತನಾ

ರುಂಟು ? ಕ್ಷತ್ರಿಯರು ಆಶಿಸುವ ವೀರಸ್ವರ್ಗವು ಈಗ ನನಗೆ ಪ್ರಾಪ್ತವಾಯಿತಾದುದರಿಂದ ನನ್ನಂತಹ ಅದೃಷ್ಟವಂತನಾವನಾದರೂ ಇರುವನೇ ? ಇತರ ಭೂಪಾಲಕರಿಗೆ ದುರ್ಲಭವಾದ ದಿವ್ಯಭೋಗಗಳನ್ನೆಲ್ಲಾ ಅನುಭವಿಸಿದೆನು. ಮನುಷ್ಯರಿಗೆ ಪ್ರಾರ್ಪಣೀಯವಾದ ಅತ್ಯುತ್ತಮವಾದ ಪದವಿಯನ್ನು ಹೊಂದುವನಾದೆನು. ನನ್ನಂತಹ ಭಾಗ್ಯವಂತನಿರುವನೇ ? ಅಕ್ಷೀಣಪ್ರಭಾವನಾದ ಸ್ವಾಮಿ ! ಸಕಲಹಿತ ಭಾತೃಸಹಿತನಾಗಿ ನಾನು ಸ್ವರ್ಗವನ್ನು ಕುರಿತು ಹೊರಡುವೆನು. ನೀವೆಲ್ಲರೂ ವಿಫಲಮನೋರಥನಾಗಿ ಶೋಕೋದ್ವಿಗ್ನಚಿತ್ತರಾಗಿ ಸುಖರಹಿತವಾದ ಈ ಮಹೀತಲದಲ್ಲಿ ವಾಸಿಸಿರಿ'' ಎಂದು ದುರ್ಯೋಧನನು ಪರಾಜಿತನಾಗಿ ಮರಣವೇದನೆಯನ್ನು ಅನುಭವಿಸುತ್ತಾ ವಿಜಯರಾದ ಅರಾತಿವರ್ಗದಿಂದ ಸುತ್ತಲ್ಪಟ್ಟಿದ್ದಾಗ್ಯೂ ಈ ರೀತಿಯಲ್ಲಿ ಗೌರವಯುಕ್ತವಾದ ಪ್ರತ್ಯುತ್ತರವನ್ನು ಹೇಳಿದನು. ಆತನಲ್ಲಿ ಮೂರ್ಖತನವೂ ಕ್ರೌರ್ಯವೂ ಸೇರಿದ್ದಾಗ್ಯೂ ಬಲವೂ ಧೈರ್ಯವೂ ಆತನನ್ನು ಒಂದು ಕಾಲದಲ್ಲಿಯೂ ಬಿಟ್ಟು ಹೋಗಿರಲಿಲ್ಲ. ಅವನ ಈ ವಾಕ್ಕು ಅವನ ವೀರಸ್ವಭಾವವನ್ನು ಪ್ರದರ್ಶಿಸುವುದು.

ಅನಂತರ ಪಾಂಡವರು ತಮ್ಮ ಶಿಬಿರಗಳಿಗೆ ಬರಲಾಗಿ ನಾರಾಯಣನು ಸವ್ಯಸಾಚಿಯನ್ನು ತೂಣೀರ ಗಾಂಡೀವ ಸಹಿತನಾಗಿ ರಥದಿಂದಿಳಿಯುವಂತೆ ಹೇಳಲು ಆತನು ಅದರಂತೆ ಇಳಿದು ಆತನ ಇದಿರಾಗಿ ನಿಂತನು. ಕೃಷ್ಣನೂ ರಥದಿಂದಿಳಿಯಲು ಪತಾಕೆಯಲ್ಲಿ ಕಾಣುತ್ತಿದ್ದ ಕಪಿವರನೂ ಅದೃಶ್ಯನಾದನು. ಅಷ್ಟರಲ್ಲಿ ಆ ರಥವೂ ಹಗ್ಗಗಳೂ ಕುದುರೆಗಳೂ ನೊಗ ಕಡಿವಾಣಗಳೂ ಕ್ಷಣಮಾತ್ರದಲ್ಲಿ ಸುಟ್ಟು ಬೂದಿಯಾದುವು. ಅದನ್ನು ನೋಡಿದ ನರನು ಆಶ್ಚರ್ಯಹೊಂದಿ ಇದೇಕೆ ಹೀಗೆ ಸುಟ್ಟು ಹೋಯಿತೆಂದು ಕೇಳಲು ಕಮಲನಾಭ ನಿಂತು ಹೇಳಿದನು. ‹‹ ಅರ್ಜುನ ! ಈ ಸ್ಯಂದನವು ಇಷ್ಟಕ್ಕೆ ಮೊದಲೇ ಶತ್ರುಗಳಿಂದ ಪ್ರಯೋಗಿಸಲ್ಪಟ್ಟ ನಾನಾ ವಿಧಗಳಾದ ಆಯುಧಗಳಿಂದ ದಗ್ಧವಾಯಿತು. ಪರಂತಪ ! ಯುದ್ಧಕಾಲದಲ್ಲಿ ನಾನು ಅದರಲ್ಲಿ ಕುಳಿತಿದ್ದಕಾರಣದಿಂದ ಅದು ಇದುವರೆಗೂ ಭಸ್ಮವಾಗದಿತ್ತು. ಬ್ರಹ್ಮಾಸ್ತ್ರಮಹಿಮೆಯಿಂದ ಇದು ಮೊದಲೇ ದಗ್ಧವಾಗಿದ್ದರೂ ನಿನ್ನಭಿಮತವು ನೆರವೇರಿದ ಮೇಲೆ ನಾನು ಇಳಿದಕೂಡಲೆ ಇದು ಭಸ್ಮಮಾತ್ರಾವಶಿಷ್ಟವಾಯಿತು.'' ಹೀಗೆ ಆ ಮಹಾಯುದ್ಧದಲ್ಲೆಲ್ಲಾ ಪದ್ಮನಾಭನು ಪಾರ್ಥನಿಗೆ ಸ್ನೇಹಿತನೂ ರಕ್ಷಕನೂ ಆಗಿದ್ದು ಕೃಷ್ಣನೆಲ್ಲಿರುವನೋ ಅಲ್ಲಿ ವಿಜಯವುಂಟಾಗುವುದೆಂಬ ಆರ್ಯೋಕ್ತಿಯನ್ನು ವ್ಯಕ್ತಪಡಿಸಿದನು.

ಅನಂತರ ಧರ್ಮತನಯನು ಕೃಷ್ಣನನ್ನು ಕುರಿತು “ ನೀನು ಹಸ್ತಿನಾಪುರಕ್ಕೆ ಹೋಗಿ ದುರ್ಯೋಧನನ ಮರಣವನ್ನು ಗಾಂಧಾರಿಗೆ ತಿಳಿಯಿಸು. ಈ ಕಠೋರ ವೃತ್ತಾಂತವನ್ನು ಆಕೆಗೆ ತಕ್ಕ ರೀತಿಯಲ್ಲಿ ತಿಳಿಯಿಸಲು ನೀನು ಹೋಗದಿದ್ದಲ್ಲಿ ಆ ಮಹಾ ತಪಸ್ವಿನಿಯ ಮನಸ್ಸಿನ ಶೋಕಾಗ್ನಿಯು ಆಕೆಯ ಸುತರಿಗೆ ಶತ್ರುಗಳಾದ ನಮ್ಮನ್ನು ದಹಿಸಿಬಿಡುವುದು ” ಎಂದು ಹೇಳಿದನು. ಅದನ್ನು ಕೇಳಿ ಅಚ್ಯುತನು ಶಹಬಾಸ್ ಎಂದು ಹೇಳುತ್ತಾ ಹಸ್ತಿನಾಪುರಕ್ಕೆ ಹೊರಟು ಸುತವಿಯೋಗದಿಂದ ಕುಂದುತ್ತಿರುವ ಆ ದಂಪತಿಗಳಿಗೆ ನಮ್ರತೆಯಿಂದ ನಮಸ್ಕರಿಸಿ ಅಂಧನೃಪತಿಯ ಕೈ ಯನ್ನು ತನ್ನ ಕೈಯಿಂದ ಹಿಡಿದುಕೊಂಡು ನಿಟ್ಟುಸಿರುಬಿಡುತ್ತಾ ಪಾಂಡವರು ಕೌರ ವರೊಡನೆ ಈ ವಿಧದಲ್ಲಿ ಘೋರವಾಗಿ ಹೋರಾಡಿ ಅವರುಗಳನ್ನು ಸಂಹರಿಸಿದುದಕ್ಕೆ ಕಾರಣಗಳನ್ನು ನಿದಾನವಾಗಿ ಹೇಳಿ ಗಾಂಧಾರಿಯನ್ನು ನೋಡಿ ನೀನು ದುರ್ಯೋ ಧನನೊಡನೆ ಮೊದಲು ಹೇಳಿದ ಹಿತವಚನಗಳನ್ನು ಸ್ಮರಿಸೆಂದು ಹೇಳಲು ಆಕೆಯು ತನ್ನ ವ್ಯಥೆಯನ್ನು ಸ್ವಲ್ಪಮಟ್ಟಿಗೆ ಅಡಗಿಸಿಕೊಂಡು ಕೃಷ್ಣನ ಸಂಗಡ “ ಕೇಶವ ! ನೀನು ಹೇಳಿದುದು ನಿಶ್ಚಯವು. ಶೋಕಸಂತಪ್ತವಾದ ನನ್ನ ಹೃದಯವು ನಿಲುಕಡೆ ಯನ್ನು ಹೊಂದಲಾರದುದಾಯಿತು. ನಿನ್ನ ವಚನಗಳನ್ನು ಕೇಳಿದುದರಿಂದ ನನ್ನ ಮನಸ್ಸು ನಿಲುಕಡೆಯನ್ನು ಹೊಂದಿತು. ಸುತವಿಹೀನನಾದ ಈ ಅಂಧನೃಪತಿಗೆ ಇನ್ನುಮೇಲೆ ಪುರುಷೋತ್ತಮನಾದ ನೀನೂ ಪಾಂಡುನಂದನರೂ ಹೊರತು ಬೇರೆ ಪಾಲಕರಿಲ್ಲ ” ಎಂದು ಹೇಳಿ ಪುನಃ ಮುಖವನ್ನು ಮರೆಮಾಡಿಕೊಂಡು ಗೊಳೋ ಎಂದು ಅಳುತ್ತಿದ್ದಳು. ಅಷ್ಟರಲ್ಲಿ ದ್ರೋಣಪುತ್ರನು ಪಾಂಡವರಿಗೆ ಕೇಡನ್ನುಂಟು ಮಾಡುತ್ತಿರುವನೆಂದು ತಿಳಿದು ಜನಾರ್ದನನು ಸರಭಸವಾಗಿ ಎದ್ದು ಅವರೊಡನೆ ಪಾಂಡವರನ್ನು ಅಶ್ವತ್ಥಾಮನು ಈ ದಿನ ರಾತ್ರಿ ಕೊಲ್ಲಲು ಯತ್ನಿಸಿರುವನಾದುದ ರಿಂದ ನಾನು ಹೋಗಿಬರುವೆನೆಂದು ಹೇಳಲು ಅವರು ನೀನು ಜಾಗ್ರತೆಯಾಗಿ ಹೋಗಿ ಪಾಂಡವರನ್ನು ಕಾಪಾಡೆಂದು ಹೇಳಿದರು. ವಾಸುದೇವನು ಕೂಡಲೇ ಹೊರಟು ಬಂದು ಪಾಳಯವನ್ನು ಸೇರಿದನು.

ಇತ್ತಲಾಗಿ ದುರ್ಯೋಧನನು ಮರಣವೇದನೆಯಿಂದ ಸಂಕಟಪಡುತ್ತಾ ನೆಲ ದಲ್ಲಿ ಬಿದ್ದಿರುವುದನ್ನು ನೋಡಿ ಕೃಪಾಶ್ವತ್ಥಾಮ ಕೃತವರ್ಮರು ಆತನ ಅವಸ್ಥೆಗೆ ಹೆಚ್ಚಾಗಿ ಪಶ್ಚಾತ್ತಾಪ ಹೊಂದಿದರು. ದ್ರೋಣತನಯನು ಪಾಂಡವರನ್ನು ಸಂಹರಿ ಸಲು ನನಗಾಜ್ಞೆಕೊಡೆಂದು ದುರ್ಯೋಧನನನ್ನು ಬೇಡಲು ಆತನು ಅವರನ್ನು ನೋಡಿ

ದ್ರೋಣಪುತ್ರನಿಗೆ ಪಟ್ಟವನ್ನು ಕಟ್ಟೆಂದು ಹೇಳಿದನು. ಹೀಗೆ ಆತನು ಸೇನೆಯಿಲ್ಲದಿದ್ದಾಗ್ಯೂ ನಾಯಕನಾದನು. ಆದಾಗ್ಯೂ ಅಶ್ವತ್ಥಾಮನನ್ನು . ಪರಾಕ್ರಮಿಯೆನ್ನಬಹುದೆಂಬುದನ್ನು ಮುಂದೆ ತಿಳಿಯಬಹುದು. ಅಶ್ವತ್ಥಾಮನಿಗೆ ಸೇನಾನೀ ಪಟ್ಟಾಭಿಷೇಕವಾಯಿತು ಎಂಬಲ್ಲಿಗೆ ಶಲ್ಯಪರ್ವವು ಮುಗಿದುದು.

## ಸೌಪ್ತಿಕ ಪರ್ವ.

ನಿಜಪಿತೃವಧಕ್ಕೆ ಪ್ರತಿಯಾಗಿ ಅಶ್ವತ್ಥಾಮನು ಮಾಡಿದ ಕೃತ್ಯಗಳನ್ನು ಸೌಪ್ತಿಕಪರ್ವವು ಹೇಳುತ್ತಿರುವುದು. ಆತನು ನಿದ್ರಿಸುತ್ತಿರುವ ಪಾಂಡುತನಯರನ್ನು ವಧೆಮಾಡಲು ನಿಶ್ಚಯಿಸಿ ಇದು ಸರಿಯಲ್ಲವೆಂದು ಕೃಪನು ಎಷ್ಟು ನಿವಾರಿಸಿದಾಗ್ಯೂ ಕೇಳದೆ ಪಾಂಡವರ ಶಿಬಿರದ್ವಾರದ ಸಮೀಪವನ್ನು ಸೇರಿ ಅಲ್ಲಿದ್ದ ಒಬ್ಬ ಮಹಾಪುರುಷನು ತನಗೆ ಅಡ್ಡಬರಲು ಆತನ ಮೇಲೆ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದನು. ಅವುಗಳು ವ್ಯರ್ಥವಾದುವು. ಅನಂತರ ಅಶ್ವತ್ಥಾಮನು ರುದ್ರನನ್ನಾರಾಧಿಸಿ ಅಗ್ನಿಯನ್ನು ಪ್ರಜ್ವಲವಾಗುವಂತೆ ಮಾಡಿ ಅದರಲ್ಲಿ ತನ್ನ ಶರೀರವನ್ನೇ ಹೋಮಮಾಡಿ ಮಹಾದೇವನ ಸಾನ್ನಿಧ್ಯವನ್ನು ಹೊಂದಿ ತನ್ನ ಅಭಿಮತ ಸಿದ್ಧಿಯಾಗುವಂತೆ ಆತನ ವರ ಹೊಂದಿ ಅರ್ಧರಾತ್ರಿಯಲ್ಲಿ ಶಿಬಿರವನ್ನು ಪ್ರವೇಶಿಸಿ ಮೊದಲು ದೃಷ್ಟದ್ಯುಮ್ನನನ್ನು ನಾಶಮಾಡಿ ಅನಂತರ ದ್ರೌಪದೇಯರೈವರನ್ನೂ ಯಮಪಟ್ಟಣಕ್ಕೆ ಕಳುಹಿಸಿದನು. ಪಾಂಡವರೈವರೂ ಸಾತ್ಯಕಿಯೂ ಕೃಷ್ಣನೂ ಅಲ್ಲಿಲ್ಲದುದರಿಂದ ಆ ವಧೆಯಿಂದ ತಪ್ಪಿಸಿಕೊಂಡರು. ಅನಂತರ ಭಾರದ್ವಾಜಸುತನು ಕೃಪ ಕೃತವರ್ಮಸಹಿತನಾಗಿ ದುರ್ಯೋಧನನ ಸಮೀಪವನ್ನು ಸೇರಿ ಶತ್ರುಗಳು ನಾಶವಾದುದನ್ನು ತಿಳಿಯಿಸಲು ಆ ಮೇದಿನೀವಲ್ಲಭನು ತೃಪ್ತಿಹೊಂದಿ “ ನಿಮ್ಮಗೆಳ್ಲರಿಗೂ ಸ್ವಸ್ತಿಯಾಗಲಿ. ನಿಮಗೆ ಶುಭೋದಯಗಳೊದಗಲಿ. ನಾವೆಲ್ಲರೂ ಸ್ವರ್ಗದಲ್ಲಿ ಸೇರುವೆವು ” ಎಂದು ಹೇಳುತ್ತಾ ದುರ್ಯೋಧನನು ಪ್ರಾಣಗಳನ್ನುಬಿಟ್ಟನು. ದ್ರೌಪದೇಯರ ಸಾವನ್ನು ಕೇಳಿ ಯುಧಿಷ್ಠಿರನು ಹಂಬಲಿಸುತ್ತಾ ದ್ರೌಪದಿಯನ್ನು ಕರೇಕಳುಹಿಸಿ ಆ ಸಮಾಚಾರವನ್ನು

ಹೇಳಲು ಆಸ್ತ್ರೀಯು ದುಃಖಸಾಗರನಿಮಗ್ನಳಾಗಿ ಪಾಪಾತ್ಮನಾದ ಆ ಅಶ್ವತ್ಥಾಮನನ್ನು ಕೊಂದು ಆತನ ಶಿರೋರತ್ನವನ್ನು ನನಗೆ ತಂದುಕೊಡದಿದ್ದಲ್ಲಿ ನಾನು ಪ್ರಾಣಗಳನ್ನು ಕಳೆದುಕೊಳ್ಳುತ್ತೇನೆಂದು ಶಪಥಮಾಡಿದಳು. ಅಷ್ಟರಲ್ಲಿ ಭೀಮನು ಅಶ್ವತ್ಥಾಮನಮೇಲೆ ಯುದ್ಧಮಾಡುವುದಕ್ಕಾಗಿ ಹೋಗುತ್ತಿರಲು ಮಾಧವನು ಯುಧಿಷ್ಠಿರನನ್ನು ಕುರಿತು ‹‹ ಆ ಆಚಾರ್ಯತನಯನಬಳಿ ಬ್ರಹ್ಮಶಿರೋನಾಮಕವಾದ ದಿವ್ಯಾಸ್ತ್ರ ಒಂದಿರುವುದು. ಅದರ ಆಟೋಪವನ್ನು ಭೀಮನು ತಡೆಯಲಾರನು. ಆದುದರಿಂದ ನೀವಿಬ್ಬರೂ ನನ್ನ ರಥವನ್ನು ಹತ್ತಿ ನನ್ನೊಡನೆ ಬನ್ನಿರಿ '' ಎಂದು ಹೇಳಿ ಅವರುಗಳನ್ನು ಕರೆದುಕೊಂಡು ಅಶ್ವತ್ಥಾಮನ ಬಳಿಯನ್ನು ಸೇರುತ್ತಿದ್ದ ಅನಿಲತನಯನೊಡನೆ ಸೇರಿದರು. ಅಷ್ಟರಲ್ಲಿ ಆ ಗುರುನಂದನನು ಒಂದು ತೃಣವನ್ನು ತೆಗೆದುಕೊಂಡು ಅದನ್ನು ಅಭಿಮಂತ್ರಿಸಿ ಅದರಲ್ಲಿ ಮಹಾಸ್ತ್ರವನ್ನಾರೋಪಿಸಿ ಪ್ರಯೋಗಿಸಲು ಕೇಶವಪ್ರಚೋದಿತನಾದ ಅರ್ಜುನನು ಆ ಮಹನೀಯಾಸ್ತ್ರವನ್ನು ದ್ರೋಣನಿಂದ ತಿಳಿದಿದ್ದವನಾದುದರಿಂದ ಅದನ್ನು ಅಶ್ವತ್ಥಾಮನ ಮೇಲೆ ಪ್ರಯೋಗಿಸಿದನು. ಆ ಸಮಯದಲ್ಲಿ ವ್ಯಾಸನಾರದರು ಆ ಅಸ್ತ್ರದ್ವಯದ ಮಧ್ಯೆ ನಿಂತು ಅವುಗಳನ್ನು ತಡೆದು ಅವರವರ ಅಸ್ತ್ರಗಳನ್ನು ಅವರವರು ಹಿಂದಕ್ಕೆ ತೆಗೆದುಕೊಳ್ಳಲಿ ಎಂದು ಹೇಳಿದರು. ವಾಸವಿಯು ಗುರುಜನವಿನಮ್ರನಾದುದರಿಂದ ಭಕ್ತಿಯೊಡನೆ ಕೂಡಿ ಆ ಅಸ್ತ್ರವನ್ನು ಉಪಸಂಹರಿಸಿದನು. ಹೀಗೆ ಈ ಉಪಸಂಹಾರವು ಚಿತ್ತಶುದ್ಧಿಯುಳ್ಳವರಿಗೇ ಹೊರತು ಇತರರಿಗೆ ಸಾಧ್ಯವಲ್ಲ. ಅಶ್ವತ್ಥಾಮನ ಚಿತ್ತವು ಅಂತಹುದಲ್ಲವಾದುದರಿಂದ ಸ್ವಕೀಯಾಸ್ತ್ರವನ್ನು ಸಂಹರಿಸಲು ಶಕ್ತನಲ್ಲದೆಹೋದನು. ಆದಾಗ್ಯೂ ಆ ಪರಮಮುನಿಗಳಿಗೆ ತನ್ನ ಭಕ್ತಿಯನ್ನು ನಟಿಸುತ್ತಾ ಆ ಅಸ್ತ್ರವನ್ನು ಪಾಂಡವರ ವನಿತೆಯರ ಗರ್ಭಗಳಲ್ಲಿದ್ದ ಅರ್ಭಕರಮೇಲೆ ಪ್ರಯೋಗಿಸಿ ಸಹಜವಾದ ನಿಜಶಿರೋರತ್ನವನ್ನು ಕೊಟ್ಟನು. ದೇವಕೀನಂದನನು ಗುರುನಂದನನೊಡನೆ ಹೀಗೆಂದನು. ‹‹ ನೀನು ಹೀಗೆ ಪಾಂಡವರ ಸಂತಾನವೆಲ್ಲವನ್ನೂ ನಾಶಮಾಡಿದಾಗ್ಯೂ ಅದರಲ್ಲಿ ಒಂದು ಶಿಶುವನ್ನು ಬದುಕಿಸುವೆನು. ಅವನು ಪರೀಕ್ಷಿತನೆಂಬ ಹೆಸರಿನಿಂದ ಪ್ರಕಾಶಿಸುತ್ತಾ ಪಾಂಡವರ ರಾಜ್ಯವೆಲ್ಲವನ್ನೂ ಆಳತಕ್ಕನು. ನೀನು ಇಂತಹ ಪಾಪಕರ್ಮವನ್ನು ಮಾಡಿದೆಯಾದ ಕಾರಣ ಯಾರಲ್ಲಿಯೂ ಮಾತನಾಡುವುದಕ್ಕಾಗದೇ ಒಂಟಿಯಾಗಿ ಭೂಮಿಯಮೇಲೆ ಮೂರುಸಾವಿರ ಸಂವತ್ಸರಗಳು ಅಲೆದಾಡುವಿ '' ಎಂದು ಶಪಿಸಿ ಹೃಷೀಕೇಶನು ನಾರದನನ್ನೂ ಪಾಂಡುಕುಮಾರರನ್ನೂ ಕರೆದುಕೊಂಡು ದ್ರೌಪದಿಯ ಬಳಿಗೆ ಹೋಗಿ

ಅಶ್ವತ್ಥಾಮನ ಶಿರೋರತ್ನವನ್ನು ಕೊಟ್ಟು ಆತನ ದಿವ್ಯಾಸ್ತ್ರವು ವ್ಯರ್ಥವಾದ ಸಂಗತಿಯನ್ನೂ ತಾನು ಆತನಿಗೆ ಶಾಪಕೊಟ್ಟುದನ್ನೂ ಹೇಳಲು ದ್ರುಪದನಂದನೆಯು ಆತನು ಧನುರಾಚಾರ್ಯನಾದ ದ್ರೋಣನ ತನಯನಾದುದರಿಂದ ಮನ್ನಿಸಿ ತನ್ನ ಶಪಥವನ್ನು ಶಾಂತಿಮಾಡಿಕೊಂಡಳು. ಅಶ್ವತ್ಥಾಮನು ಹೀಗೆ ಹತಶೇಷರನ್ನೆಲ್ಲಾ ಕೊಂದುದು ಪರಮಶಿವನ ವರದಿಂದಲೇ ಎಂದು ಕೃಷ್ಣನು ಎಲ್ಲರಿಗೂ ತಿಳಿಯುವಂತೆ ಹೇಳಿದನು.



## ಸ್ತ್ರೀಪರ್ವ.

ಅತ್ತ ಧೃತರಾಷ್ಟ್ರನು ಸುತಬಂಧುನಾಶಕ್ಕೆ ವ್ಯಥೆಪಡುತ್ತಾ ಅವರುಗಳಿಗೆ ಪರಲೋಕಕ್ರಿಯೆಗಳನ್ನು ಮಾಡುವುದಕ್ಕಾಗಿ ಬರುವುದೆಂದು ಅಂತಃಪುರದ ಕಾಂತಾಜನರನ್ನು ಕರೆಕಳುಹಿಸಲು ಅವರೆಲ್ಲರೂ ಹಸ್ತಿನಾಪಟ್ಟಣದಿಂದ ಹೊರಹೊರಟು ಪೂರ್ವದಲ್ಲಿ ದ್ರೌಪದಿಯು ಅರಣ್ಯವಾಸಕ್ಕೆ ಹೊರಟಾಗ ಹೇಳಿದ ಮಾತುಗಳನ್ನು ನಿಜವನ್ನಾಗಿ ಮಾಡುತ್ತಾ ದುಃಖಿತರಾಗಿ ಹೊರಟರು. ಹೀಗೆ ಹೊರಡುತ್ತಾ ಅವರು ಮಾರ್ಗದಲ್ಲಿ ಕೃಪಾಶ್ವತ್ಥಾಮಕೃತವರ್ಮರು ಪಾಂಡವರ ಸಮೂಹವನ್ನು ಸಂಹರಿಸಿ ಪುನಃ ಹಿಂದಕ್ಕೆ ಬರುತ್ತಿರುವುದನ್ನು ನೋಡಿದರು. ಇವರು ಮೂವರೂ ದುರ್ಯೋಧನನನ್ನು ಬಿಟ್ಟು ಹೊರಟುದೂ ಅವರಲ್ಲಿ ಅಶ್ವತ್ಥಾಮನೊಬ್ಬನೇ ಪಾಂಡವರಮೇಲೆ ಹೊರಟದ್ದೂ ಮೊದಲೇ ತಿಳಿದಿವಲ್ಲವೇ? ಧೃತರಾಷ್ಟ್ರನ ಆಗಮನವನ್ನು ಕೇಳಿ ಯುಧಿಷ್ಠಿರನು ಕೇಶವನೊಡನೆ ಅನುಜಸತೀಸಹಿತನಾಗಿ ಬಂದು ಅಂಧನೃಪತಿಯನ್ನು ಎದುರುಗೊಳ್ಳಲು ಆತನು ಧರ್ಮನಂದನನನ್ನು ಆಲಿಂಗಿಸಿದನು. ಆ ಕೂಡಲೆ ಪವನತನಯನು ಹತ್ತಿರಕ್ಕೆ ಬರುತ್ತಿದ್ದಾಗ ಅಂಧನೃಪತಿಗೆ ಕೋಪವು ಏರಿತು. ತನ್ನ ಬಾಹುಗಳಿಂದ ಭೀಮನನ್ನು ಅಪ್ಪಿಕೊಂಡು ಉಸಿರನ್ನು ಸ್ತಬ್ಧಮಾಡಿ ಕೊಲ್ಲಬೇಕೆಂದು ಯೋಚಿಸಿದನು. ಸರ್ವಜ್ಞನಾದ ನಾರಾಯಣನು ಇದನ್ನು ತಿಳಿದು ಭೀಮನಿಗೆ ಬದಲಾಗಿ ಅವನ ಕಬ್ಬಿಣದ ಆಕಾರವನ್ನು ಆತನ ಮುಂದಕ್ಕೆ ತಳ್ಳಲು, ಆ ಅಂಧನೃಪತಿಯು ಅದನ್ನು ಗಾಢಾಲಿಂಗನೆ ಮಾಡಿಕೊಂಡು ಅದನ್ನು ಪುಡಿಪುಡಿಮಾಡಿ

ದನು. ಇದರಿಂದ ಆ ನೃಪತಿಯ ಎದೆಯಲ್ಲಿ ರಕ್ತವು ಸುರಿಯಿತು. ಮತ್ತು ಅವನು ಪಶ್ಚಾತ್ತಾಪಯುಕ್ತನಾಗಿ ನೆಲಕ್ಕೆ ಬಿದ್ದು ಅಕ್ಕಟ! ಭೀಮಸೇನ! ಎಂದು ಗೋಳಿಟ್ಟನು. ಆತನಿಗೆ ಅದರಿಂದ ಕೋಪವು ಕಡಿಮೆಯಾದುದನ್ನು ತಿಳಿದು ಕೃಷ್ಣನು ತಾನು ಮಾಡಿದ ಉಪಾಯವನ್ನು ಆತನಿಗೆ ತಿಳಿಸಿ ಅಪಾಯವೇನೂ ನಡೆಯಲಿಲ್ಲವೆಂದು ಸಮಾಧಾನಪಡಿಸಿದನು. ಆ ಪಾರ್ಥಿವೇಶ್ವರನು ತಾನು ಮಾಡಿದುದು ತಪ್ಪೆಂದು ಒಪ್ಪಿಕೊಂಡು ಪುತ್ರೇಷಣದಿಂದ ಧರ್ಮಭ್ರಷ್ಟನಾದೆನೆಂದು ಹೇಳಿ ಪಾಂಡವರೆಲ್ಲರನ್ನೂ ಅಪ್ಪಿಕೊಂಡು ನಿಜಸುತರಂತೆ ಅವರನ್ನು ಮನ್ನಿಸಿ ಪ್ರೀತಿಸಿದನು. ಗಾಂಧಾರಿಯು ನಿಜತಪೋಮಹಿಮೆಯಿಂದ ಉಂಟಾದ ಕೋಪಾಗ್ನಿಯೊಡನೆ ಹೋರಾಡಿ ಅವರನ್ನು ಮನ್ನಿಸಿದಳು. ಹೀಗಾದಾಗ್ಯೂ ಆಕೆಯು ಕಠಿನವ್ರತವನ್ನಾಚರಿಸಿದವಳಾದುದರಿಂದ ತನ್ನ ಕಣ್ಣುಗಳಿಗೆ ಕಟ್ಟಿದ್ದ ಕಟ್ಟಿನೊಂದಿಗೇನೇ ಧರ್ಮಜನ ಪಾದಗಳಮೇಲೆ ದೃಷ್ಟಿಯಿಡಲು ಅದು ಸೋಕಿದ ಸ್ಥಳದಲ್ಲಿ ಭೌತಿಕವಾದ ಬೆಂಕಿಯು ಸೋಕಿದರೆ ಹೇಗೋ ಹಾಗೆ ಸುಟ್ಟಿತು.

ಗಾಂಧಾರಿಗೆ ಉತ್ತಮವಾದ ದಿವ್ಯದೃಷ್ಟಿಯುಂಟಾಗಿದ್ದುದರಿಂದ ಸಮೀಪದಲ್ಲಿರುವುದನ್ನು ನೋಡುವಂತೆಯೇ ಅಲ್ಲಿಂದಲೇ ಕೌರವಸೈನ್ಯವು ನಾಶಹೊಂದಿ ಬಿದ್ದಿರುವ ಶವಗಳನ್ನು ನೋಡಿ ಅಲ್ಲಿನ ಘೋರವೃತ್ತಾಂತವನ್ನು ಒಂದೊಂದನ್ನಾಗಿ ಕೇಶವನೊಡನೆ ಅತಿ ಕಾರುಣ್ಯದಿಂದ ಹೇಳುತ್ತಾ ತನ್ನ ಆತ್ಮಜರ ಶವಗಳನ್ನು ಸುಡುತ್ತಿರುವ ಸ್ಥಳಕ್ಕೆ ಹೋಗಿ ಶೋಕವು ತನ್ನೆದೆಯನ್ನು ಸೀಳುತಿರಲು ಶ್ರೀ ಕೃಷ್ಣನನ್ನು ಕುರಿತು ‹‹ದುರ್ಲಭವಾದ ಪಾತಿವ್ರತ್ಯಮಹಿಮೆಯು ನನಗುಂಟಾಗಿರುವುದಾದುದರಿಂದ ಅದರ ಪ್ರಭಾವದಿಂದ ನಿನ್ನನ್ನು ಶಪಿಸುವೆನು. ಕೇಳು. ಪಾಂಡವಕೌರವರು ಒಬ್ಬರನ್ನೊಬ್ಬರು ನಾಶಮಾಡುತಿರಲು ನೀನು ಸುಮ್ಮನೆ ನೋಡುತ್ತಿದ್ದೆಯಾದುದರಿಂದ ನಿನ್ನ ಬಂಧು ನಾಶಕ್ಕೆ ನೀನೇ ನಿಮಿತ್ತನಾಗುವಿ. ಈ ಕಾರಣದಿಂದ ನಿನ್ನ ಸುತ ಮಿತ್ರ ಬಂಧು ವರ್ಗವೆಲ್ಲವೂ ಮೃತಿಪೊಂದಿದನಂತರದಲ್ಲಿ ಈ ದಿನಕ್ಕೆ ಮೂವತ್ತಾರನೆಯ ಸಂವತ್ಸರಕ್ಕೆ ನೀನು ಕಾನನದಲ್ಲಿ ನೀಚವಾದ ಸಾವಿನಿಂದ ಮರಣಹೊಂದುವಿ'' ಎಂದು ಶಪಿಸಿದಳು. ಜನನಮರಣಗಳಿಗಧೀಶ್ವರನಾದ ಆ ದೇವನು ಮುಂದೆ ಆಗತಕ್ಕ ವೃತ್ತಾಂತಗಳೆಲ್ಲವನ್ನೂ ತಿಳಿದವನಾದುದರಿಂದ ಮಂದಹಾಸಯುಕ್ತನಾಗಿ ಗಾಂಧಾರಿಯೊಡನೆ ‹‹ವೃಷ್ಣಿವಂಶ್ಯರನ್ನು ಕೊಲ್ಲಲು ಈ ಜಗತ್ತಿನಲ್ಲಿ ನನ್ನವಿನಾ ಮತ್ತೊಬ್ಬರು ಸಮರ್ಥರಾಗಲಾರರು. ಅದನ್ನು ನಾನು ಚೆನ್ನಾಗಿ ತಿಳಿದಿರುವೆನಾದುದರಿಂದ ಅದನ್ನು ನಡೆಸಲು ಪ್ರಯತ್ನ

ಮಾಡುತ್ತಿದ್ದೇನೆ. ಪತಿವ್ರತಾಶಿರೋಮಣಿಯಾದ ವ್ರತನಿಷ್ಠಳೇ! ಹೀಗೆ ನೀನುಕೊಟ್ಟ ಶಾಪವು ನನ್ನ ಕೆಲಸಕ್ಕೆ ಸಹಕಾರಿಯೇ ಆಯಿತು'' ಎಂದು ಕೃಷ್ಣನು ಉತ್ತರಹೇಳಿದನು. ಪರಿಶೀಲಿಸಿದಲ್ಲಿ ಅವಿವೇಕಜನ್ಯಗಳಾದ ನಮ್ಮ ಕಾರ್ಯಗಳು ಈಶ್ವರಸಂಕಲ್ಪವನ್ನೇ ನೆರವೇರಿಸುತ್ತಿರುವುವೆಂದು ತಿಳಿಯಬಹುದು.

ರಣನಿಹತರಾದ ವೀರವರರಿಗೆ ತಿಲೋದಕಗಳನ್ನಾಚರಿಸಲು ಸರ್ವರೂ ಶೋಕಭರಿತಮಾನಸರಾಗಿ ಗಂಗಾತೀರವನ್ನು ಸೇರಿದರು. ಆ ಸ್ಥಳದಲ್ಲಿ ಕುಂತಿಯು ಹೆಚ್ಚಾದ ವ್ಯಥೆಯಿಂದ ಕೂಡಿದ ಮನಸ್ಸಿನಿಂದ ತನ್ನ ಕುಮಾರರನ್ನುನೋಡಿ ಕರ್ಣನು ಸೂರ್ಯನ ವರದಿಂದ ತನ್ನಲ್ಲಿ ಹುಟ್ಟಿದಕಾರಣದಿಂದ ಆತನು ಅವರಿಗೆ ಅಣ್ಣನೆಂಬುದನ್ನು ತಿಳಿಯಿಸಿದಳು. ಪಾಂಡವರು ಅದನ್ನು ಕೇಳಿ, ಹೋ ಎಂದು ರೋದಿಸತೊಡಗಿದರು. ಯುಧಿಷ್ಠಿರನು ಅಕ್ಕಟಾ! ಇದನ್ನು ನಾವು ಮೊದಲು ತಿಳಿದಿದ್ದೆವಾದರೆ ಭಾರತವೀರರ ಸಾವನ್ನು ತಪ್ಪಿಸಬಹುದಾಗಿತ್ತಲ್ಲವೇ! ಎಂದು ಅಳುತ್ತಾ ಹಲಬುತ್ತಿದ್ದನು.

(ಶಾಂತಿಪರ್ವ) ಧರ್ಮಜನೂ ಆತನ ಸಹೋದರನೂ ಉಳಿದ ಎಲ್ಲರೂ ಜಾಹ್ನವೀತಟದಲ್ಲಿ ಸ್ವಲ್ಪಹೊತ್ತು ನಿಂತಿರಲು ಅಲ್ಲಿಗೆ ನಾರದಾದಿ ಮಹಾಮುನಿಗಳು ಬಂದರು. ಯುಧಿಷ್ಠಿರನು ಅವರುಗಳನ್ನು ನೋಡಿ, ಓ ಮಹರ್ಷಿಗಳೇ, ನನ್ನ ಅಗ್ರಜನಾದ ಕರ್ಣನನ್ನು ಅಜ್ಞಾನದಿಂದ ಕೊಂದು ಪಾಪಕರ್ಮಮಾಡಿದವನಾದೆನಲ್ಲವೇ ಎಂದು ಶೋಕಾತಿರೇಕದಿಂದ ಅತ್ತು, ಕರ್ಣನ ರಥದಲ್ಲಿನ ಚಕ್ರವು ಭೂಮಿಯಲ್ಲಿ ಹೂತುಹೋದುದೇತಕ್ಕೆ? ಅವನಿಗೆ ಬಂದಿದ್ದ ಶಾಪವೆಂತಹುದು? ಎಂದು ಕೇಳಲು ನಾರದನು ಅವರುಗಳಿಗೆ ಕರ್ಣನ ಚರಿತ್ರೆಯನ್ನು ಹೇಳಿ ಹೀಗೆಂದನು—ಕರ್ಣನು ಬ್ರಾಹ್ಮಣ ಅಥವಾ ಕ್ಷತ್ರಿಯ ಸಂಸ್ಕಾರಪೂತನಲ್ಲದುದರಿಂದ ದ್ರೋಣನು ಆತನಿಗೆ ಬ್ರಹ್ಮಾಸ್ತ್ರವನ್ನು ಉಪದೇಶಿಸದಿರಲು ರಾಧೇಯನು ಪರಶುರಾಮನ ಬಳಿಗೆ ಹೋಗಿ ತಾನು ಭೃಗುವಂಶಸಂಜಾತನಾದ ಬ್ರಾಹ್ಮಣನೆಂದು ಸುಳ್ಳುಹೇಳಿ ಆತನ ಶಿಷ್ಯನಾದನು. ಆತನು ಜಮದಗ್ನಿ ಸುತನಲ್ಲಿ ವಿದ್ಯೆಕಲಿಯುತ್ತಾ ಒಂದುದಿನ ಪ್ರಮಾದದಿಂದ ಒಬ್ಬ ಬ್ರಾಹ್ಮಣನ ಗೋವನ್ನು ಕೊಲ್ಲಲು ಆ ವಿಪ್ರನು ಯುದ್ಧದಲ್ಲಿ ಕರ್ಣನ ರಥದ ಚಕ್ರವು ಭೂಮಿಯಲ್ಲಿ ಹೂತುಕೊಳ್ಳಲೆಂತಲೂ ಆಗ ಅವನ ಶತ್ರುವು ಅವನನ್ನು ಸಂಹಾರಮಾಡಲೆಂದೂ ಶಾಪಕೊಟ್ಟನು. ಅದೂ ಅಲ್ಲದೆ ಕರ್ಣನು ಶರೀರಶ್ರಮಕ್ಕೆ ಹೆಚ್ಚಾಗಿ ಸಹಿಸುತ್ತಿದ್ದುದನ್ನು ನೋಡಿ ಈತನು ಬ್ರಾಹ್ಮಣನಲ್ಲವೆಂದು ತಿಳಿದು ಭಾರ್ಗವರಾಮನು ಅನೃತಭಾಷಣ

ಕ್ಕಾಗಿ ಕರ್ಣನ ಮೇಲೆ ಕೋಪಿಸಿಕೊಂಡು ಆಪತ್ಕಾಲದಲ್ಲಿ ಬ್ರಹ್ಮಾಸ್ತ್ರಪ್ರಯೋಗವು ಅವನಿಗೆ ಮರೆತುಹೋಗಲೆಂದು ಶಾಪಕೊಟ್ಟನು; ಎಂದು ಈ ರೀತಿಯಲ್ಲಿ ನಾರದನು ಎಷ್ಟು ಸಮಾಧಾನಪಡಿಸಿದಾಗ್ಯೂ ಧರ್ಮತನಯನು ಸಮಾಧಾನ ಹೊಂದದಿರುವನಾಗಿ ಕರ್ಣನವಧೆಯಿಂದ ಹಂಬಲಿಸುತ್ತಾ ಆ ಮುನಿವರನೊಡನೆ ನಾನು ಇನ್ನು ರಾಜ್ಯವನ್ನು ಕಿರೀಟಿಗೆ ಪಟ್ಟಕಟ್ಟಿ ತುರೀಯಾಶ್ರಮವನ್ನು ಹೊಂದುವೆನೆಂದು ಹೇಳಿದನು. ಅನಂತರ ಆತನೊಡನೆ ಆತನ ತಮ್ಮಂದಿರೂ ದ್ರೌಪದಿಯೂ ಅನೇಕರಾದ ಮಹರ್ಷಿಗಳೂ ಹಾಗೆ ಮಾಡತಕ್ಕುದು ಯುಕ್ತವಲ್ಲವೆಂದು ಅನೇಕ ವಿಧಗಳಿಂದ ಹೇಳಲು ಕಟ್ಟಕಡೆಗೆ ಧರ್ಮಜನು ಅವರ ಪ್ರಾರ್ಥನೆಗಳನ್ನು ಅಂಗೀಕರಿಸಿ ರಾಜ್ಯಾಭಿಷೇಕಕ್ಕೊಡಂಬಟ್ಟನು. ಅನಂತರ ಆತನು ಧೃತರಾಷ್ಟ್ರಪುರಸ್ಕೃತನಾಗಿ ಕರಿನಗರವನ್ನು ಸೇರಲು ಪಟ್ಟಣಿಗರೆಲ್ಲರೂ ಜಯಜಯನಿನದಗಳೊಡನೆ ಕೂಡಿ ಧರ್ಮಜನನ್ನಭಿನಂದಿಸಿದರು [illegible] ನಿಗೆ ಮಿತ್ರನಾದ ಚಾರ್ವಾಕನೆಂಬ ಹೆಸರುಳ್ಳ ಒಬ್ಬ ರಕ್ಕಸನು ಬ್ರಾಹ್ಮಣ ವೇಷವನ್ನು ಧರಿಸಿ ಅಲ್ಲಿನ ಬ್ರಾಹ್ಮಣಸಮೂಹದ ಪರವಾಗಿ ಮಾತನಾಡುವನಂತೆ ಛೀ ! ತನ್ನ ಬಂಧುಗಳನ್ನು ಕೊಂದ ಧರ್ಮಜನು ಪಾಪಾತ್ಮನೆಂದು ನಿಂದಿಸಿದನು. ಆ ಮಾತುಗಳನ್ನು ಕೇಳಿ ಪಾಂಡವಾಗ್ರಜನು ಬ್ರಾಹ್ಮಣರು ತನ್ನ ಮೇಲೆ ಕೋಪಗೊಂಡಿರುವರೆಂದು ಯೋಚಿಸಿ ಸವಿನಯನಾಗಿ ಓ ಮಹಾತ್ಮರೇ ! ನಾನು ಪ್ರಾಣತ್ಯಾಗಮಾಡುವೆನು. ನೀವುಗಳು ಕೋಪಿಸಬೇಡಿರೆಂದು ಬಿನ್ನವಿಸಿದನು. ಆ ಮಾತುಗಳನ್ನು ಕೇಳಿ ಬ್ರಾಹ್ಮಣರು ಆ ಮಹೀಪತಿಯನ್ನಾಶೀರ್ವದಿಸಿ ಚಾರ್ವಾಕನನ್ನು ನಿಂದಿಸುತ್ತಾ ಹುಂ ಎಂದು ಗದರಿಸಲು ಅವನು ಶವವಾಗಿ ನೆಲದಲ್ಲಿ ಬಿದ್ದನು. ಅನಂತರ ಸರ್ವರೂ ಜಯಜಯ ಧ್ವನಿಗಳಿಂದ ಕೂಡಿ ಸಂತೋಷದಿಂದ ಕೂಡಿರಲು ಧರ್ಮನಂದನನು ಪಟ್ಟಾಭಿಷಿಕ್ತನಾದನು. ಆ ವಸುಮತೀರಮಣನು ತಾನು ಧೃತರಾಷ್ಟ್ರನ ಸೇವಕನೆಂದು ಹೇಳುತ್ತಾ ರಾಜ್ಯವನ್ನು ಧರ್ಮದಿಂದ ಪರಿಪಾಲಿಸುವುದಕ್ಕಾಗಿ ತಕ್ಕ ಅಧಿಕಾರಿಗಳನ್ನು ನಿಯಮಿಸಿದನು. ರಣನಿಹತರಾದ ಎಲ್ಲರಿಗೂ ಕ್ರಮವಾಗಿ ಉತ್ತರಕ್ರಿಯೆಗಳನ್ನು ನಡೆಯಿಸಲು ಏರ್ಪಡಿಸಿದನು. ಅನ್ನಪಾನಾದಿಗಳನ್ನು ಜನಗಳಿಗೆ ಕೊಡುವುದಕ್ಕಾಗಿ ಸತ್ರಗಳನ್ನು ಕಟ್ಟಿಸಿದನು. ಮೃತರಾದವರ ಹೆಸರುಗಳಿಂದ ತಟಾಕಗಳನ್ನು ನಿರ್ಮಾಣಮಾಡಿಸಿದನು. ಮೃತರಾದವರ ತಾಯಿಯರಿಗೂ ಹೆಂಡತಿಯರಿಗೂ ಸಮುಚಿತವಾದ ಜೀವನವನ್ನು ಕಲ್ಪಿಸಿದನು. ಬಡಬಗ್ಗರಿಗೆ ದ್ರವ್ಯಗಳನ್ನು ಕೊಟ್ಟನು. ಶ್ರೀಕೃಷ್ಣನನ್ನು ಉತ್ತಮವಾದ ಸ್ತೋತ್ರದಿಂದ ಸ್ತುತಿಸಿ ತನ್ನ ತಮ್ಮಂದಿರನ್ನು ಸಮೀಪದಲ್ಲಿರುವಂತೆ ನಿಯಮಿಸಿದನು. ಜಗತ್ತಿಗೆ ಕ್ಷೇಮವುಂಟಾಯಿತು.

## ೮ ನೆಯ ಅಧ್ಯಾಯ.

---

### ಆ ಪ್ತ ವಾ ಕ್ಯ .

### ಶಾಂತಿಪರ್ವ.

ವೀರಾಗ್ರೇಸರನಾದ ಭೀಷ್ಮನು ರಣಾಂಗಣದಲ್ಲಿ ಶರತಲ್ಪಗತನಾಗಿ ಮಲಗಿದ್ದನೆಂದು, ನಾವು ಮೊದಲೇ ತಿಳಿಸಿದ್ದೆವಲ್ಲವೇ ? ಅನಂತರ ಕುರುಕ್ಷೇತ್ರದ ಯುದ್ಧವೆಲ್ಲಾ ಮುಗಿದು ಯುಧಿಷ್ಠಿರನು ರಾಜ್ಯಾಭಿಷಿಕ್ತನಾಗುವವರೆಗೂ ಗಾಂಗೇಯನು ಅಲ್ಲಿಯೇ ಇದ್ದನು. ಇನ್ನು ಆತನ ಅಂತ್ಯವನ್ನು ಕುರಿತು ಹೇಳಬೇಕಾಗಿರುವುದು. ಮಹಾಭಾರತದಲ್ಲಿನ ಎಲ್ಲಾ ಪರ್ವಗಳಲ್ಲಿಯೂ ದೊಡ್ಡದಾದ ಶಾಂತಿಪರ್ವದಲ್ಲಿಯೂ ಅನುಶಾಸನಿಕಪರ್ವದಲ್ಲಿಯೂ ಆ ಮಹಾತ್ಮನ ಅಂತಿಮವೃತ್ತಾಂತಗಳೂ ಆತನು ಹೇಳಿರುವ ಪರಮಾದ್ಭುತಕರವಾದ ಧರ್ಮನಿರೂಪಣವೂ ವಿವರಿಸಲ್ಪಟ್ಟಿರುವುದು.

ಧರ್ಮಜನು ಶ್ರೀಕೃಷ್ಣನ ದರ್ಶನಮಾಡುವುದಕ್ಕಾಗಿ ಬರಲು ಆ ದೇವನು ಪೀತಾಂಬರಧಾರಿಯಾಗಿ ತನ್ನ ಭೂಷಣಗಳಿಂದ ಪ್ರಕಾಶಿಸುತ್ತಾ ಮೂರುಲೋಕಗಳಲ್ಲಿಯೂ ಎಣೆಯಿಲ್ಲದ ಅಂದದಿಂದ ಕೂಡಿದವನಾಗಿ ಚಿತ್ತವನ್ನು ಧ್ಯಾನದಲ್ಲಿ ನಿರೂಢವನ್ನಾಗಿ ಮಾಡಿದ್ದುದರಿಂದ, ಧರ್ಮಜನು ಮಾಡಿದ ಕುಶಲಪ್ರಶ್ನೆಗಳಿಗೆ ಉತ್ತರ ಹೇಳದಿದ್ದನು. ಧರ್ಮತನಯನು ಆಶ್ಚರ್ಯಹೊಂದಿ ಆ ಮಹಾತ್ಮನನ್ನು ಪೂಜಿಸಿ ದೇವದೇವನಾದ ನೀನು ಏಕೆ ಯೋಗಾನುಧ್ಯಾನಪರನಾಗಿರುವಿ ? ಎಂದು ಕೇಳಲು ಕೃಷ್ಣನು ಕಿರುನಗೆಯಿಂದ ಕೂಡಿದ ಮುಖದಿಂದ ಆತನೊಡನೆ ಭೀಷ್ಮನು ಈಗ ನನ್ನನ್ನು ಧ್ಯಾನಮಾಡುತ್ತಿರುವನಾದುದರಿಂದ ನನ್ನ ಮನಸ್ಸು ಆತನಲ್ಲಿ ಲೀನವಾಗಿರುವುದೆಂದು ಹೇಳಿದನು.

ಈ ಮನೋಜ್ಞವಾದ ಮಾತಿನಿಂದ ಒಂದು ಉತ್ತಮವಾದ ಸಂಗತಿಯು ನಮಗೆ ತಿಳಿಯುವುದು. ಒಬ್ಬ ಭಕ್ತನು ಪರಮೇಶ್ವರನಲ್ಲಿ ಚಿತ್ತವನ್ನು ನಿಲ್ಲಿಸಿದನಾದರೆ ಅವನ ಧ್ಯಾನವು ಪರಮೇಶ್ವರನನ್ನು ಆಕರ್ಷಿಸುವುದರಿಂದ ಈಶ್ವರನೂ ಆ ಭಕ್ತನನ್ನು ತನ್ನ ಮನಸ್ಸಿನಲ್ಲಿ ಸ್ಮರಿಸುತಿರುವನು. ಪದ್ಮನಾಭನು ಪುನಃ ಧರ್ಮಜನೊಡನೆ ಹೀಗೆ ಹೇಳಿದನು :—ಕುರುವಂಶಜರಲ್ಲಿ ಉತ್ತಮನಾದ ಭೀಷ್ಮನು ಶರೀರತ್ಯಾಗಮಾಡಿದನಾದರೆ ಶ್ರೇಷ್ಠವಾದ ಜ್ಞಾನವೂ ಆತನೊಡನೆಯೇ ಹೊರಟುಹೋಗುವುದು. ಆದುದರಿಂದ ಆ ಮಹನೀಯನು ಪ್ರಾಣಗಳನ್ನು ಬಿಡುವುದಕ್ಕೆ ಮುಂಚೆಯೇ

ನಿನಗೆ ಬೇಕಾದ ಧರ್ಮಗಳನ್ನು ಆತನ ಮುಖದಿಂದ ತಿಳಿಯತಕ್ಕವನಾಗು---ಎಂದು ಬೋಧಿಸಲು ಕೌಂತೇಯಾಗ್ರಜನು ಹಾಗೆಯೇ ಮಾಡುವೆನೆಂದು ವಿಜ್ಞಾಪಿಸಿ ಮಹಾತ್ಮ ! ನೀನು ಕ್ಷತ್ರಿಯಶ್ರೇಷ್ಠನ ಸಮೀಪವನ್ನು ಸೇರಿ ಆತನಿಗೆ ಪ್ರಿಯವನ್ನುಂಟುಮಾಡೆಂದು ಪ್ರಾರ್ಥಿಸಲು ಕೇಶವನು ತನ್ನ ರಥವನ್ನು ಸಿದ್ಧಪಡಿಸುವಂತೆ ಹೇಳಿದನು. ಅನಂತರದಲ್ಲಿ ಇಬ್ಬರೂ ತಮ್ಮ ಪರಿವಾರಗಳೊಡನೆ ಕೂಡಿದವರಾಗಿ ಕುರುಕ್ಷೇತ್ರಕ್ಕೆ ತೆರಳಿದರು. ಆ ಸ್ಥಳದಲ್ಲಿ ಭೀಷ್ಮನು ಮನೋವಾಕ್ಕಾಯಗಳಿಂದಲೂ ಕೃಷ್ಣನನ್ನೇ ಧ್ಯಾನಿಸುತ್ತಾ ದಿವ್ಯವಾದ ಒಂದು ಸ್ತೋತ್ರರಾಜದಿಂದ ಆತನನ್ನು ಹೊಗಳುತ್ತಾ ಸಮಸ್ತವನ್ನೂ ಆತನಲ್ಲಿಯೂ, ಎಲ್ಲದರಲ್ಲಿಯೂ ಆತನನ್ನೂ, ನೋಡುತ್ತಾ ಅನೇಕ ರೂಪಗಳಿಂದ ಆ ದೇವನನ್ನು ಧ್ಯಾನಿಸುತ್ತಿರಲು ಆತನ ಭಕ್ತಿಗೆ ಮೆಚ್ಚಿ ಶ್ರೀಕೃಷ್ಣನು ಆತನನ್ನು ನೋಡಲು ಬಂದನು.

ಹೀಗೆ ಅಲ್ಲಿಗೆ ಬಂದು ಶರತಲ್ಪದಲ್ಲಿ ಮಲಗಿ ನಿಜಕಿರಣಗಳಿಂದ ಪರಿವೃತನಾದ ಅಸ್ತಮಯಸಮಯದ ಸೂರ್ಯನ ತೆರದಲ್ಲಿ ಪ್ರಕಾಶಿಸುತ್ತಿದ್ದ ಆ ಮಹಾಭಾಗನನ್ನು ನೋಡಿ ಪ್ರೀತಿಯುಕ್ಕುತಿರುವ ವಚನಗಳಿಂದ ಆತನನ್ನು ಗೌರವಿಸಿ ಭೀಷ್ಮನನ್ನು ನೋಡಿ ಯುಧಿಷ್ಠಿರನು ತನ್ನ ಬಂಧುಗಳನ್ನು ಕೊಂದಕಾರಣದಿಂದ ಹೆಚ್ಚಾಗಿ ಕುಂದುತಿರುವನು. ನೀನು ಆತನಿಗೆ ಧರ್ಮಗಳನ್ನುಪದೇಶಿಸಿ ಆತನ ಮನಸ್ಸಿನ ಕಳಂಕವನ್ನು ಹೋಗಲಾಡಿಸು ಎಂದು ಹೇಳಲು ಶಾಂತನವನು ಪರಮಭಕ್ತಿಯಿಂದ ಕೂಡಿದವನಾಗಿ ದೇವಾ ! ನನ್ನಮೇಲೆ ಕರುಣೆಯನ್ನು ತೋರಿಸು ಎಂದು ಬೇಡಲು ವಾಸುದೇವನಿಂತೆಂದನು. ಇನ್ನೂ ನೀನು ಐವತ್ತಾರುದಿನಗಳು ಪ್ರಾಣಗಳನ್ನು ಧರಿಸಿರತಕ್ಕವನು. ವೀರೋತ್ತಮ ! ನೀನು ಶರೀರವನ್ನು ಬಿಟ್ಟಲ್ಲಿ ಸಮಸ್ತ ವಿದ್ಯೆಯೂ ನಿನ್ನೊಡನೆ ಪರಿಸಮಾಪ್ತಿಹೊಂದುವುದು. ಅದಕ್ಕಾಗಿ ಇವರೆಲ್ಲರೂ ಧರ್ಮಗಳನ್ನೂ, ನೀತಿಗಳನ್ನೂ, ಕೇಳುವುದಕ್ಕಾಗಿ ನಿನ್ನ ಬಳಿಗೆ ಬಂದಿರುವರು. ನೀತಿ, ಧರ್ಮ, ಅರ್ಥ, ಯೋಗ, ಇವುಗಳಿಂದ ಪೂರಿತವಾದ ಧರ್ಮತತ್ವಗಳನ್ನು ಇವರಿಗೆ ಬೋಧಿಸುವವನಾಗು, ಎನಲು ದೇವವ್ರತನಿಂತೆಂದನು. ವಾಗೀಶನಾದ ನಿನ್ನ ಸನ್ನಿಧಿಯಲ್ಲಿ ನಾನು ಹೇಳುವಷ್ಟು ಸಮರ್ಥನೇ ? ನನ್ನ ಅವಯವಗಳು ಶರಜಾಲಗಳಿಂದ ಪೆಟ್ಟುತಿಂದು ನೋಯುತ್ತಿರುವುವು. ಚಿತ್ತವು ಹೆಚ್ಚಾಗಿ ಮಾಲಿನ್ಯವನ್ನು ಹೊಂದಿರುವುದು. ಇಂದ್ರಿಯಪಾಟವವು ಶಕ್ತಿಗುಂದಿರುವುದು. ಜೀವಮಾತ್ರಾವಶಿಷ್ಟನಾಗಿರುವೆನು. ಆದುದರಿಂದ ಸಕಲ ವೇದಗಳಿಗೂ ವೇದಸ್ವರೂಪನಾದ ನೀನೇ ಧರ್ಮನಂದನನಿಗೆ ಹಿತವನ್ನುಪದೇಶಿಸತಕ್ಕವನಾಗು. ಜಗತ್ಪ್ರ

ಭುವಾದ ನಿನ್ನಂತಹ ಗುರುವಿನ ಸನ್ನಿಧಿಯಲ್ಲಿ ಶಿಷ್ಯನಾದ ನಾನು ಹೇಳುವುದು ಯೋಗ್ಯವಾಗಿರುವುದೇ ? ಎನ್ನಲು ದೇವಕೀನಂದನನು ಜಾಹ್ನವೀನಂದನನ ಶರೀರದ ಬಾಧೆಯು ನಿವೃತ್ತಿಯಾಗುವಂತೆ ಅನುಗ್ರಹಿಸಿ ಆತನೊಡನಿಂತೆಂದನು. ಅನಘಾ ! ನಿನಗೆ ಗ್ಲಾನಿಯೂ, ಮೂರ್ಛೆಯೂ, ಉರಿಯೂ, ನೋವೂ, ಹಸಿವೂ, ಬಾಯಾರಿಕೆಯೂ, ಉಂಟಾಗದಿರಲಿ. ನಿನಗೆ ಜ್ಞಾನವೂ ಪ್ರತಿಭೆಯೂ ಸಮಗ್ರವಾಗಿ ಉಂಟಾಗಲಿ. ನಿನ್ನ ಬುದ್ಧಿಯೂ ಮಾಲಿನ್ಯಹೊಂದದಿರಲಿ ಎಂದು ಅನುಗ್ರಹಿಸಿದನು. ಅಷ್ಟರಲ್ಲಿ ಕಮಲಮಿತ್ರನು ಅಪರಾಂಬುಧಿಯನ್ನು ಸೇರುತಿರಲು ಕೃಷ್ಣನು ಆತನನ್ನು ಬಿಟ್ಟು ಹೊರಟನು. ಅಪ್ಸರಸ್ತ್ರೀಯರು ಮನೋಹರವಾದ ಗಾನವನ್ನು ಹಾಡಿದರು. ದೇವತೆಗಳು ಪುಷ್ಪವೃಷ್ಟಿಯನ್ನು ಕರೆದರು. ಸುರಭಿಯುಕ್ತವಾದ ಮಲಯಮಾರುತವು ಬೀಸಿತು.

ಮರುದಿನ ಪ್ರಾತಃಕಾಲ ಪಾಂಡವರೈವರೂ ವಾಸುದೇವನೊಡನೆ ಭೀಷ್ಮನ ಸಮೀಪವನ್ನು ಸೇರಿದರು. ಹತಶೇಷರಾದ ರಾಜರುಗಳೂ, ನಾರದಪ್ರಮುಖರಾದ ಅನೇಕಮಂದಿ ಮಹರ್ಷಿಗಳೂ, ಅಲ್ಲಿಗೆ ಬಂದು ಸೇರಿದರು. ಗೋವಿಂದನು ಭೀಷ್ಮನನ್ನು ನೋಡಿ ಮೃದುವಚನಗಳಿಂದ ಆತನ ಕುಶಲವಾರ್ತೆಯನ್ನು ಕೇಳಲು, ಆತನು ಭಗವಂತನನ್ನು ನಮಸ್ಕರಿಸಿ ಹೀಗೆಂದನು. ಸ್ವಾಮಿಯೇ ! ಭವದೀಯಕೃಪಾವಿಶೇಷದಿಂದ ನನ್ನ ಬಾಧೆಯೆಲ್ಲವೂ ತೊಲಗಿತು. ನಿನ್ನ ಅಚಲವಾದ ಅನುಗ್ರಹದಿಂದ ನನಗೆ ಸಮಸ್ತಜ್ಞಾನವೂ ಉಂಟಾಯಿತು. ಆದರೂ ಲೋಕಗುರುವಾದ ನೀನು ಉಪದೇಶ ಮಾಡಲು ಏಕೆ ಇಷ್ಟ ಹೊಂದದಿರುವಿ ; ಎಂದು ಕೇಳಲು ದಯೆಯುಕ್ಕುತಿರುವ ಮನಸ್ಸುಳ್ಳ ಶ್ರೀಕೃಷ್ಣನಿಂತುಹೇಳಿದನು. ಸಮಸ್ತ ಶುಭಗಳಿಗೂ, ಕೀರ್ತಿಗೂ ಹೇತುವೇ ನಾನು, ನನಗೆ ಮತ್ತೆ ಯಾವದರಿಂದಲೂ ಹೆಚ್ಚಾದ ಕೀರ್ತಿಯೊದಗದು. ನನ್ನ ಭಕ್ತನಾದ ನಿನ್ನ ಕೀರ್ತಿಯು ಸಕಲ ಲೋಕಗಳಲ್ಲಿಯೂ ಬೆಳಗಬೇಕೆಂದೂ ನಿನ್ನ ಯಶಃಕಾಯದೊಡನೆ ನೀನು ಭೂಮಿಯಲ್ಲಿ ಬಹುಕಾಲ ಜೀವಿತನಾಗಿರಬೇಕೆಂದೂ ನನ್ನ ಮನಸ್ಸು ಯೋಚಿಸುತಿರುವುದು. ನೀನು ಯಾವಾಗಲೂ ಧರ್ಮವನ್ನು ತಪ್ಪದಿದ್ದವನಾದುದರಿಂದ ನೀನು ಬೋಧಿಸಲು ಅರ್ಹನಾಗಿರುವಿ. ಆಗುದರಿಂದ ತಂದೆಯು ಮಕ್ಕಳಿಗೆ ಹೇಗೋ ಹಾಗೆ ನೀನು ಇವರುಗಳಿಗೆ ಧರ್ಮವನ್ನುಪದೇಶಿಸು ಎಂದು ಅಪ್ಪಣೆಮಾಡಲು, ಭೀಷ್ಮನು ಇಂತೆಂದನು.

ದೇವಾ ! ಸಮಸ್ತಪ್ರಾಣಿಗಳಿಗೂ ಪರಮಾತ್ಮನಾಗಿರುವ ನಿನ್ನ ಕಾರುಣ್ಯದಿಂದ ನನ್ನ ವಾಕ್ಕೂ ಮನಸ್ಸೂ ನಿಲುಕಡೆ ಹೊಂದಿತಾದುದರಿಂದ ನಾನು ಧರ್ಮಗಳನ್ನು

ಉಪನ್ಯಾಸಮಾಡುವೆನು ಎಂದು ಹೇಳಿ, ಯುಧಿಷ್ಠಿರನ ಕಡೆ ನೋಡಿ ಆತನಲ್ಲಿ ತಿಳಿವಳಿಕೆಯೂ, ದಯೆಯೂ, ಬ್ರಹ್ಮಚರ್ಯೆಯೂ, ಕ್ಷಮೆಯೂ, ಧರ್ಮವೂ, ಮನೋದಾರ್ಢ್ಯವೂ, ತೇಜಸ್ಸೂ ಇರುವುದನ್ನು ತಿಳಿದು ಆತನು ಶಿಷ್ಯತ್ವಕ್ಕೆ ತಕ್ಕವನೆಂದು ಯೋಚಿಸಿ ಬೇಕಾದುದನ್ನು ಕೇಳಬಹುದೆಂದು ಧರ್ಮಜನಿಗೆ ನಿರ್ದೇಶಿಸಿದನು. ಗುರುಶಿಷ್ಯರಿಬ್ಬರೂ ಅರ್ಹರಾಗಿರಬೇಕು. ಹಾಗಿಲ್ಲದಿದ್ದರೆ ಉಪದೇಶವು ವ್ಯರ್ಥವಾಗುವುದು. ಶಿಷ್ಯನು ಸನ್ಮಾರ್ಗವರ್ತಿಯಾಗಿರದಿದ್ದಲ್ಲಿ ಧರ್ಮಸೂಕ್ಷ್ಮಗಳನ್ನು ಅವನಿಗೆ ಹೇಳುವುದು ಹೇಗೆ? ಅಷ್ಟರಲ್ಲಿ ಮುಕುಂದನು ನದೀತನೂಜನೊಡನೆ ಧರ್ಮಜನು ಪೂಜಾರ್ಹರಾದವರನ್ನು ಯುದ್ಧದಲ್ಲಿ ಕೊಂದಕಾರಣದಿಂದ ನಿನ್ನನ್ನು ಕೇಳಲು ಭಯಪಡುತ್ತಿರುವನೆಂದು ಹೇಳಲು , ಭೀಷ್ಮನು ಧರ್ಮವಿಧಿಜ್ಞನಾದುದರಿಂದ ತನಗೆ ಯುದ್ಧದಲ್ಲಿ ಪಾಂಡವರ ಕಡೆಯಿಂದ ಉಂಟಾದ ಕಷ್ಟಗಳನ್ನೆಲ್ಲಾ ಮರೆತು, ಅನ್ಯಾಯವಾದ ಯುದ್ಧದಲ್ಲಿ ಇದಿರಾದ ಪಕ್ಷದಲ್ಲಿ ಗುರುವನ್ನಾದರೂ ಕೊಲ್ಲುವುದೇ ಕ್ಷತ್ರಿಯಧರ್ಮವೆಂದು ಹೇಳಿದನು. ಅನಂತರ ಕೌಂತೇಯಾಗ್ರಜನು ಕಳವಳ ಹೊಂದಿರುವ ಮನಸ್ಸಿನಿಂದ ಸವಿನಯನಾಗಿ ಆತನ ಸಮೀಪವನ್ನು ಸೇರಿ ಆತನ ಚರಣಕಮಲಗಳನ್ನು ತನ್ನ ಕರಪಲ್ಲವಗಳಿಂದ ಒತ್ತಲು ಭೀಷ್ಮನು ಆತನನ್ನು ಆಶೀರ್ವದಿಸಿ ಕೂತುಕೊಳ್ಳುವಂತೆ ಅಪ್ಪಣೆಮಾಡಿ ಕುರುಪುಂಗವಾ ! ನಿನ್ನ ಮನಸ್ಸಿನಲ್ಲಿ ಕಳವಳವನ್ನು ಬಿಟ್ಟು ಸ್ವಲ್ಪವೂ ಸಂಕೋಚವಿಲ್ಲದೆ ಕೇಳೆಂದು ಅಪ್ಪಣೆಮಾಡಿದನು.

ಧರ್ಮಜನು ಮೊದಲು ರಾಜಧರ್ಮಗಳನ್ನು ಉಪದೇಶಿಸೆಂದು ಕೇಳಲು ಭೀಷ್ಮನು ಪುರಾತನವಾದ ಅತ್ಯುತ್ತಮವಾದ ರಾಜಧರ್ಮಗಳನ್ನು ಉಪನ್ಯಸಿಸುತ್ತಿಂತೆಂದನು. ಧರಣೀಶನು ದೇವಕಾರ್ಯನಿರ್ವಾಹಕ್ಕಾಗಿ ಭೂಮಿಯಮೇಲಿರತಕ್ಕವನು. ಆತನು ದೇವಬ್ರಾಹ್ಮಣರನ್ನು ಪೂಜಿಸಬೇಕು. ನಿರಾಲಸ್ಯವೂ, ಸಾಹಸವೂ, ನೃಪತಿಗೆ ಸ್ವಾಭಾವಿಕವಾಗಿರಬೇಕಾದ ಗುಣಗಳು. ಫಲಸಿದ್ಧಿಯುಂಟಾಗದಿದ್ದಲ್ಲಿ ಪುನಃ ಪ್ರಯತ್ನಮಾಡಬೇಕು. ಇದು ರಾಜರಿಗೆ ಪರಮಧರ್ಮವು. ಸತ್ಯಪರಾಯಣನಾಗಿ ಅತ್ಯಂತ ಮೃದುತ್ವವನ್ನೂ ಅತಿ ಕಾಠಿಣ್ಯವನ್ನೂ ಬಿಟ್ಟು ನ್ಯಾಯವಾದುದನ್ನೇ ನಡೆಯಿಸಬೇಕು. ತಾಯಿಯು ಕುಮಾರನ ಕ್ಷೇಮವನ್ನು ನೋಡಿಕೊಳ್ಳುತ್ತಾ ಆತನನ್ನು ಪ್ರೀತಿಸುವ ತೆರದಲ್ಲಿ ನೃಪತಿಯು ಪ್ರಜೆಗಳಲ್ಲಿ ಅನುರಕ್ತನಾಗಿರಬೇಕು. ಅವರ ಮೇಲ್ಮೆಗಾಗಿ ಆತ್ಮಸುಖವನ್ನು ತ್ಯಜಿಸಬೇಕು. ಸದಾಕಾಲದಲ್ಲಿಯೂ ಕೃತೋದ್ಯೋಗಿಯಾಗಿರಬೇಕಲ್ಲದೆ ಧೈರ್ಯವನ್ನು ಬಿಡಬಾರದು, ಪ್ರಜೆಗಳಿಗೆ ಹಿತಮಾಡುವುದರಲ್ಲಿಯೂ ಸತ್ಯಾನುಷ್ಠಾನದಲ್ಲಿಯೂ

ಅಕುಟಿಲ ಪ್ರವರ್ತನೆಯೇ ನೃಪಾಲಕರಿಗೆ ಸನಾತನಧರ್ಮವು. ಅಂದರೆ ಪ್ರಜಾರಂಜನೆಯೂ ಸತ್ಯಪಾಲನೆಯೂ ಋಜುಮಾರ್ಗವೂ, ರಾಜರಿಗೆ ಸನಾತನಧರ್ಮವಾಗಿರಬೇಕು. ಇಂದ್ರಿಯನಿಗ್ರಹವೂ, ಸೌಮ್ಯಸ್ವಭಾವವೂ, ವೃದ್ಧರಾದವರಲ್ಲಿ ನಮ್ರತೆಯೂ, ಪ್ರಾಭವವೂ, ಔದಾರ್ಯವೂ, ನರಪತಿಗಿರಬೇಕಾದ ಗುಣಗಳು. ತಂದೆಯಬಳಿಯಲ್ಲಿ ಮಕ್ಕಳು ಹೇಗೋ ಹಾಗೆ ಪ್ರಜೆಗಳು ಸೌಖ್ಯವಾಗಿ ವಾಸಿಸಬೇಕು. ಯಾವದೊರೆಯ ರಾಜ್ಯದಲ್ಲಿ ಪ್ರಜೆಗಳು ಧರ್ಮನಿರತರಾಗಿ ಸಮಯಬಂದಾಗ ತಮ್ಮ ದೇಹಗಳನ್ನಾದರೂ ತ್ಯಜಿಸಲು ಸಿದ್ಧರಾಗಿರುವರೋ, ಪ್ರಜೆಗಳು ಸುರಕ್ಷಿತರಾಗಿ ಸನ್ಮಾರ್ಗದಲ್ಲಿ ನಡೆಯುತ್ತಾ ವಿಧೇಯತೆಯುಳ್ಳವರಾಗಿ ಕಲಹಗಳಿಲ್ಲದೆ, ಉದಾರಸ್ವಭಾವವುಳ್ಳವರಾಗಿರುವರೋ ಆತನೇ ಧರಣೀಶನೆನಿಸುವನು. ಪ್ರಜಾರಕ್ಷಣೆಗಿಂತ ಹೆಚ್ಚಾದ ಧರ್ಮವು ಮಹೀಪತಿಗೆ ಮತ್ತೊಂದಿಲ್ಲ. ಮಾತನಾಡುವ ಶೂರನಿಗಿಂತಲೂ ಕಾರ್ಯನಡೆಸುವ ಶೂರನೇ ಶ್ರೇಷ್ಠನು.

ಒಬ್ಬನೇ ಏತಕ್ಕೆ ರಾಜನಾಗಿರಬೇಕೆಂದು ಕೌಂತೇಯನು ಕೇಳಲು ಗಾಂಗೇಯನಿಂತೆಂದನು. ಆದಿಕಾಲದಲ್ಲಿ ದೊರೆಗಳಿಲ್ಲದೆ ಎಲ್ಲಾ ಜನಗಳೂ ನ್ಯಾಯಪಥದಲ್ಲಿಯೇ ನಡೆಯುತ್ತಾ ಒಬ್ಬರನ್ನೊಬ್ಬರು ರಕ್ಷಿಸುತ್ತಿದ್ದರು. ಅನಂತರ ಕಾಲಕಾಲಕ್ಕೆ ಜನಗಳು ದುರಾಶಾಗ್ರಸ್ತರಾದುದರಿಂದ ಅವರನ್ನು ಕಾಪಾಡಲು ದೊರೆತನವು ಆವಶ್ಯಕವಾಯಿತು. ಆದುದರಿಂದ ಈಶ್ವರನು ದೇವಾಂಶಸಂಭೂತರಾದವರನ್ನು ದೊರೆಗಳನ್ನಾಗಿ ನಿಯಮಿಸಿದನು. ಅನಂತರ ಉತ್ತಮಗುಣಗಳುಳ್ಳ ಮನುಷ್ಯರೇ ಕ್ರಮವಾಗಿ ನರಪಾಲಕರಾಗಿ ಭೂಮಿಯಲ್ಲಿ ಹುಟ್ಟಲು ಅಂತಹವರಿಗೆ ಎಲ್ಲರೂ ಸಂತೋಷದಿಂದ ವಿಧೇಯರಾದರು. ಜನರೆಲ್ಲರೂ ರಾಜನನ್ನು ಈಶ್ವರನೆಂದು ಒಪ್ಪಿಕೊಳ್ಳುತ್ತಿದ್ದರು. ಆದುದರಿಂದಲೇ ನೃಪಾಲನು ದೇವಸಮನೆಂದು ಹೇಳಲ್ಪಡುವನು. ಎಂದು ಹೇಳಿ ನದೀಸೂನುವು ನಾಲ್ಕು ವರ್ಣಗಳನ್ನೂ ಮತ್ತು ನಾಲ್ಕು ಆಶ್ರಮಗಳನ್ನೂ ಕುರಿತು ಉಪನ್ಯಸಿಸುತ್ತಾ ಪುನಃ ಹೀಗೆ ಹೇಳತೊಡಗಿದನು. ಈ ಧರ್ಮಗಳೆಲ್ಲವೂ ರಾಜಮೂಲಗಳು. ಇವೆಲ್ಲಕ್ಕೂ ರಾಜನೇ ರಕ್ಷಕನಾಗಿರುವನು. ದೇಶಕ್ಕೆ ಅನಾಯಕತ್ವಕ್ಕಿಂತಲೂ ಬೇರೆ ಕೇಡು ಮತ್ತಾವುದೂ ಇಲ್ಲ. ಅನಾಯಕರಾಷ್ಟ್ರದಲ್ಲಿ ಯಾವನೊಬ್ಬನೂ ವಾಸಮಾಡಕೂಡದು. ಮೊದಲು ಜನಗಳು ಬಲಶಾಲಿಗಳಿಂದ ಬಾಧೆಹೊಂದಿ ಆರ್ತರಾಗಿ ತಮಗೆ ಪ್ರಭುವನ್ನು ಕೊಡಬೇಕೆಂದು ಪರಮೇಶ್ವರನನ್ನು ಪ್ರಾರ್ಥಿಸಲು ಆತನು ಮನುವನ್ನು ಅವತಾರಮಾಡುವಂತೆ ಕಟ್ಟುಮಾಡಿದನು. ಈ ಮನುವು ವರ್ಣಾಶ್ರಮಧರ್ಮಗಳನ್ನೇರ್ಪಡಿಸಿ ಅಕೃತ್ಯಗಳನ್ನು ಶಾಂತಿಮಾಡಿದನು ; ಎಂದು ಹೇಳಿ ರಾಜಧರ್ಮಗಳನ್ನೆಲ್ಲಾ ಸವಿಸ್ತಾರ

ವಾಗಿ ತಿಳಿಯಿಸಿ ಮತ್ತೆ ಹೀಗೆಂದನು. ಭೂಪಾಲಕನು ತನ್ನ ಪ್ರಜೆಗಳನ್ನು ಕಾಪಾಡದಿದ್ದ ಕಾರಣದಿಂಧ.ರಾಷ್ಟ್ರಕ್ಕುಪದ್ರವವಾಗಲೀ ಕೇಡಾಗಲೀ ಸಂಭವಿಸಿದುದಾದರೆ ಅದರಿಂದ ದೊರೆಗೆ ಪಾಪಸಂಭವಿಸುವುದು. ಮೊದಲು ಒಬ್ಬ ರಾಕ್ಷಸನು ಒಬ್ಬ ದೊರೆಯನ್ನು ಹಿಡಿದುಕೊಳ್ಳಲು ಆತನು ಆ ರಾಕ್ಷಸನೊಡನೆ ಹೀಗೆ ಹೇಳಿದನು—ನನ್ನ ರಾಜ್ಯದಲ್ಲಿ ಕಳ್ಳರಾಗಲೀ ದೋಷಾಚರಣೆ ಮಾಡುವವರಾಗಲೀ, ಸುರಾಪಾನರತರಾಗಲೀ ಅಧರ್ಮಾತ್ಮರಾಗಲೀ ಇಲ್ಲ. ಚತುರ್ವರ್ಣದವರೂ ಸ್ವವಿಹಿತಾಚಾರಗಳನ್ನು ನಡೆಯಿಸುತಿರುವರು. ಅನಾಥರೂ, ಮುದುಕರೂ, ದುರ್ಬಲರೂ, ರೋಗಪೀಡಿತರೂ, ದಿಕ್ಕಿಲ್ಲದ ಸ್ತ್ರೀಯರೂ, ಇಂತಹವರನ್ನು ನಾನು ಕಾಪಾಡುತಿರುವೆನು. ನನ್ನ ಪ್ರಜೆಗಳ ಮೇಲಿಗಾಗಿಯೂ ನ್ಯಾಯದೊರೆಯುವುದಕ್ಕಾಗಿಯೂ ನಾನು ಯುದ್ಧಗಳನ್ನು ಮಾಡಿರುವೆನು. ನನ್ನ ಪ್ರಜೆಗಳೆಲ್ಲರೂ ನನ್ನನ್ನನುಸರಿಸುತಿರುವರು. ಆದುದರಿಂದ ನೀನು ನನ್ನನ್ನು ಏನುಮಾಡುವಿ ? ಎಂದು ಕೇಳಲು ಆ ರಕ್ಕಸನು ಆ ನೃಪತಿಯನ್ನು ಬಿಟ್ಟು ಕಳುಹಿಸಿದನು ; ಎಂದು ಹೇಳಿ ಭೀಷ್ಮನು ಅನ್ಯಾಯಮಾಡಿದವರನ್ನು ಹೇಗೆ ದಂಡಿಸಬೇಕೋ ಆ ವಿಧವನ್ನು ತಿಳಿಯಪಡಿಸಿ ಅಶಕ್ತರನ್ನು ಹಿಂಸಿಸುವುದು ಪಾಪಕಾರ್ಯವೆಂದು ನಿರೂಪಿಸುತ್ತಾ ಹೀಗೆ ಹೇಳಿದನು—“ಬಲಹೀನರನ್ನು ಕಾಪಾಡುವುದಕ್ಕಾಗಿ ಈಶ್ವರನು ರಾಜ್ಯದಲ್ಲಿ ಮೂರ್ತಿಗೊಂಡಿರುವ ಶಕ್ತಿಯ (ರಾಜನ)ನ್ನು ಸೃಜಿಸಿದನು. ಬಲಹೀನನ ದೃಷ್ಟಿಯೂ, ಮುನೀಂದ್ರನ ದೃಷ್ಟಿಯೂ, ವಿಷಸರ್ಪದದೃಷ್ಟಿಯೂ ಸಹಿಸಲಸಾಧ್ಯವೆಂದು ತಿಳಿಯಬೇಕು. ಆದುದರಿಂದ ದುರ್ಬಲರಿಗೆ ನೀನು ವೈರಿಯಾಗಬೇಡ. ಬಲಹೀನನು ಯಾವಾಗಲೂ ಅವಮಾನಿತನೆಂದು ತಿಳಿಯುವನಾಗು. ಹಾಗಾದುದರಿಂದ ಬಲಹೀನನು ತನ್ನ ದೃಷ್ಟಿಯಿಂದ ನಿನ್ನನ್ನು ಬಂಧುವರ್ಗದೊಡನೆ ದಹಿಸುವಂತೆ ಮಾಡದಿರು. ದುರ್ಬಲರ ಕ್ರೂರವೀಕ್ಷಣೆಗಳಿಂದ ದಗ್ಧಗಳಾದ ಕುಲಗಳಲ್ಲಿ ಪ್ರಜೋತ್ಪಾದನವಾಗುವುದಿಲ್ಲ. ಅಂತಹ ವೀಕ್ಷಣೆಗಳು ಕುಲವನ್ನು ನಿರ್ಮೂಲಮಾಡುವುವು. ಆದುದರಿಂದ ದುರ್ಬಲರನ್ನು ಹಗೆಗಳನ್ನಾಗಿ ಮಾಡಿಕೊಳ್ಳಬೇಡ. ದೌರ್ಬಲ್ಯದಿಂದ ದಗ್ಧವಾದ ಬಲವು ಸಮೂಲವಾಗಿ ನಾಶವಾಗುವುದಾದುದರಿಂದ ಎಲ್ಲಾ ನಾಶಹೇತುಗಳಲ್ಲಿಯೂ ದೌರ್ಬಲ್ಯವೇ ಸರ್ವೋತ್ತಮವಾದ ನಾಶಹೇತುವೆನಿಸಿಕೊಂಡಿತು. ಒಬ್ಬ ಮನುಷ್ಯನು ಪರರಿಂದವಮಾನಿಸಲ್ಪಟ್ಟು, ನೋಯಿಸಲ್ಪಟ್ಟು ಅಸಹಾಯನಾಗಿ ಒತ್ತಾಸೆಹೊಂದದಿದ್ದಲ್ಲಿ ಈಶ್ವರನು ಅದಕ್ಕೆ ಕಾರಣನಾದ ರಾಜನನ್ನು ಶಿಕ್ಷಿಸಿ ನಾಶಮಾಡುವನು. ಆದಕಾರಣ

ತಂದೇ! ನೀನು ಬಲಪ್ರಾಭವಗಳನ್ನನುಭವಿಸುವ ಸಂದರ್ಭದಲ್ಲಿ ದುರ್ಬಲರ ಐಶ್ವರ್ಯಕ್ಕೆ ಆಶೆಪಡಬೇಡ. ದುರ್ಬಲರ ದೃಷ್ಟಿಯು ಧಗಧಗನೆ ಉರಿಯುವ ಬೆಂಕಿಯಂತೆರದಲ್ಲಿ ನಿನ್ನನ್ನು ಸುಡದಿರುವ ರೀತಿಯಲ್ಲಿ ಎಚ್ಚರಿಕೆಯಿಂದ ವರ್ತಿಸು. ಸುಳ್ಳುಮಾತುಗಳಿಂದ ನೊಂದು ವ್ಯಥೆಪಡುವವರ ಕಣ್ಣೀರುಗಳೂ ಈ ರೀತಿಯಲ್ಲಿಯೇ ಸುಳ್ಳುಹೇಳಿದವರ ಮಕ್ಕಳನ್ನೂ ಪಶುಗಳನ್ನೂ ನಾಶಮಾಡುವುವು. ಬಲಹೀನನಿಗೆ ಸಹಾಯಕನು ಸಿಕ್ಕದಿದ್ದಲ್ಲಿ ಈಶ್ವರನು ರಾಜನನ್ನು ದಂಡಿಸುವನು.'' ಎಂದು ಹೇಳಿ ಭೀಷ್ಮನು ಶೂರರ ಧರ್ಮಗಳನ್ನು ವಿವರಿಸುತ್ತಾ ಹೀಗೆಂದನು.—ಶೂರರು ಕೋಪವನ್ನು ಹೊಂದದೆಯೂ ಕೊಲ್ಲಬೇಕೆಂದಾಸೆಪಡದೆಯೂ ಯುದ್ಧಮಾಡಬೇಕು. ಹಗೆಯು ನೊಂದಿರುವಲ್ಲಿಯೂ ನಿರಾಯುಧನಾಗಿರುವಲ್ಲಿಯೂ ಹೋರಬಾರದು. ಯುದ್ಧದಲ್ಲಿ ವಂಚನೆಮಾಡುವುದುಚಿತವಲ್ಲ. ಏಟುತಿಂದ ಶತ್ರುವನ್ನು ಮನೆಗೆ ಕಳುಹಿಸಬೇಕು. ಹಾಗಲ್ಲದಿದ್ದರೆ ಚಿಕಿತ್ಸೆಮಾಡಿಸಬೇಕು. ದುಷ್ಟನನ್ನಾದರೂ ನ್ಯಾಯರೀತಿಯಿಂದ ಜಯಿಸಬೇಕು. ಅನ್ಯಾಯದಿಂದ ಜಯಹೊಂದುವುದಕ್ಕಿಂತಲೂ ಸಾಯುವುದೇ ಮೇಲು. ಹೀಗೆ ಜನಗಳು ಕ್ಷತ್ರಿಯಧರ್ಮವನ್ನಭ್ಯಸಿಸುತ್ತಾ ಯುದ್ಧಮಾಡುವುದನ್ನು ಕಲಿತರು.

ಈ ಆಪ್ತವಾಕ್ಯ ಅಧ್ಯಾಯದ ಮೊದಲನೆಯ ಭಾಗದಲ್ಲಿ ರಾಜಧರ್ಮಗಳೂ ಯುದ್ಧಪ್ರಕಾರಗಳೂ ಹೇಳಲ್ಪಟ್ಟಿದ್ದರೂ ಇದರಲ್ಲಿನ ಅನೇಕ ನೀತಿಗಳು ಸಮಸ್ತ ಜನಗಳಿಗೂ ಉಪಯುಕ್ತಗಳಾಗಿರುವುವು. ಪುರುಷಪ್ರಯತ್ನವನ್ನು ಕುರಿತು ಹೇಳುವಾಗ ಭೀಷ್ಮನು ಪೂರ್ವಜನ್ಮದಲ್ಲಿ ಮಾಡಿದ ಕರ್ಮದ ಫಲವೇ ಪ್ರಾರಬ್ಧವಾದ ವಿಧಿಯೆಂತಲೂ ಆದುದರಿಂದ ವಿಧಿಗಿಂತಲೂ ಪುರುಷಪ್ರಯತ್ನವೇ ಬಲವತ್ತರವಾದುದೆನುತಲೂ ಹೇಳಿರುವನು. ಎಲ್ಲವೂ ವಿಧಿಕೃತವೆನುತಲೂ ಕರ್ಮಾಧೀನವೆನುತಲೂ ಪುರುಷಪ್ರಯತ್ನದ ಪ್ರಯೋಜನವೇನೂ ಇಲ್ಲವೆಂತಲೂ ಈ ಕಾಲದಲ್ಲಿ ಕೆಲವರು ಹೇಳುವರು. ಆದರೂ ಶಂತನು ಪುತ್ರನು ಕರ್ಮವಿಧಿಜ್ಞನಾಗಿ ಪುರುಷಪ್ರಯತ್ನದ ಪ್ರಯೋಜನವನ್ನು ತಿಳಿದವನಾದುದರಿಂದ ಹಾಗೆ ಹೇಳನು. ಈಗ ನಾವು ಅನುಭವಿಸುವ ಕಷ್ಟಸುಖಗಳು ಪೂರ್ವಜನ್ಮದಲ್ಲಿ ನಾವು ಮಾಡಿದ ಕರ್ಮಾನುಸಾರವಾಗಿರುವುವು. ಇದನ್ನು ನಾವು ಈಗಿನ ಪ್ರಯತ್ನದಿಂದ ಬದಲಾಯಿಸಿಕೊಳ್ಳಬಹುದು. ಕರ್ಮವನ್ನು ಅನುಭವಿಸುವುದರಲ್ಲಿ ನಾವು ಪ್ರವಾಹದಲ್ಲಿನ ತೃಣಗಳಂತೆ ತೇಲಿಹೋಗತಕ್ಕವರಲ್ಲ. ನಾವಿಕರು ತಮ್ಮ ಪ್ರಯತ್ನದಿಂದ ಪ್ರವಾಹಕ್ಕೆ ಅಡ್ಡಲಾಗಿಯಾಗಲೀ ಇದಿರಾಗಿಯಾಗಲೀ ಹೇಗೆ ಹೋಗಬಲ್ಲರೋ ಹಾಗೆ ನಾವೂ ನಮ್ಮ ಪ್ರಯತ್ನದಿಂದ ಪ್ರಾರಬ್ಧವನ್ನು ಬದಲಾಯಿಸ

ಬಲ್ಲ ಶಕ್ತರು. ಬುದ್ಧಿಶಕ್ತಿಯೂ, ಭಾವಗಳೂ, ಕೋರಿಕೆಗಳೂ, ವಾಸನೆಗಳೂ ನಾವು ಮಾಡಿದ ಪೂರ್ವಜನ್ಮದ ಕರ್ಮದಿಂದ ಉಂಟಾದವುಗಳಾದುದರಿಂದ ನಾವು ಈ ಜನ್ಮದಲ್ಲಿ ತಕ್ಕ ಕರ್ಮವನ್ನಾಚರಿಸಿ ಅದನ್ನು ಬದಲಾಯಿಸಿಕೊಳ್ಳಬಹುದು. ಧರಣೀಪತಿಯು ಧೈರ್ಯವನ್ನು ಬಿಡಬಾರದೆಂದು ಭೀಷ್ಮನು ಹೇಳಿದನು. ಆ ಮಾತು ಎಲ್ಲಾ ಜನಗಳಿಗೂ ಹಿತವಾದುದು. ನರನು ಧೀರನಾಗಿ ಶ್ರಮಸಹಿಷ್ಣುವಾಗಿರಬೇಕು. ಈಗಿನ ಕಾಲದಲ್ಲಿ ಸಮಸ್ತ ಕಾರ್ಯಕ್ಕೂ ಸುಲಭೋಪಾಯವನ್ನು ಕಲ್ಪಿಸುವುದೂ ಶರೀರಕ್ಕೆ ಕಷ್ಟವನ್ನೆಲ್ಲಾ ನಿವಾರಿಸಿ ಅದನ್ನು ಕೊಬ್ಬಿಸುವುದೂ ಜನಗಳಲ್ಲಿ ವಾಡಿಕೆಯಾಗಿರುವುದು. ಅದು ಸರಿಯಲ್ಲ. ನಮಗೆ ಎಂತಹ ಕಷ್ಟ ಪ್ರಾಪ್ತವಾದರೂ ಧೈರ್ಯವನ್ನು ಬಿಡಬಾರದು. ನಮ್ಮ ದೇಹಗಳನ್ನು ಆಯಾಸ ಸಹಿಸುವಂತೆ ಮಾಡಿಕೊಳ್ಳಬೇಕು. ನಮ್ಮ ದೇಹಗಳು ನಮ್ಮಧೀನಗಳಾಗಿರಬೇಕೇ ಹೊರತು ನಾವು ಅವಕ್ಕಧೀನರಾಗಬಾರದು. ಈ ಕಾಲದಲ್ಲಿ ಶರೀರಕ್ಕೆ ಕಷ್ಟವನ್ನು ತಪ್ಪಿಸುವುದೇ ಮುಖ್ಯೋದ್ದೇಶವಾಗಿದೆ. ಅದರಿಂದ ಬಲಹೀನತೆಯುಂಟಾಗುವುದು. ರಾಕ್ಷಸನಿಂದ ಹಿಡಿಯಲ್ಪಟ್ಟ ರಾಜನ ಚರಿತ್ರೆಯನ್ನು ನೋಡಿರಿ. ಆತನು ಸ್ವವಿಹಿತಕರ್ಮಗಳೆಲ್ಲವನ್ನೂ ಮಾಡುತ್ತಿದ್ದುದರಿಂದ ಸ್ವಲ್ಪವೂ ಭಯಪಡದಿದ್ದನು. ಸ್ವಧರ್ಮಗಳನ್ನು ಕ್ರಮವಾಗನುಷ್ಠಿಸುವವನು ಎಂದಿಗೂ ಭಯಪಡಬೇಕಾದುದಿಲ್ಲ. ಧರ್ಮಗಳನ್ನು ಮರೆತರೆ ಅಥವಾ ಮೀರಿದರೆ ತಾನೇ ಅಂತಹ ಸಮಯಗಳಲ್ಲಿ ನಮಗೆ ಕೇಡೊದಗುವುದು. ನಾವು ಧರ್ಮಗಳನ್ನಾಚರಿಸುತಿದ್ದೆವಾದರೆ ನಮಗೆಂತಹ ಆಪತ್ತೂ ಉಂಟಾಗಲಾರದು. ಎಂತಹ ಬಲವೂ ನಮ್ಮನ್ನು ತೊಂದರೆಪಡಿಸಲಾರದು. ನಾವು ಅನ್ಯಾಯವನ್ನೇ ಎಣಿಸುತ್ತಾ ಅನ್ಯಾಯವನ್ನಾಚರಿಸುತಿದ್ದಲ್ಲಿ ಭೀರುಗಳಾಗಿ ಮನಃಕಾಲುಷ್ಯವನ್ನು ಹೊಂದಿ ಶತ್ರುಗಳ ಪ್ರವೇಶಕ್ಕೆ ಅವಕಾಶ ಕೊಡುವೆವು. ಅವರಿಗೆ ಭಯಪಟ್ಟವರಾಗುವೆವು. ನಾವು ಅವಕಾಶ ಕೊಡದಿದ್ದಲ್ಲಿ ಶತ್ರುಗಳು ಪ್ರವೇಶಮಾಡಲಾರರು. ಪದಾರ್ಥಗಳು ಮತ್ತು ಅವುಗಳ ಆಕೃತಿ ಈ ವಿಷಯದಲ್ಲಿ ಪ್ರಬಲವಾದ ವಿವೇಚನಾಶಕ್ತಿಯುಳ್ಳ ಭೀಷ್ಮನು ಹೇಳಿರುವ ಆತನ ಈ ಮುಂದಿನ ವಾಕ್ಯಗಳು ಆತನ ಮಹಿಮೆಯನ್ನು ತೋರಿಸುವುವು. ಯಜ್ಞಗಳಿಗಿಂತಲೂ ತಪಸ್ಸೇ ಅಧಿಕವಾದುದೆಂದು ವೇದಗಳು ಹೇಳುತ್ತಿರುವುವು. ಇನ್ನು ತಪಸ್ಸಿನ ಕ್ರಮವನ್ನು ವಿವರಿಸುವೆನು, ಕೇಳು. ಅಹಿಂಸೆ, ಸತ್ಯಭಾಷಣ, ಭೂತದಯೆ, ಔದಾರ್ಯ, ಎಂಬಿವೇ ತಪಸ್ಸುಗಳೆಂತಲೂ ಶರೀರಶೋಷಣೆಯು ತಪಸ್ಸಲ್ಲವೆಂತಲೂ ಪ್ರಾಜ್ಞರು ಹೇಳು

ತ್ತಾರೆ. ಜನಕರಾಯನಿಗೂ ಸುಲಭೆ ಎಂಬ ತಪಸ್ವಿನಿಗೂ ನಡೆದ ಸಂವಾದವು ಇದನ್ನೇ ಬೋಧಿಸುವುದು. ಜನಕನು ಆ ಲಲನೆಯೊಡನೆ ಹೀಗೆಂದನು—ಕಾಷಾಯಧಾರಣವೂ, ಶಿರೋಮುಂಡನವೂ ತ್ರಿದಂಡ, ಕಮಂಡಲು ಧಾರಣೆಯೂ, ಆಶ್ರಮಸೂಚಕಗಳಾದ ಬಾಹ್ಯಚಿಹ್ನೆಗಳೇ ಹೊರತು ಇವೇ ಮೋಕ್ಷವನ್ನು ಕೊಡಲಾರವು. ಬಂಧಹೇತುಗಳಾದ ರಾಜ್ಯ ಮತ್ತು ಸ್ತ್ರೀಯರ ಸಾಂಗತ್ಯಗಳನ್ನುಂಟಾಗಿದ್ದೂ ನಾನು ಆಶ್ರಮಕಾಮಗಳನ್ನನುಭವಿಸುವ ಲೀಲೆಯಲ್ಲಿ ಕಾಣಿಸುತ್ತಿದ್ದರೂ ನಿಜವಾಗಿಯೂ ಮುಕ್ತನಾಗಿಯೇ ಇರುವೆನು. ರಾಜ್ಯಬಂಧಗಳನ್ನೂ ಅನುರಾಗಬಂಧವನ್ನೂ ಸಂನ್ಯಾಸವೆಂಬ ಕತ್ತಿಯಿಂದ ಭೇದಿಸಿರುವೆನು. ಮನುಷ್ಯನು ಬಾಹ್ಯಾಭ್ಯಂತರಗಳೆಂಬೆರಡು ಕಡೆಗಳಲ್ಲಿಯೂ ಸಂನ್ಯಾಸ ಹೊಂದಬೇಕು. ಅವುಗಳಲ್ಲಿ ಅಂತರಸಂನ್ಯಾಸವೇ ಶ್ರೇಷ್ಠವಾದುದು. ಮನೋನಿಗ್ರಹದಿಂದಲೂ ತೃಷ್ಣೆ ಎಂಬ ತಂತುವನ್ನು ಭೇದಿಸುವುದರಿಂದಲೂ ಮನುಷ್ಯನು ಯೋಗಿಯಾಗುವನಲ್ಲದೆ ಕಾಷಾಯಧಾರಣ ಮಾತ್ರದಿಂದಲೇ ಯೋಗಿಯಾಗಲಾರನು. ಎಂತಹ ವಸ್ತ್ರಗಳನ್ನು ಧರಿಸಿದಾಗ್ಯೂ ಆಶ್ರಮಧರ್ಮಸೂಚಕಗಳಾದ ಗುರುತುಗಳಾವುವೂ ಇಲ್ಲದಿದ್ದಾಗ್ಯೂ ಮನುಷ್ಯನು ಸಂನ್ಯಾಸ ಹೊಂದಬಹುದು. ಐಶ್ವರ್ಯ ಹೊಂದಿದ್ದಾಗ್ಯೂ ಅದಕ್ಕಧೀನನಾಗದೆ ಇರಬಹುದು. ಭೋಗ್ಯವಸ್ತುಸಮುದಾಯವನ್ನು ಹೊಂದಿದ್ದಾಗ್ಯೂ ಇವು ನನ್ನವಲ್ಲವೆಂಬ ಭಾವವನ್ನು ಹೊಂದಿರಬಹುದು. ಮನಸ್ಸಿನಲ್ಲಿ ವೈರಾಗ್ಯವನ್ನು ಹೊಂದುವವರೇ ಯೋಗಿಗಳು. ಅಂತಹವರನ್ನೇ ದೇವತೆಗಳೂ ಆರ್ಯರೂ ಸನ್ಮಾನಿಸುವರು. ಅಧ್ಯಾತ್ಮವಿಚಾರವು ಹುಟ್ಟಿದೊಡನೆಯೇ ಜಾಲಕರು ಕಷ್ಟಯುಕ್ತವಾದ ಲೌಕಿಕ ಧರ್ಮಗಳಿಂದ ತಪ್ಪಿಸಿಕೊಳ್ಳಬೇಕೆಂದೂ ಸಂನ್ಯಾಸಾಶ್ರಮಧರ್ಮಗಳನ್ನನುಷ್ಠಿಸುವುದೇ ಸೌಖ್ಯಪ್ರದವೆಂತಲೂ ಯೋಚಿಸುತ್ತಾ ಲೋಕವ್ಯವಹಾರಸಂಗಗಳನ್ನು ಬಿಟ್ಟು ಅಡವಿಗೆ ಹೋಗಲು ಎಷ್ಟೋ ಅಪೇಕ್ಷೆ ಹೊಂದುವರು. ಆದಾಗ್ಯೂ ಅನೇಕರಿಗೆ ಹಾಗೆ ಮಾಡತಕ್ಕುದು ಶ್ರೇಯಸ್ಕರವಲ್ಲ. ಸಂಸಾರದಲ್ಲಿದ್ದುಕೊಂಡು ಮೋಕ್ಷವನ್ನು ಸಂಪಾದಿಸಬಹುದು. ಆದರೇನೋ ಈ ಮಾರ್ಗವು ಕಷ್ಟತರವಾದುದು. ಪ್ರಪಂಚದಲ್ಲಿ ವಾಸಿಸುತ್ತಾ ಲೌಕಿಕ ಸೌಖ್ಯಗಳೊಂದಿಗೆ ಅನುರಕ್ತನಾಗದೆ ಅವುಗಳಿಗೆ ದೂರನಾಗಿದ್ದುಕೊಂಡು ಲೌಕಿಕ ವ್ಯಾಪಾರಗಳನ್ನು ಮಾಡುತ್ತಿರುವವನಾಗಿ ಮನಸ್ಸಿನಲ್ಲಿ ಸಂನ್ಯಾಸವನ್ನು ಅವಲಂಬಿಸಿರುವಿಕೆಯೇ ಈ ಕಾಲದಲ್ಲಿ ಅನೇಕರಿಗೆ ಕರ್ತವ್ಯವಾಗಿರುವುದು. ಇವೆಲ್ಲವನ್ನೂ ವ್ಯಕ್ತಗೊಳಿಸತಕ್ಕ

ಪುಣ್ಯಚರಿತನಾದ ಪುರುಷನು ಭೀಷ್ಮನಿಗಿಂತಲೂ ಮತ್ತಾರೂ ಇಲ್ಲ. ಏಕೆಂದರೆ ಆತನು ರಾಜ್ಯಭಾರವನ್ನು ನಿರ್ವಹಿಸುತ್ತಾ ರಾಜ್ಯತಂತ್ರ ಸ್ವತಂತ್ರನಾಗಿ ಯೋಧಾಗ್ರೇಸರನಾಗಿದ್ದು ಚಿತ್ತಸ್ಥೈರ್ಯವುಳ್ಳವನಾಗಿ ಇಂದ್ರಿಯಗಣವನ್ನು ಗೆದ್ದವನಾಗಿ ಹುಟ್ಟಿದ್ದು ಮೊದಲ್ಗೊಂಡು ಆಮರಣಾಂತವೂ ಅಸಾಧ್ಯಚರಿತ್ರನಾಗಿ ಪ್ರಕಾಶಿಸಿದನು.

ಅನಂತರದಲ್ಲಿ ಶಂತನುತನೂಜನು ಸರ್ವವರ್ಣಸಾಮಾನ್ಯಗಳಾದ ಮನುಷ್ಯಧರ್ಮಗಳನ್ನು ವಿವರಿಸುತ್ತಾ ಈ ಕಾಲದಲ್ಲಿ ಅನೇಕರು ಆಚರಿಸದೆ ಬಿಡುತ್ತಿರುವ ಒಂದು ಧರ್ಮವನ್ನು ಅತ್ಯುತ್ತಮವೆಂದು ತಿಳಿಸಿ ಅದರ ಕ್ರಮವನ್ನು ಹೇಳಿದನು. ಮಾತಾಪಿತೃಗಳ ಪೂಜೆಯೂ, ಗುರುಗಳನ್ನು ಆದರಿಸುವಿಕೆಯೂ, ಅವಶ್ಯಾಚರಣಗಳೆಂದು ನಾನು ತಿಳಿಯುವೆನು. ಅದಿಲ್ಲದಿದ್ದಲ್ಲಿ ಎಲ್ಲಾ ಧರ್ಮಗಳೂ ಲೋಪವಾಗುವುವು. ಹಿರಿಯರಿಗೆ ಮರ್ಯಾದೆ, ದೃಢಭಕ್ತಿ, ವಿಧೇಯತೆ, ನಮ್ರತೆ ಎಂಬಿವು ಸದ್ಗುಣಗಳಿಗೆ ಮೂಲವಾಗಿರುವುವು. ಹತ್ತುಮಂದಿ ಗುರುಗಳಿಗಿಂತಲೂ ತಂದೆಯು ದೊಡ್ಡವನು. ಹತ್ತು ಉಪಾಧ್ಯಾಯರಿಗಿಂತಲೂ ಸಮಸ್ತ ಲೋಕಕ್ಕಿಂತಲೂ ತಾಯಿಯು ಪೂಜ್ಯಳು. ಆದುದರಿಂದ ತಾಯಿಯಂತೆ ಶ್ರೇಷ್ಠವೂ ಪೂಜ್ಯವೂ ಆದ ವಸ್ತು ಬೇರೆ ಯಾವದೂ ಇಲ್ಲವೆಂದು ತಿಳಿಯಬೇಕು. ತಂದೆಗಿಂತಲೂ ತಾಯಿಗಿಂತಲೂ ಗುರುವು* ಹೆಚ್ಚಾದ ಪೂಜ್ಯನೆಂದು ನಾನು ತಿಳಿದಿರುವೆನು. ತಾಯಿತಂದೆಗಳು ಮನುಷ್ಯನಿಗೆ ಇಹಲೋಕಸ್ಥಿತಿಗೆ ಕಾರಣರಾಗಿರುವರು. ಗುರುವಿನಿಂದುಂಟಾಗುವ ಜನ್ಮವು ದಿವ್ಯವಾದುದಾಗಿಯೂ ಜರಾಮರಣರಹಿತವಾದುದಾಗಿಯೂ ಪ್ರಕಾಶಿಸುವುದು ಎಂದು ಭೀಷ್ಮನು ಹೇಳಿದನು. ಮಿಕ್ಕದೇಶಗಳಿಗಿಂತ ಹಿಂದೂದೇಶದಲ್ಲಿ ಈಗಲೂ ಮಾತಾಪಿತೃಭಕ್ತಿಯು ಅಧಿಕವಾಗಿದ್ದಾಗ್ಯೂ ಇದು ಈಗ ಪಾಶ್ಚಾತ್ಯರು ಬೋಧಿಸುವ ಸ್ವಾತಂತ್ರ್ಯಜ್ಞಾನದಿಂದ ಕ್ರಮಕ್ರಮವಾಗಿ ನಿರ್ಮೂಲವಾಗುತಿರುವುದು. ಸನಾತನವಾದ ಮನೋಜ್ಞವಾದ ಗುರುಶಿಷ್ಯಸಂಬಂಧವಾದರೋ ಸ್ವಲ್ಪ ಹೆಚ್ಚುಕಡಿಮೆ ನಾಶವೇ ಆಗಿದೆ. ಇದಕ್ಕೆ ಗುರುವೇ ಕಾರಣವು. ಗುರುವು ಶಿಷ್ಯನ ವಿಷಯದಲ್ಲಿ ಆವಶ್ಯಕಕರ್ತವ್ಯವಾಗಿ ನಡೆಯಿಸಬೇಕಾಗಿರುವ ಪ್ರೀತಿ, ಬೋಧೆಗಳೆಂಬೀ ಎರಡು ಧರ್ಮಗಳನ್ನು ನಡೆಸದಿರುವುದರಿಂದ ಶಿಷ್ಯನಲ್ಲಿ ತನ್ನ ಧರ್ಮವಾದ ಭಕ್ತಿವಿಶ್ವಾಸಗಳು ಹೋಗಿಬಿಟ್ಟಿವೆ. ಭೀಷ್ಮನು ಈ ವಿಷಯದಲ್ಲಿ ಆ ಕಾಲದಲ್ಲಿನ ವೃತ್ತಾಂತವನ್ನು ಈ ರೀತಿ ಹೇಳಿರುವನು—ಗುರುಗಳು

* ಉಪಾಧ್ಯಾಯನೆಂದರೆ ಲೌಕಿಕ ವಿದ್ಯಾಬೋಧಕನು. ಗುರುವೆಂದರೆ ಆತ್ಮವಿದ್ಯಾಬೋಧಕನು

ಶಿಷ್ಯರಲ್ಲಿ ಹೆಚ್ಚು ಪ್ರೇಮವನ್ನು ತೋರಿಸುವರು. ಆದುದರಿಂದ ಶಿಷ್ಯರು ಗುರುಗಳಲ್ಲಿ ತದನುಗುಣವಾದ ಭಕ್ತಿಯನ್ನು ತೋರ್ಪಡಿಸಬೇಕು. ಈ ಕಾಲದಲ್ಲಿಯೂ ಕೂಡ ನಿಜಧರ್ಮಗಳನ್ನು ಬಿಡದೆ ನಡೆಯಿಸುತ್ತಾ ಶಿಷ್ಯರನ್ನು ಸ್ವಧರ್ಮಗಳನ್ನು ನಡೆಯಿಸುವಂತೆ ಬೋಧಿಸುವ ಗುರುಗಳು ಕೆಲವರಿರುವರು. ಗುರುವಿನಲ್ಲಿ ಯಾವಾಗಲೂ ಭಾರವು ಹೆಚ್ಚಾಗಿರುವುದು. ಉತ್ತಮಗುಣವುಳ್ಳ ಗುರುವು ಇರುವಲ್ಲಿ ಉತ್ತಮರಾದ ಶಿಷ್ಯರೂ ಕಾಣಬರುವರು.

ಬಳಿಕ ಯುಧಿಷ್ಠಿರನು ಪಿತಾಮಹನಲ್ಲಿ ಅನೇಕ ವಿಷಯಗಳನ್ನು ಪ್ರಶ್ನೆಮಾಡಲು ಭೀಷ್ಮನು ಅವುಗಳಿಗೆಲ್ಲಾ ಸರಿಯಾದ ಕ್ರಮದಲ್ಲಿ ಉತ್ತರವನ್ನು ಹೇಳಿದನು. ಅವುಗಳಲ್ಲಿ ಕೆಲವನ್ನು ಮಾತ್ರ ನಾವು ಇಲ್ಲಿ ವಿವರಿಸುವೆವು.

ಧರ್ಮಜನು ಧರ್ಮಸ್ವರೂಪವೆಂತಹುದೆಂದು ಕೇಳಿದುದಕ್ಕೆ ಭೀಷ್ಮನು ಆತನೊಡನೆ ಧರ್ಮವೆಂತಹುದೆಂದು ನಿರೂಪಿಸುವುದು ಸಾಧ್ಯವಲ್ಲವಾದರೂ ಅದರ ಸ್ವರೂಪವನ್ನು ಸ್ವಲ್ಪಮಟ್ಟಿಗೆ ತಿಳಿಯುವುದಕ್ಕಾಗಿ ಕೆಲ ವಿಧಿಗಳನ್ನು ಮುಂದೆ ಹೇಳುವಂತೆ ತಿಳಿಯಪಡಿಸಿದನು. ಸರ್ವಭೂತಗಳ ಅಭಿವೃದ್ಧಿಗಾಗಿ ಧರ್ಮವು ವಿಹಿತವಾಗಿರುವುದಾದಕಾರಣ, ಎಲ್ಲಾ ಪ್ರಾಣಿಗಳಿಗೂ ಹಿತವನ್ನುಂಟುಮಾಡುವುದೇ ಧರ್ಮವು. ಪ್ರಾಣಿಗಳು ಒಂದನ್ನೊಂದು ಹಿಂಸಿಸದಿರುವುದಕ್ಕಾಗಿ ಧರ್ಮವು ವಿಹಿತವಾಗಿರುವುದರಿಂದ ಪ್ರಾಣಿಗಳ ಹಿಂಸೆಯನ್ನು ಹೋಗಲಾಡಿಸುವುದು ಧರ್ಮವು. ಸಮಸ್ತ ಪ್ರಾಣಿಗಳೂ ಧರ್ಮದಿಂದ ನಿಲ್ಲುವುವಾದುದರಿಂದ ಧರ್ಮವು ಸರ್ವಜೀವಿಗಳಿಗೂ ಆಧಾರವಾಗಿರುವುದೆಂದು ತಿಳಿಯಬೇಕು. ಆದುದರಿಂದ ಸಕಲ ಪ್ರಾಣಿಗಳನ್ನೂ ಧರಿಸತಕ್ಕುದೇ ಧರ್ಮವು. ಆಪತ್ತನ್ನು ಹೋಗಲಾಡಿಸಿಕೊಳ್ಳತಕ್ಕ ಬಗೆ ಹೇಗೆಂದು ಧರ್ಮಜನು ಕೇಳಲು ನದೀಸೂನುವಿಂತೆಂದು ಹೇಳಿದನು— ಒಂದು ಕಾಲದಲ್ಲಾದರೂ ವಂಚನೆ ಮಾಡದಿರತಕ್ಕವರೂ, ನಿಯತಪ್ರವರ್ತನೆಯಿಂದ ನಡೆಯತಕ್ಕವರೂ, ವಿಷಯಾಭಿಲಾಷೆಯನ್ನು ಜಯಿಸಿರತಕ್ಕವರೂ ಆಪತ್ತುಗಳೆಲ್ಲವನ್ನೂ ಗೆಲ್ಲುವರು. ತಮ್ಮನ್ನು ಇತರರು ನಿಂದಿಸುತಿರುವಲ್ಲಿ ತಾವು ಪ್ರತಿಯನ್ನು ಆಚರಿಸದಿರತಕ್ಕವರೂ, ತಮ್ಮನ್ನು ಇತರರು ಹಿಂಸಿಸಿದಾಗ ಅಂತಹವರಿಗೆ ಕೇಡನ್ನು ಮಾಡದಿರತಕ್ಕವರೂ, ಮತ್ತೊಬ್ಬರಿಗೆ ದಾನವನ್ನು ಮಾಡುವ ಮತ್ತು ಪ್ರತಿಗ್ರಹವಿಲ್ಲದಿರತಕ್ಕವರೂ ಸಮಸ್ತ ಆಪತ್ತುಗಳನ್ನೂ ದಾಟುವರು. ಮನೋವಾಕ್ಕಾಯಕರ್ಮಗಳಿಂದ ಯಾವ ಪಾಪವನ್ನಾದರೂ ಮಾಡೆ

ದಿರತಕ್ಕವರೂ, ಎಂತಹ ಪ್ರಾಣಿಯನ್ನಾದರೂ ಹಿಂಸೆಪಡಿಸದಿರತಕ್ಕವರೂ ಎಲ್ಲಾ ಆಪದೆಗಳನ್ನು ಮೀರುವರು. ಪ್ರಾಣಹೋಗುವ ಸಂದರ್ಭದಲ್ಲಿಯೂ ಸತ್ಯವನ್ನು ಹೇಳುತ್ತ ಸರ್ವಭೂತಗಳಿಗೂ ಪ್ರಮಾಣಭೂತರಾಗಿರತಕ್ಕವರೂ, ಆಪತ್ಕಾಲದಲ್ಲಿಯೂ ಉದ್ಧಾರವಾಗುವರು. ತಮ್ಮ ಕರ್ಮಗಳನ್ನು ಆರ್ಜವದಿಂದ ನಡೆಯಿಸುತ್ತಾ ನಿಜವನ್ನೇ ಹೇಳುತ್ತಾ ಐಶ್ವರ್ಯವನ್ನು ಸದ್ವಿನಿಯೋಗ ಮಾಡತಕ್ಕವರು ಸಕಲ ಆಪತ್ತುಗಳನ್ನೂ ಜಯಿಸುವರು. ಸಕಲದೇವತೆಗಳನ್ನೂ ಆರಾಧಿಸತಕ್ಕವರೂ, ಸ್ವಧರ್ಮಗಳನ್ನು ಕೇಳಿ ತಿಳಿಯತಕ್ಕವರೂ, ಶ್ರದ್ಧಾಳುಗಳೂ, ಪ್ರಶಾಂತವಾದ ಮನೋವೃತ್ತಿಯುಳ್ಳವರೂ ಸಮಸ್ತವಾದ ಆಪತ್ತುಗಳನ್ನೂ ಹೋಗಲಾಡಿಸಿಕೊಳ್ಳುವರು. ಈ ರೀತಿಯಲ್ಲಿ ಹೇಳಿದ ಭೀಷ್ಮನ ವಚನವನ್ನು ಕೇಳಿ ಧರ್ಮನಂದನನು ತನ್ನನ್ನು ಪರರು ನಿಂದಿಸಿದಲ್ಲಿ ಹೇಗೆ ನಡೆದುಕೊಳ್ಳಬೇಕೋ ಎಂದು ಸಂಶಯಪಡುತ್ತಿರುವೆನೆನ್ನಲು ಮಂದಾಕಿನೀನಂದನನು ದುಷ್ಟಭಾಷಣೆಗಳನ್ನಾಡತಕ್ಕವನು ಕಠೋರವಾಗಿ ಅರಚುವ ಟಿಟ್ಟಿಭನಂತಹವನೆಂದು ತಿಳಿದು ಬುದ್ಧಿವಂತನಾದವನು ಅಂತಹ ದುಷ್ಟನನ್ನು ಲೆಕ್ಕಿಸದೇ ಇರಬೇಕು. ಅಂತಹ ವಿವೇಕಹೀನನು ಆಡಿದುದನ್ನೆಲ್ಲಾ ಬುದ್ಧಿವಂತನು ಸೈರಿಸಬೇಕು. ನೀಚಮಾನವನು ಸ್ತುತಿಸಿಯೂ ದೂಷಿಸಿಯೂ ಏನುಮಾಡಬಲ್ಲನು ? ಅವನು ಯಾವುದಕ್ಕೂ ಸಮನಲ್ಲದೆ ಅಡವಿಯಲ್ಲಿ ಕೂಗುವ ವಾಯಸಕ್ಕೆ ತುಲ್ಯನಾದವನು. ಇತರರು ತಮ್ಮ ವಿಷಯದಲ್ಲಿ ಏನು ಯೋಚಿಸುವರೋ ಏನೇನು ಮಾಡುವರೋ ಎಂದು ಸದಾಕಾಲದಲ್ಲಿಯೂ ವೇದನೆಹೊಂದುತ್ತ ಅನೇಕರು ತಮ್ಮ ಜೀವಿತಕಾಲವನ್ನು ಕಷ್ಟಭಾಜನವನ್ನಾಗಿ ಮಾಡಿಕೊಳ್ಳುವರು. ಅದು ಅಯುಕ್ತವೇ ಸರಿ. ನಾವು ಸ್ತೋತ್ರವನ್ನೂ ದೂಷಣೆಯನ್ನೂ ಕೋರದೆ ಇವೆರಡರಿಂದಲೂ ನಮ್ಮ ಮಾರ್ಗವನ್ನು ತಿದ್ದಿಕೊಳ್ಳುವುದಕ್ಕೆ ಯತ್ನಿಸುತ್ತಾ ನ್ಯಾಯವಾದ ಕೆಲಸಗಳನ್ನೇ ಮಾಡುತ್ತಿರಬೇಕು. ಮನುಷ್ಯನು ಒಂದು ಕಾಲದಲ್ಲಿ ಅತ್ಯುತ್ಸಾಹದಿಂದ ಕೆಲಸ ಮಾಡುವುದೂ ಮತ್ತೊಂದು ಕಾಲದಲ್ಲಿ ಉತ್ಸಾಹವಿಲ್ಲದೇ ಕೆಲಸಮಾಡದಿರುವುದು ಹೀಗಲ್ಲದೆ ಎಲ್ಲಾ ಕಾಲದಲ್ಲಿಯೂ ಒಂದೇ ಸಮನಾಗಿರಬೇಕು. ಮನುಷ್ಯರು ಧರ್ಮಾರ್ಥ ಕಾಮಗಳನ್ನು ಕೋರುವರು. ಅರ್ಥಕ್ಕೆ ಧರ್ಮವೇ ಮೂಲವು. ಕಾಮವೇ ಅರ್ಥದಫಲವು. ಅರ್ಥವನ್ನಾಶಿಸುವ ನರನು ಧರ್ಮವನ್ನು ಬಿಡಬಾರದು. ಕಾಮವನ್ನು ಉಪಯೋಗಿಸುವಲ್ಲಿ ಮನುಷ್ಯನು ಧರ್ಮಾರ್ಥಗಳನ್ನು ಅತಿಕ್ರಮಿಸಬಾರದು. ಫಲಾಭಿಸಂಧಿಯು ಧರ್ಮಕ್ಕೆ ಮಾಲಿನ್ಯವು. ಕೂಡಿಡುವುದೇ ಅರ್ಥಾರ್ಜನೆಯ ಮಾಲಿನ್ಯವು. ಈ ದೋಷ

ಗಳನ್ನು ತೊಲಗಿಸಿದಲ್ಲಿ ಅವೆರಡೂ ಶುಭಪ್ರದಗಳಾಗುವುವು. ಸತ್ಯವನ್ನು ಕುರಿತು ಭೀಷ್ಮನಿಂತು ಹೇಳಿದನು. ‘‘ಸತ್ಯವು ಸನಾತನವಾದ ಧರ್ಮವು. ಸತ್ಯಕ್ಕೆ ಭಕ್ತಿಯಿಂದ ಎಲ್ಲರೂ ನಮ್ರರಾಗಬೇಕು. ಸತ್ಯವು ಉತ್ಕೃಷ್ಟವಾದ ಶರಣವು. ಸತ್ಯವೇ ಧರ್ಮವು, ಸತ್ಯವೇ ತಪಸ್ಸು, ಸತ್ಯವೇ ಯೋಗವು, ಸತ್ಯವು ಸನಾತನವಾದ ಬ್ರಹ್ಮವು, ಸತ್ಯವು ಅತಿಶ್ರೇಷ್ಠವಾದ ಕರ್ಮವು, ಸರ್ವವೂ ಸತ್ಯದಲ್ಲೇ ಪ್ರತಿಷ್ಠಿತವಾಗಿರುವುದು. ಸಮತ್ವವು, ದಮೆ, ಕ್ಷಮೆ, ಲಜ್ಜೆ, ತಾಳ್ಮೆ, ಸೌಮ್ಯತ್ವ, ತ್ಯಾಗ, ಧ್ಯಾನ, ಆರ್ಯತೆ, ಧೈರ್ಯ, ದಯೆ, ಅಹಿಂಸೆ ಎಂಬಿವೆಲ್ಲವೂ ಸತ್ಯಸ್ವರೂಪಗಳು. ಇವೆಲ್ಲವೂ ಹೇಗೆ ಸತ್ಯಸ್ವರೂಪಗಳಾದುವೆಂಬ ರೀತಿಯನ್ನು ಸ್ಪಷ್ಟಪಡಿಸುವುದಕ್ಕಾಗಿ ಭೀಷ್ಮನು ಮತ್ತೆ ಹೀಗೆ ಹೇಳಿದನು. ಸತ್ಯಕ್ಕಿಂತಲೂ ಹೆಚ್ಚಾದ ಧರ್ಮವಿಲ್ಲ. ಅಸತ್ಯಕ್ಕಿಂತ ಹೆಚ್ಚಾದ ಪಾಪವೂ ಇಲ್ಲ. ಸತ್ಯವೇ ನ್ಯಾಯಕ್ಕೆ ತವರ್ಮನೆ. ಮೊದಲು ಅಶ್ವಮೇಧಸಹಸ್ರವನ್ನು ಒಂದು ಪಕ್ಕದಲ್ಲಿಯೂ ಸತ್ಯವೊಂದನ್ನೇ ಒಂದುಪಕ್ಕದಲ್ಲಿಯೂ ತ್ರಾಸಿನಲ್ಲಿಟ್ಟು ತೂಗಲು ಸತ್ಯವೇ ಭಾರವಾಗಿ ಕಾಣಬಂದಿತು’’ ಹೀಗೆ ಹೇಳಿದ ಭೀಷ್ಮನ ಉಪನ್ಯಾಸವನ್ನು ಹಿಂದೂದೇಶದ ಬಾಲಕರೆಲ್ಲರೂ ಚನ್ನಾಗಿ ಓದಿ ಆತನು ಹೇಳಿದ ಕ್ರಮದಲ್ಲಿ ಅನುಷ್ಠಾನದಲ್ಲಿ ತರಬೇಕು. ಅಸತ್ಯವು ಮನುಷ್ಯನ ಸ್ವಭಾವವನ್ನೇ ಕೆಡಿಸಿ ಅವನನ್ನು ಪರಮನೀಚನನ್ನಾಗಿ ಮಾಡುವುದು. ದ್ರೋಹಮಾಡುವುದರಿಂದ ಬಾಲಕರು ಅವಮಾನವನ್ನು ಹೊಂದಿ ನೀಚರಾಗಿ ಪರಮನಿಂದ್ಯರಾಗುವರು. ಅಸತ್ಯಹೇಳುವವನೂ ವಂಚನೆಮಾಡುವವನೂ ನಿಜವಾದ ಹಿಂದುವೇ ಅಲ್ಲ. ಆರ್ಯನೂ ಆಗಲಾರನು.

ಪ್ರಪಂಚದಲ್ಲಿ ಮನುಷ್ಯರು ಅನೇಕ ಕಷ್ಟಗಳನ್ನು ಅನುಭವಿಸುತ್ತಿರುವರಷ್ಟೆ. ಅಜ್ಞಾನವೇ ಈ ಕಷ್ಟಗಳಿಗೆ ಮೂಲವು. ಜನಗಳು ಸುಖಕ್ಕಾಗಿ ಬಾಹ್ಯವಸ್ತುಗಳನ್ನು ಆಶಿಸುವುದು ತಪ್ಪು. ಮನೋವ್ಯಾಪಾರಗಳನ್ನು ತಿಳಿದು ಶಾಂತಿಯನ್ನು ಬಿಟ್ಟು ಬೇರೆ ಏನನ್ನೂ ಹೊಂದದಿರುವ ಆತ್ಮನನ್ನು ಪರಮಾತ್ಮನನ್ನಾಗಿ ಚನ್ನಾಗಿ ತಿಳಿದು ಲೌಕಿಕ ವಿಷಯಗಳ ಮೇಲೆ ಆಶೆಯನ್ನು ಬಿಟ್ಟಲ್ಲಿ ಸೌಖ್ಯವುಂಟಾಗುವುದು. ಮನುಷ್ಯರು ದಾರಿದ್ರ್ಯಕ್ಕೆ ಹೆಚ್ಚಾಗಿ ಭಯಪಡುತ್ತಾರೆ. ಆದರೆ ನಿಜವಾಗಿಯೂ ಅದು ನಮಗೆ ಬಾಹ್ಯವಸ್ತುಗಳಿಲ್ಲದಂತೆಮಾಡಿ ತನ್ಮೂಲಕ ಉಂಟಾಗುವ ಅನರ್ಥಗಳನ್ನು ನಮಗೆ ತಪ್ಪಿಸುತ್ತದೆ. ಅದು ಅನೇಕ ವಿಚಾರಗಳನ್ನೂ ಶ್ರಮೆಗಳನ್ನೂ ಇಲ್ಲದಂತೆ ಮಾಡುವುದು. ಈ ವಿಷಯದಲ್ಲಿ ಭೀಷ್ಮನಿಂತುಹೇಳಿದನು. ‘‘ಆತ್ಮನಲ್ಲಿ ಸೌಖ್ಯಹೊಂದುತ್ತಾ ಯಾವವಸ್ತು

ವಿನ ಮೇಲೂ ಕೋರಿಕೆಯಿಲ್ಲದವನಿಗೆ ಈ ಲೋಕದಲ್ಲಿ ಅತ್ಯಂತ ದಾರಿದ್ರ್ಯವೇ ಸುಖಪ್ರದವು. ಅದೇ ಪಥ್ಯವು, ಅದೇ ಸಕಲ ಸೌಖ್ಯಗಳಿಗೂ ಮೂಲವು, ಅದು ನಿರಪಾಯವಾದದು. ನಿಷ್ಕಂಟಕವಾದ ಈ ಪಥವನ್ನು ರಾಗಯುಕ್ತರಾದವರು ಹೊಂದುವುದು ಅಸಾಧ್ಯವೇ ಸರಿ. ಆದರೆ ಈ ಪಥವು ವಿತೃಷ್ಣರಾದವರಿಗೆ ಅತ್ಯಂತ ಸುಲಭವಾದುದು. ಪರಿಶುದ್ಧಚರಿತನಾಗಿ ವಿರಕ್ತನಾದ ದರಿದ್ರನಿಗೆ ಸಮಾನನಾದ ಮನುಷ್ಯನು ಮೂರುಲೋಕದಲ್ಲಿಯೂ ಕಾಣಲ್ಪಡನು. ದಾರಿದ್ರ್ಯವನ್ನೂ ಪ್ರಭುತ್ವವನ್ನೂ ತಕ್ಕಡಿನೆಲ್ಲಿಟ್ಟು ತೂಗಲಾಗಿ ದಾರಿದ್ರ್ಯವೇ ಭಾರವಾದುದಾಗಿ ಗುಣಾಧಿಕ್ಯದಿಂದ ಪ್ರಕಾಶಿಸಿತು. ಇಂತಹ ಯೋಚನೆಯುಂಟಾಗುವುದಕ್ಕೆ ಆಶೆಗಳು ನಾಶಹೊಂದಬೇಕು.''

ಈ ವಿಷಯದಲ್ಲಿ ಆಶಾಪಾಶ ವಿಮುಕ್ತನಾದ ಮಂಕಿ ಎಂಬವನು ಹೇಳಿದ ಮಾತುಗಳನ್ನೂ ತಿಳಿಯಬಹುದು. ಆತನು ಮೊದಲು ಧನಾಶಾಭರಿತನಾಗಿ ಅದನ್ನು ಸಂಪಾದಿಸಲು ಅನೇಕಕಾಲ ಯತ್ನಿಸಿದಾಗ್ಯೂ ಎಲ್ಲಿಯೂ ಅದನ್ನು ಹೊಂದದಿರುವನಾಗಿ ಅದಕ್ಕಾಗಿ ಬಹಳ ಬೇಸರಹೊಂದಿ ನೇಗಲಿಗೆ ಕಟ್ಟುವುದಕ್ಕಾಗಿ ಇದ್ದ ಹಣದಿಂದ ಎರಡು ಪಡ್ಡೆಗಳನ್ನು ಕೊಂಡುಕೊಂಡು ಬರುತ್ತಾ ಅವುಗಳನ್ನು ಓಡಿಸಲು ಅವು ಲಂಘಿಸಿ ಹಾಗೆಯೇ ಓಡುತ್ತಾ ಎದುರಾಗಿ ಬರುತ್ತಿದ್ದ ಒಂದು ಒಂಟೆಯ ಹಗ್ಗಕ್ಕೆ ಸಿಲುಕಿ ಅವೆರಡೂ ಸತ್ತವು. ಅದನ್ನು ನೋಡಿ ಆ ವೈಶ್ಯನು ಬಹುವಾಗಿ ವ್ಯಥೆಹೊಂದಿ ಕೊನೆಗೆ ತೃಷ್ಣಾಬಂಧವಿಮುಕ್ತನಾಗಿ ಹೀಗೆಂದು ಹೇಳತೊಡಗಿದನು. ‹‹ಸುಖವನ್ನಪೇಕ್ಷಿಸುವ ಮನುಷ್ಯನು ಆಶೆಯನ್ನು ಬಿಟ್ಟುಬಿಡಬೇಕು. ಕೋರುವವುಗಳನ್ನೆಲ್ಲಾ ಹೊಂದುವ ಮನುಷ್ಯನಿಗಿಂತಲೂ ಕೋರಿಕೆಗಳೆಲ್ಲವನ್ನೂ ಬಿಡತಕ್ಕವನೇ ಉತ್ತಮನೆಂದು ಪೂರ್ವದಲ್ಲಿ ಶುಕನು ಹೇಳಿರುವನು. ನನ್ನ ಮನಸ್ಸೇ! ಇದುವರೆಗೂ ನೀನು ಆಶೆಗೆ ದಾಸನಾಗಿದ್ದೆ. ಇನ್ನು ಅದರಿಂದ ವಿಮುಕ್ತನಾಗಿ ಶಾಂತಿಸುಖವನ್ನು ಅನುಭವಿಸು. ಇದುವರೆಗೂ ನಾನು ನಿದ್ರಿಸಿದೆನು. ಇನ್ನು ಎಚ್ಚರಗೊಳ್ಳುವೆನು. ಕಾಮವೇ! ಇನ್ನು ನಿನ್ನಿಂದ ನಾನು ವಂಚಿತನಾಗೆನು. ಯಾವ ವಸ್ತುವಿನ ಮೇಲೆ ನಿನ್ನ ಕಟಾಕ್ಷವು ಬಿದ್ದಿತೊ ಅದನ್ನು ಹೊಂದುವುದು ಸುಕರವೇ ದುಷ್ಕರವೇ ಎಂದು ಸ್ವಲ್ಪವೂ ಯೋಚಿಸದೆ ನನ್ನನ್ನು ಅದರ ಹಿಂದೆ ತಿರುಗುವಂತೆ ಮಾಡಿದೆ. ನೀನು ತಿಳುವಳಿಕೆಯಿಲ್ಲದವನು; ಹುಚ್ಚನು. ಯಾವಾಗಲೂ ಜ್ವಲಿಸುತ್ತಾ ಎಷ್ಟು ಆಹುತಿಗಳನ್ನು ಕೊಟ್ಟಾಗ್ಯೂ ತೃಪ್ತಿಪಡದಿರುವ ವೀತಿಹೋತ್ರನ ತೆರದಲ್ಲಿ ನೀನು ಅತೃಪ್ತನು. ಆಕಾಶವನ್ನು

ಭರ್ತಿಮಾಡುವುದುಹೇಗೆ ಅಸಾಧ್ಯವೋ ಹಾಗೆಯೇ ನಿನ್ನನ್ನು ತುಂಬುವುದೂ ಸಾಧ್ಯವಲ್ಲ. ನನ್ನನ್ನು ಶೋಕಸಾಗರದಲ್ಲಿ ಮುಳುಗಿಸುವಿಕೆಯೇ ನಿನ್ನ ಅಭಿಲಾಷೆಯು. ಈ ದಿನ ಮೊದಲ್ಗೊಂಡು ನನಗೆ ನಿನ್ನ ವಿಯೋಗ ಉಂಟಾಯಿತು. ಇಂದು ಮೊದಲು ನಾನು ನಿನ್ನ ಸಹವಾಸದಲ್ಲಿರಲಾರೆನು. ನಿನ್ನನ್ನೂ ನಿನ್ನ ಪರಿವಾರವನ್ನೂ ಇನ್ನು ಸ್ಮರಣೆಮಾಡೆನು. ನಿನ್ನನ್ನೂ ಮನಸ್ಸಿನಲ್ಲಿರುವ ಕಾಮುಗಳನ್ನೂ ಸಹ ಈಗಲೇ ತ್ಯಜಿಸಿರುವೆನು. ಇಷ್ಟಕ್ಕೆ ಮೊದಲು ಆಶಾಪೂರ್ತಿಯನ್ನು ಕಾಣದೆ ಅನೇಕ ಕಷ್ಟಗಳನ್ನು ಅನುಭವಿಸುತ್ತಿದ್ದ ನಾನು ಈಗ ಚಿತ್ತವಿಶ್ರಾಂತಿ ಹೊಂದಿದೆನು. ನನ್ನ ಶತ್ರುವಾದ ಓ ಕಾಮವೇ, ಇನ್ನು ನಾನು ಪ್ರಶಾಂತವಾದ ಇಂದ್ರಿಯುಗಳೊಡನೆಯೂ ಪೂರ್ಣಕಾಮನಾಗಿಯೂ ಯದೃಚ್ಛಾಲಾಭಸಂತುಷ್ಟನಾಗಿ ಜೀವಿಸುವೆನೇ ಹೊರತು ನಿನಗೆ ತೃಪ್ತಿಯನ್ನುಂಟುಮಾಡುವುದಕ್ಕಾಗಿ ಪ್ರಯತ್ನಮಾಡುವುದಿಲ್ಲ. ನಿನ್ನನ್ನೂ ನಿನ್ನ ಪರಿವಾರವನ್ನೂ ನಾಶಪಡಿಸಿ ನಾನು ಕೂಡಲೆ ಶಾಂತಿದಾಂತಿಕ್ಷಮಾದಿಗಳನ್ನು ಹೊಂದಿ ಮುಕ್ತನಾಗಿರುವೆನು'' ಎಂದು ಮಂಕಿಯು ಹೇಳಿ ಸ್ವಲ್ಪವನ್ನು ಕಳೆದುಕೊಂಡು ಸಮಸ್ತವನ್ನೂ ಹೊಂದಿದನು.

ತೃಷ್ಣಾರಾಹಿತ್ಯವನ್ನು ಜ್ಞಾನದಿಂದ ಹೊಂದಲಾಗುವುದು. ಜ್ಞಾನಕ್ಕೆ ಯೋಗಾಭ್ಯಾಸವು ಸಾಧನವು. ಅದು ದುಷ್ಕರವಾದುದಾದರೂ ಅದನ್ನು ಆವಶ್ಯಕವಾಗಿ ಆಚರಿಸಬೇಕು. ಈ ವಿಷಯದಲ್ಲಿ ಭೀಷ್ಮನು ಹೇಳಿದ ನಿಯಮಗಳು ಆತನ ಕಾಲದಲ್ಲಿ ಹೇಗೋ ಈಗಲೂ ಹಾಗೆಯೇ ಉಪಯೋಗಕರವಾಗಿವೆ. ನಾವು ಅವುಗಳನ್ನು ತಿಳಿಯೋಣ. ‘‘ಯೋಗಾಭ್ಯಾಸವನ್ನು ಮಾಡತಕ್ಕವನು ಮನಸ್ಸಿಗೆ ಅತ್ಯಂತ ವಿಶ್ರಾಂತಿಯುಂಟಾಗುವ ಸ್ಥಳದಲ್ಲಿ ವಾಸಮಾಡುತ್ತಾ ಇಂದ್ರಿಯುಗಳನ್ನು ಜಯಿಸಿ ಪರಮೇಶ್ವರನಲ್ಲಿ ಏಕಾಗ್ರದಿಂದ ಮನಸ್ಸನ್ನು ನಿಲ್ಲಿಸಿ ಧ್ಯಾನಮಾಡಬೇಕು. ಅಂತಹವನು ನೇತ್ರಗಳಿಂದ ರೂಪವನ್ನೂ ಶ್ರೋತ್ರಗಳಿಂದ ಶಬ್ದವನ್ನೂ ಜಿಹ್ವೆಯಿಂದ ರಸವನ್ನೂ ನಾಸಿಕದಿಂದ ಗಂಧವನ್ನೂ ತ್ವಕ್ಕಿನಿಂದ ಸ್ಪರ್ಶವನ್ನೂ ತಿಳಿಯನು. ಯೋಗದಲ್ಲಿ ಸ್ಥೈರ್ಯವು ಹೆಚ್ಚಾಗುತ್ತಿರಲು ಧ್ಯಾನಾರೂಢನಾಗಿ ಯೋಗಿಯು ಎಲ್ಲವನ್ನೂ ತ್ಯಜಿಸುವನು. ಮನಸ್ಸನ್ನು ತೀಕ್ಷ್ಣವಾಗಿಯೂ ಬಲವಾಗಿಯೂ ಮಾಡಿಕೊಂಡು ಆತನು ಇಂದ್ರಿಯ ಸ್ಪರ್ಶದಿಂದ ಸುಖವನ್ನು ಕೊಡತಕ್ಕ ವಿಷಯುಗಳಲ್ಲಿ ಅಭಿಲಾಷೆಯನ್ನು ತ್ಯಜಿಸುವನು. ಹೀಗೆ ಯೋಗಿಯು ಇಂದ್ರಿಯುಗಳೈದನ್ನೂ ಮನಸ್ಸಿನಲ್ಲಿ ಲೀನಮಾಡಿ ಅಚಲವಾದ ಅಂತಹ ಮನಸ್ಸನ್ನು ಬುದ್ಧಿಯಲ್ಲಿ ನಿಲ್ಲಿಸಬೇಕು. ಚಂಚಲವಾದ ವಿಷಯುಗಳ ಮಧ್ಯ

ದಲ್ಲಿ ಪಂಚೇಂದ್ರಿಯಗಳು ಸ್ಥಿರವಾಗಿ ನಿಲ್ಲುವುದಕ್ಕೋಸ್ಕರ ಯಾವಾಗಲೂ ಚಲಿಸುವ ಸ್ವಭಾವವುಳ್ಳ ಮನಸ್ಸನ್ನು ಯೋಗಿಯು ಸ್ವಲ್ಪಸ್ವಲ್ಪವಾಗಿ ಅಭ್ಯಾಸದಿಂದ ನಿರೋಧಿಸಬೇಕು. ಹೃದಯಾಕಾಶದಲ್ಲಿ ತನ್ನ ಮನಸ್ಸನ್ನು ಧ್ಯಾನದಿಂದ ನಿಲ್ಲಿಸಿ ಶರೀರ ಮೊದಲಾದ ಉಪಾಧಿಗಳಿಂದ ಬಿಡುಗಡೆ ಮಾಡಬೇಕು. ನಾನು ಧ್ಯಾನದ ವಿಚಾರವನ್ನು ಮೊದಲು ಹೇಳುವುದು ಏತಕ್ಕೆಂದರೆ ಆದಿಯಲ್ಲಿಯೇ ತನ್ನ ಇಂದ್ರಿಯಗಳನ್ನು ಜಯಿಸಿ ಅವುಗಳನ್ನು ಧ್ಯಾನಮಾರ್ಗದಲ್ಲಿಯೇ ಬಿಡಬೇಕು. ಆರನೆಯ ಇಂದ್ರಿಯವಾದ ಮನಸ್ಸು ಹಾಗೆ ನಿರೋಧಿಸಲ್ಪಟ್ಟಾಗ ಅದು ಮೇಘಜಾಲದ ಮಧ್ಯೆ ಸ್ವೇಚ್ಛೆಯಾಗಿ ಹರಿದಾಡುವ ಮಿಂಚಿನಂತೆ ಯಥೇಷ್ಟವಾಗಿ ಪ್ರಕಾಶಿಸುವುದು. ಮೊದಲು ಮೊದಲು ಧ್ಯಾನಮಾರ್ಗದಲ್ಲಿ ನಿಲ್ಲಿಸಲ್ಪಟ್ಟ ಯೋಗಿಯ ಮನಸ್ಸು ಕಮಲಪತ್ರದ ಮೇಲಿನ ಜಲಬಿಂದುವಿನಂತೆ ನಾಲ್ಕು ಕಡೆಗಳಲ್ಲಿಯೂ ಅಸ್ಥಿರವಾಗಿ ಸುತ್ತುತ್ತಿರುವುದು. ಮನಸ್ಸನ್ನು ಒಂದು ಲಕ್ಷ್ಯದ ಮೇಲೆ ನಿಲ್ಲಿಸಿದುದಾದರೆ ಆ ಮಾರ್ಗದಲ್ಲಿ ಸ್ವಲ್ಪಕಾಲಮಾತ್ರ ನಿಲ್ಲುವುದು. ಲಕ್ಷ್ಯವನ್ನು ಬಿಟ್ಟಾಗ (ವಿಕ್ಷೇಪ ಉಂಟಾದಾಗ) ವಾಯುವೇಗದಿಂದ ಓಡುವುದು. ಮನುಷ್ಯನು ಭಯಪಡದೇ ಶ್ರಮೆಯುಂಟಾಯಿತೆಂದು ಯೋಚಿಸದೇ ಆಲಸ್ಯವನ್ನೂ ಕ್ರೋಧವನ್ನೂ ಬಿಟ್ಟು ತನ್ನ ಮನಸ್ಸನ್ನು ಪುನಃ ಪುನಃ ಧ್ಯಾನದಲ್ಲಿ ನಿಲ್ಲಿಸಬೇಕು. ಮನುಷ್ಯನು ಮೌನವ್ರತವನ್ನು ಹೊಂದಿ ಮನಸ್ಸಿನಲ್ಲಿ ಯೋಗವನ್ನು ಹೊಂದಿದ್ದನಾದರೆ ವಿವೇಚನಜ್ಞಾನವೂ ಕೇಡನ್ನುತಪ್ಪಿಸಿಕೊಳ್ಳುವ ಶಕ್ತಿಯೂ ಸಹ ಅವನಿಗೆ ಉಂಟಾಗುವುವು. ಚಿತ್ತವಿಕ್ಷೇಪದಿಂದ ಇವನಿಗೆ ಅಸಮಾಧಾನವುಂಟಾದಾಗ್ಯೂ ಆ ಅಸಮಾಧಾನವನ್ನು ಲಕ್ಷಿಸದೇ ಪುನಃಪುನಃ ಚಿತ್ತವನ್ನು ಲಕ್ಷ್ಯದಲ್ಲಿ ಸೇರಿಸಬೇಕು. ಯೋಗಿಯು ಎಂದಿಗೂ ನಿರುತ್ಸಾಹಿಯಾಗಬಾರದು. ಪುನಃ ಪುನಃ ಪ್ರಯತ್ನ ಮಾಡುತ್ತಲೇ ಇರುವುದರಿಂದ ಕಾರ್ಯಸಿದ್ಧಿಯುಂಟಾಗುವುದು ತಪ್ಪದು. ಅಲ್ಲದಿದ್ದರೆ ಕಾರ್ಯವು ಸಿದ್ಧಿಸುವುದಿಲ್ಲ. ಈ ಸಿದ್ಧಿಯುಂಟಾದಾಗ ವಸ್ತುತಃ ಪರಮಾತ್ಮ ಸಾಕ್ಷಾತ್ಕಾರವುಂಟಾಗಿ ಬೇರೆ ಇನ್ನಾವುದರಿಂದಲೂ ಉಂಟಾಗದಿರತಕ್ಕ ನಿರತಿಶಯವಾದ ಪರಮಶಾಂತಿಯುಂಟಾಗುವುದು. ಯೋಗದಿಂದ ರಾಗ, ಸಂಗ, ಆಲಸ್ಯ, ಕಾಮ ಕ್ರೋಧಗಳೆಂಬ ಐದು ಅಡ್ಡಿಗಳನ್ನು ದಾಟಿ ಮನುಷ್ಯನು ಮುಕ್ತನಾಗುವನು. ಯೋಗಮಾರ್ಗವು ಯಾರಿಗೂ ಸುಲಭವಾದುದಲ್ಲ. ಪಂಡಿತರಾದ ಬ್ರಾಹ್ಮಣಶ್ರೇಷ್ಠರ ಈ ಉನ್ನತವಾದ ಪಥದಲ್ಲಿ ಸಂಚರಿಸುವುದು ಇತರರಿಗೆ ಕಷ್ಟವು. ಈ ಮಾರ್ಗವು—ಅನೇಕ

ಸರ್ಪಸರೀಸೃಪಯುಕ್ತವಾಗಿ ಎಲ್ಲಾ ಕಡೆಗಳಲ್ಲಿಯೂ ಹಳ್ಳಗೆಳನ್ನುಂಟಾದುದಾಗಿ ದಾಹವನ್ನು ತೀರಿಸಿಕೊಳ್ಳಲು ನೀರಿಲ್ಲದೆ ಅನೇಕ ಕಂಟಕಗಳಿಂದ ಕೂಡಿದುದಾಗಿ ದುರ್ಗಮವಾದ ಭೀಕರಾರಣ್ಯಗಳಿಂದಲೂ ತಸ್ಕರಸಮೂಹಗಳಿಂದಲೂ ಕೂಡಿದುದಾಗಿ ಭಕ್ಷ್ಯವಸ್ತು ಶೂನ್ಯವಾದ ಮತ್ತು ದಾವಾನಲದಗ್ಧ ಮಹೀರುಹಗಳುಳ್ಳ ವನ ಮಧ್ಯದಲ್ಲಿರುವ—ದಾರಿಯನ್ನು ಹೋಲುತಿರುವುದು. ಬಹಳ ಸ್ವಲ್ಪಮಂದಿ ಯೌವನಸ್ಥರು ಮಾತ್ರನೇ ಇಂತಹ ಮಾರ್ಗದಲ್ಲಿ ದೂರಿ ಕ್ಷೇಮವಾಗಿ ಬರಬಲ್ಲರು. ಬ್ರಾಹ್ಮಣೋತ್ತಮರಾದ ಕೆಲವರಿಗೆ ವಿನಾ ಮಿಕ್ಕವರಿಗೆ ಯೋಗಮಾರ್ಗದಲ್ಲಿ ಪ್ರವೇಶಿಸಿ ಕುಶಲವಾಗಿ ಬರುವುದು ಬಹಳ ಕಷ್ಟ. ಯಾವನಾದರೆ ಯೋಗಮಾರ್ಗದಲ್ಲಿ ಸ್ವಲ್ಪದೂರ ಮುಂದೆಹೊರಟು ಹಿಂತಿರುಗುವನೋ ಅವನನ್ನು ದೊಡ್ಡ ಪಾಪಿಷ್ಠನೆಂದು ಹೇಳುತ್ತಾರೆ. ಅಸಿಧಾರೆಯಂತೆ ಬಹು ನಿಶಿತವಾದ ಯೋಗಧಾರಣೆಯು ಪೂತಾತ್ಮರಾದ ಜನಗಳಿಗೆ ಸುಲಭವೇ ಹೊರತು ಅಪರಿಶುದ್ಧಚಿತ್ತರಿಗೆ ಅಶಕ್ಯವೇ ಸರಿ'' ಎಂದು ಹೇಳಿ ಭೀಷ್ಮನು ಧರ್ಮತನಯನಿಗೆ ಕರ್ಮ, ಮಾಯೆ, ಮನುಷ್ಯ, ಈಶ್ವರತತ್ತ್ವ ಈ ಮೊದಲಾದ ಅನೇಕ ವೇದಾಂತಾರ್ಥರಹಸ್ಯಗಳನ್ನು ಕುರಿತು ಉಪನ್ಯಾಸಮಾಡಿ ತಿಳಿಸಿದನು. ಅವನ್ನೆಲ್ಲಾ ಶಾಂತಿಯಿಂದ ಓದಬೇಕು. ಇಲ್ಲಿ ಅವುಗಳಲ್ಲಿ ಕೆಲವನ್ನುಮಾತ್ರ ವಿವರಿಸಿ ಈ ಉತ್ತಮವಾದ ಇತಿಹಾಸದಲ್ಲಿ ಎಷ್ಟು ಹೆಚ್ಚು ವಿಷಯಗಳು ಎಷ್ಟು ಪ್ರೌಢಮಹಿಮೆಯಿಂದ ವಿವರಿಸಲ್ಪಟ್ಟಿರುವುವೋ ಎಂಬುದನ್ನು ತಿಳಿಯೋಣ. ಮನುಷ್ಯರು ಮಾಡುವ ಕಾರ್ಯಗಳು ಕಾರ್ಯಕಾರಣಭಾವದಿಂದ ಒಂದರಿಂದ ಮತ್ತೊಂದು ಉಂಟಾಗುತ್ತಾ ಅನುಸ್ಯೂತವಾದ ಸಂಬಂಧವನ್ನುಂಟಾಗಿ ಕರ್ತನನ್ನು ಬಂಧಿಸುತ್ತಿರುವುವು. ಇಂತಹ ಸಂಬಂಧವನ್ನು ಕರ್ಮವೆಂದು ಹೇಳುವರು. ಈ ಕರ್ಮವು ಆಶಾಮೂಲವಾಗಿ ಸಂಗರೂಪವಾಗಿರುವುದು. ಈ ಸಂಗವೆಂಬುದೇ ಪ್ರಪಂಚದಲ್ಲಿ ಬಂಧಕರವು. ಆಶೆಯು ಮನುಷ್ಯರಿಗೆ ಸಹಜವಾದಗುಣವು. ಆ ಆಶೆಗಳು ನಮ್ಮನ್ನು ವಿಷಯಗಳೊಡನೆ ಸೇರಿಸುವುವು. ವಿಷಯಗಳು ದೊರಕುವ ಸ್ಥಳದಲ್ಲಿ ಪುನಃಪುನಃ ನಾವು ಹುಟ್ಟುತಿರುವೆವು. ಮನುಷ್ಯನು ಯಾವ ಶರೀರದೊಡನೆ ಯಾವ ಕರ್ಮವನ್ನು ಆಚರಿಸುವನೋ ಅವುಗಳ ಫಲವನ್ನು ಆಯಾ ಶರೀರಯುಕ್ತನಾಗಿ ಅನುಭವಿಸುವನು. ವಾಕ್ಕಿನಿಂದ ಯಾವ ಕರ್ಮವನ್ನಾಚರಿಸುವನೋ ಅವುಗಳ ಫಲಗಳನ್ನು ವಾಗ್ರೂಪವಾಗಿಯೇ ಅನುಭವಿಸುವನು. ಮನಸ್ಸಿನಿಂದ ಯಾವ ಕರ್ಮವನ್ನಾಚರಿಸು

ವನೋ ಅವುಗಳ ಫಲಗಳನ್ನು ಮನಸ್ಸಿನಿಂದಲೇ ಅನುಭವಿಸುವನು. ಕರ್ಮಫಲಾಭಿನಿವಿಷ್ಟಹೃದಯನಾಗಿ ಕರ್ಮಫಲಗಳನ್ನು ಕೋರುತ್ತಾ ಮನುಷ್ಯನು ಎಂತಹ ಕರ್ಮಗಳನ್ನಾಚರಿಸುವನೋ ಅಂತಹ ಕರ್ಮಗುಣಗಳಿಗನುರೂಪವಾದ ಫಲಗಳನ್ನು ಶುಭಗಳನ್ನಾಗಲೀ ಅಶುಭಗಳನ್ನಾಗಲೀ ಅನುಭವಿಸುವನು. ಮೀನು ಪ್ರವಾಹವನ್ನು ಹುಡುಕಿಕೊಂಡು ಹೋಗುವ ರೀತಿಯಲ್ಲಿ ಪೂರ್ವಜನ್ಮಕೃತಕರ್ಮವು ಕರ್ತನನ್ನು ಹೊಂದುತಿರುವುದಾದಕಾರಣ ಶರೀರಿಯು ಸುಕೃತಗಳಿಂದ ಸುಖವನ್ನೂ ದುಷ್ಕೃತಗಳಿಂದ ದುಃಖವನ್ನೂ ಅನುಭವಿಸುವನು.

ಹಿತ್ತಾಳಿಯು ಬಂಗಾರದಿಂದಲೂ ಬೆಳ್ಳಿಯಿಂದಲೂ ಮುಲಾಮುಮಾಡಲ್ಪಟ್ಟು ಅವುಗಳ ವರ್ಣವನ್ನು ಹೊಂದುವ ರೀತಿಯಲ್ಲಿ ಸಾಮಾನ್ಯಮನುಷ್ಯನು ಪೂರ್ವಜನ್ಮಗಳಲ್ಲಿ ಮಾಡಿದ ಕರ್ಮಗಳಿಗೆನುಸಾರವಾಗಿ ಆಯಾ ಕರ್ಮಗಳಿಗನುಗುಣವಾದ ಗುಣಗಳನ್ನು ಹೊಂದುವನು. ಬೀಜವಿಲ್ಲದೆ ಯಾವುದೂ ಮೊಳೆಯುವುದಿಲ್ಲ. ಅದರಂತೆಯೇ ಸುಖಜನಕವಾದ ಕರ್ಮಗಳನ್ನು ಮಾಡದ ನರನು ಸುಖವನ್ನು ಅನುಭವಿಸಲಾರನು. ಮನುಷ್ಯನು ಕೆಲವು ವೇಳೆಗಳಲ್ಲಿ ತನ್ನ ಸುಕೃತಕ್ಕೆ ಅನುಸಾರವಾಗಿ ಶುಭವನ್ನೂ ಕೆಲವುವೇಳೆಗಳಲ್ಲಿ ದುಷ್ಕರ್ಮಕ್ಕನುಸಾರವಾಗಿ ಅಶುಭವನ್ನೂ ಕೆಲವುವೇಳೆ ಶುಭಾಶುಭ ಮಿಶ್ರಫಲವನ್ನೂ ಹೊಂದುತಿರುವನು. ಪುಣ್ಯವಾಗಲೀ ಪಾಪವಾಗಲೀ ಕರ್ಮಕ್ಕೆ ಯಾವಾಗಲೂ ನಾಶವಿಲ್ಲ. ಆ ಫಲಗಳನ್ನು ಅನುಭವಿಸದಿದ್ದರೆ ತೀರದು. ಮನುಜನು ಸಂಸಾರಾರ್ಣವಮಗ್ನನಾಗಿ ದುಃಖಗಳನ್ನು ಅನುಭವಿಸುತ್ತಾ ಅವುಗಳಿಂದ ವಿಮುಕ್ತನಾಗುವವರೆಗೂ ಪುಣ್ಯಕರ್ಮದ ಫಲವು ಪ್ರಕಾಶವಾಗದೇ ಗೂಢವಾಗಿರುವುದು. ದುಃಖಾನುಭವವು ತೀರಿದನಂತರ ಸುಖವನ್ನನುಭವಿಸುವನು. ಇದೇಪ್ರಕಾರ ಸುಕೃತಫಲಗಳನ್ನು ಹೊಂದಿದನಂತರದಲ್ಲಿಯೂ ಪುನಃ ಮಾಡಿದ ಪಾಪಫಲಗಳನ್ನು ಅನುಭವಿಸುವನು. ದಮ, ಕ್ಷಮ, ಧೃತಿ, ತೇಜಸ್ಸು, ತೃಪ್ತಿ, ಸತ್ಯಭಾಷಣ, ಅದಂಭ, ಅಹಿಂಸೆ, ದುರಾಚಾರ ಪರಾಙ್ಮುಖತೆ, ದಕ್ಷತೆ ಎಂಬಿವು ಸುಖವನ್ನುಂಟುಮಾಡುವುವು. ಮನುಷ್ಯನಿಗೆ ಸುಕೃತ ದುಷ್ಕೃತಫಲಗಳು ಶಾಶ್ವತಗಳಲ್ಲ. ಒಬ್ಬನು ಮಾಡಿದ ಪುಣ್ಯಪಾಪಕರ್ಮಗಳ ಫಲಗಳನ್ನು ಮತ್ತೊಬ್ಬನು ಅನುಭವಿಸಲಾರನು. ತಾನು ಮಾಡಿದ ಕರ್ಮಗಳನ್ನು ತಾನೇ ಅನುಭವಿಸಬೇಕು. ಭೀಷ್ಮಪ್ರೋಕ್ತವಾದ ಮನುಬೃಹಸ್ಪತಿಸಂವಾದದಲ್ಲಿ ಪರಮಾತ್ಮನನ್ನೂ ಮತ್ತು ಜೀವಾತ್ಮನನ್ನೂ ಕುರಿತ ಆರ್ಯರ

ಸಿದ್ಧಾಂತಗಳಲ್ಲಿನ ಪ್ರಧಾನಾಂಶಗಳು ವಿವರಿಸಲ್ಪಟ್ಟಿರುವುವು:—ಸನಾತನವಾದ ಅವ್ಯಯವಾದ ಒಂದು ಪರಬ್ರಹ್ಮವಸ್ತುವಿನಿಂದ ಪ್ರಕೃತಿವಿಕಾರಗಳಾದ ಪಂಚಮಹಾಭೂತಗಳು ಕ್ರಮವಾಗಿ ಉದ್ಭವಿಸಿದುವು. ಅವಕ್ಕೆ ಮೂಲವು ಅದ್ವಿತೀಯವಾದ ವಸ್ತುವು. ಅದು ಸರ್ವವಸ್ತುಗಳಿಗೂ ಕಾರಣವು. ಉಳಿದ ಸಮಸ್ತವೂ ಕಾರ್ಯವು. ಇದೇ ಅವ್ಯಕ್ತವಾದ ಪರಬ್ರಹ್ಮವಸ್ತು. ಮನುಷ್ಯನಲ್ಲಿ ವ್ಯಕ್ತಗೊಳ್ಳುವ ಜೀವಾತ್ಮನಿಗೂ ಈ ಅವ್ಯಕ್ತಾತ್ಮನೇ ಆಧಾರವು. ಇವನ ದೆಸೆಯಿಂದ ಬುದ್ಧಿಯೂ ಬುದ್ಧಿಯಿಂದ ಮನಸ್ಸೂ ಪಂಚೇಂದ್ರಿಯಗಳೂ ಉಂಟಾದುವು. ಇವೈದರಿಂದ ಜೀವಾತ್ಮನು ಪಂಚಭೂತಾತ್ಮಕವಾದ ಉಪಾಧಿಯಲ್ಲಿ ಅಭಿಮಾನಿಯಾಗಿ 'ದೇಹಿ' ಎನಿಸಿಕೊಳ್ಳುವನು. ಸೂರ್ಯನು ತನ್ನ ಕಿರಣಗಳನ್ನು ಪ್ರಸರಿಸುವಂತೆ ಜೀವನು ಇಂದ್ರಿಯಗಳನ್ನು ಪ್ರಸರಿಸುವನು. ತನ್ಮೂಲಕ ವಿಷಯಗಳನ್ನು ಗ್ರಹಿಸುವನು. ಮನಸ್ಸು ವಿಷಯಗಳನ್ನು ಗ್ರಹಿಸುವುದು, ಮತ್ತು ಅವುಗಳ ಗುಣಭೇದಗಳಿಂದ ಅವುಗಳವಿವೇಚನೆಯನ್ನೂ ಮಾಡುವುದು. ಮನಸ್ಸಿನಲ್ಲಿ ಉಂಟಾಗುವ ವಸ್ತುಜ್ಞಾನವು ವಸ್ತುಗುಣನಿಕರ ಮಾತ್ರವೇ ಹೊರತು ಸಾಕ್ಷಾತ್ತಾದ ವಸ್ತುಜ್ಞಾನವು ಮನಸ್ಸಿಗುಂಟಾಗದು. ಪ್ರಜ್ಞೆಯು ವಸ್ತುಗುಣಸಮುದಾಯವನ್ನೇ ಯಾವಾಗಲೂ ಮಥನಮಾಡುತ್ತಿರುವುದು. ಆ ಗುಣಗಳನ್ನು ಬಿಟ್ಟು ಅವಕ್ಕೆ ಆಧಾರವಾದ ವಸ್ತುಮೂಲವನ್ನು ಪ್ರಜ್ಞೆಯು ತಿಳಿದುಕೊಂಡರೆ ಆತ್ಮಶಕ್ತಿಯನ್ನು ವ್ಯಕ್ತಗೊಳಿಸುವ ಸಾಮರ್ಥ್ಯವು ಆ ಪ್ರಜ್ಞೆಗೆ ಉಂಟಾಗುವುದು. ಕೇವಲ ಬುದ್ಧಿಶಕ್ತಿಯಾಗಲೀ ವಿಶೇಷ ಪರಿಶ್ರಮಹೊಂದಿದ ಮನಸ್ಸೇ ಆಗಲಿ ಪರಮಾತ್ಮನನ್ನು ತಿಳಿಯಲಾರದು. ಅದು ವಾಕ್ಕಿಗೆ ಸಿಕ್ಕಲಾರದುದರಿಂದ ವಾಙ್ಮೂಲಕ ಅದನ್ನು ತಿಳಿಯಲು ಸಾಧ್ಯವಲ್ಲ. ಅದು ಯಾವ ರೀತಿಯಲ್ಲಿ ಬಾಹ್ಯವಸ್ತುಗಳನ್ನು ಸೇರಿರುವುದೋ ಅದಕ್ಕೆ ಪ್ರತಿಲೋಮವಿಧಾನದಿಂದ ಅದನ್ನು ಹೊಂದಬಹುದು. ಹೇಗೆಂದರೆ:—ಇಂದ್ರಿಯಗಳನ್ನು ವಿಷಯಪರಾಙ್ಮುಖಗಳನ್ನಾಗಿಮಾಡಿ ಮನಸ್ಸಿನಲ್ಲಿ ಲೀನಮಾಡಬೇಕು. ಮನಸ್ಸನ್ನು ಗುಣರೂಪಗಳಿಂದ ಪರಾಙ್ಮುಖವನ್ನಾಗಿ ಮಾಡಿ ಅದೇರೀತಿಯಲ್ಲಿ ಬುದ್ಧಿಯಲ್ಲಿ ಸೇರಿಸಬೇಕು. ಆಗ ಮನೋಗೋಚರಗಳಾದ ವಸ್ತುಗುಣಗಳನ್ನು ಚಿಂತಿಸುವುದನ್ನು ಬಿಟ್ಟು ಬುದ್ಧಿಯು ಆತ್ಮಾವಲೋಕನವನ್ನು ಮಾಡುವುದು. ಈರೀತಿಯಲ್ಲಿ ಪರಾಙ್ಮುಖತೆಯೇ ಯೋಗವೆನ್ನಲ್ಪಡುವುದು. ಇಂದ್ರಿಯಗಳು ಮನಸ್ಸನ್ನು ನಿಶ್ಚಲವಾಗಿರುವಂತೆ ಮಾಡಲಾರವು. ಮನಸ್ಸು ಬುದ್ಧಿಯನ್ನೂ

ಬುದ್ಧಿಯು ಆತ್ಮನನ್ನೂ ತಿಳಿಯಲಾರವು. ಆತ್ಮನು ಇವೆಲ್ಲವನ್ನೂ ತಿಳಿಯಬಲ್ಲನು. ಮನಸ್ಸು ಇಂದ್ರಿಯಗಳನ್ನು ಸ್ವವಶವನ್ನಾಗಿಮಾಡಿಕೊಳ್ಳಬೇಕು. ಬುದ್ಧಿಯು ಮನಸ್ಸನ್ನು ಶುದ್ಧಿಮಾಡಬೇಕು. ವಿವೇಕವು ಬುದ್ಧಿಯನ್ನು ಶುದ್ಧಿಮಾಡಬೇಕು. ಹೀಗಾದಲ್ಲಿ ಆತ್ಮನನ್ನು ನೋಡಲಾಗುವುದು. ಮನಸ್ಸು ಬಹಿರ್ಮುಖವಾಗಿ ಪಂಚೇಂದ್ರಿಯಗಳ ಮೂಲಕವಾಗಿ ವಿಷಯೋನ್ಮುಖವಾಗುವುದು. ಇದರಿಂದ ದುಃಖವುಂಟಾಗುವುದು. ಅಥವಾ ಮನಸ್ಸು ಅಂತರ್ಮುಖಿಯಾಗಿ ಬುದ್ಧಿಯದ್ವಾರಾ ಆತ್ಮನನ್ನು ವರಿಸುವುದು. ಇದರಿಂದ ಆನಂದವುಂಟಾಗುವುದು. ಆತ್ಮನಿಗೆ ಕೇವಲ ಸಾಕ್ಷಿತ್ವವೇ ವಿನಾ ಕರ್ತೃತ್ವವಿಲ್ಲ. ಶ್ರೋತ್ರೇಂದ್ರಿಯಕ್ಕೆ ಚೈತನ್ಯವನ್ನು ಕೊಟ್ಟು ಅದರಮೂಲಕ ಶಬ್ದಗ್ರಹಣ ಮಾಡುವುದು. ಚಕ್ಷುಸ್ಸಿಗೆ ಚೈತನ್ಯವನ್ನು ಕೊಟ್ಟು ನೋಡುವುದು. ಶರೀರದಮೂಲಕ ಜ್ಞಾನಮಯವಾದ ನಿಜಸ್ವರೂಪವನ್ನು ತೋರ್ಪಡಿಸಿಕೊಳ್ಳುವುದು. ಆದುದರಿಂದ ಕಾರ್ಯಕ್ಕೆ ದೇಹಾವಯವಗಳು ಕರ್ತೃವಾಗಲಾರವು. ಆತ್ಮನೇ ಸಮಸ್ತ ಕರ್ಮಗಳಿಗೂ ಕರ್ತನು. ಆದರೂ ಧೂಳಿನಿಕರವನ್ನು ತೆಗೆದುಕೊಂಡುಹೋಗುವ ವಾಯುವು ಅದರಿಂದ ಕಲುಷಿತವಾಗದೇ ಬೇರೆಯಾಗಿರುವಹಾಗೆ ಆತ್ಮನೂ ಕರ್ಮಗಳಿಂದ ಕಲುಷಿತನಾಗದೇ ನಿಜಸ್ವಭಾವದಿಂದ ಕೂಡಿದ್ದವನಾಗಿ ವ್ಯಾಕೃತಿಚೈತನ್ಯಕ್ಕಿಂತ ಭಿನ್ನನಾಗಿ ಕೇವಲ ಸಾಕ್ಷಿಭೂತನಾಗಿ ಪ್ರಕಾಶಿಸುವನು. ಕಾರ್ಯಗಳೆನ್ನಲ್ಪಡುವವುಗಳಿಗೆಲ್ಲಕ್ಕೂ ನಾನಾತ್ವವುಂಟಾಗಿರುವುದಕ್ಕೂ ಕಾಲವೇ ಕಾರಣವು.

ಅನುಶಾಸನಿಕಪರ್ವ.—ಮತ್ತೆಯು ಗಾಂಗೇಯನು ಹೇಳತೊಡಗಿದನೇನೆಂದರೆ:—ವತ್ಸನೇ ! ಮತವಿಚಾರದಲ್ಲಿ ಬೃಹಸ್ಪತಿಯು ಮನುವಿಗೆ ಹೇಳಿದುದನ್ನು ಈಗ ಹೇಳುತ್ತೇನೆ ಕೇಳು. ‟ಸರ್ವಭೂತಗಳಿಗೂ ಹಿತವನ್ನೆಸಗುವವನು ಉತ್ತಮವಾದ ಪದವಿಯನ್ನು ಹೊಂದುವನು. ಯಾವನು ಸಕಲ ಭೂತಗಳನ್ನೂ ತನ್ನಂತೆಯೇ ತಿಳಿದು ಅವುಗಳೆಲ್ಲದರ ವಿಷಯಗಳಲ್ಲಿ ತನ್ನಂತೆ ವರ್ತಿಸುವನೋ, ಯಾರಾದರೆ ದಂಡಿಸುವುದನ್ನು ಬಿಟ್ಟು ಕ್ರೋಧವನ್ನು ಸಂಪೂರ್ಣವಾಗಿ ಜಯಿಸಿರುವನೋ ಅಂತಹವನು ಸುಖವನ್ನು ಹೊಂದುವನು. ತನಗೆ ಅಹಿತವೆಂದು ತೋರುವ ಕಾರ್ಯವನ್ನು ಮತ್ತೊಬ್ಬನಿಗೆ ಮಾಡಬಾರದು. ಇದೇ ಪರಮ ಧರ್ಮಪಥವು'' ಎಂದು ಭೀಷ್ಮನು ಹೇಳಲು ಆ ನರಪತಿಯು ಈಕಾಲದವರನೇಕರು ಕೇಳುವಂತೆ ಕುರುಪಿತಾಮಹನನ್ನು ಕುರಿತು ಮಾಂಸಭಕ್ಷಣೆಯು ಯುಕ್ತವೇ ಎಂದು ಕೇಳಿದನು. ಆದಕ್ಕೆ ಆತನು ಹೀಗೆಂದನು. ಈ ವಿಷ

ಯವನ್ನು ಕುರಿತು ಋಷಿಗಳು ಅನೇಕವೇಳೆ ಸಂವಾದಮಾಡಿ ಮಾಂಸಭಕ್ಷಣೆಯು ತ್ಯಾಜ್ಯವೆಂದು ಅಭಿಪ್ರಾಯಪಟ್ಟರು. ಮಾಂಸವನ್ನು ತಿನ್ನದೆಯೂ ಪ್ರಾಣಿಗಳನ್ನು ಕೊಲ್ಲದೆಯೂ ವರ್ತಿಸತಕ್ಕವನು ಸರ್ವಭೂತಗಳಿಗೂ ಮಿತ್ರನು. ಅಂತಹವನು ಸರ್ವ ಭೂತಗಳಿಗೂ ಅಧೃಷ್ಯನು, ಎಲ್ಲಜಂತುಗಳಿಂದಲೂ ವಿಶ್ವಾಸ್ಯನು, ಯಾವಾಗಲೂ ಸಾಧುಜನಗಳ ಸ್ತೋತ್ರಕ್ಕೆ ಪಾತ್ರನು. ಇತರಪ್ರಾಣಿಗಳ ಮಾಂಸದಿಂದ ತನ್ನ ಮಾಂಸವನ್ನು ಬೆಳಸಲಪೇಕ್ಷಿಸುವವನು ಕೇಡನ್ನು ಹೊಂದುವನೆಂದು ಧರ್ಮಾತ್ಮನಾದ ನಾರದನು ಹೇಳಿರುತ್ತಾನೆ. ಮೊದಲು ಮಾಂಸವನ್ನು ಭಕ್ಷಿಸತಕ್ಕವನಾಗಿದ್ದು ಅನಂತರ ಬಿಟ್ಟುಬಿಡತಕ್ಕವನಿಗುಂಟಾಗತಕ್ಕ ಪುಣ್ಯವು ಸಕಲ ವೇದಾಧ್ಯಯನದಿಂದಾಗಲೀ ಸಕಲ ಯಜ್ಞಾಚರಣೆಯಿಂದಾಗಲೀ ಉಂಟಾಗಲಾರದು. ಮಾಂಸವು ರುಚಿಹತ್ತಿದಲ್ಲಿ ಅನಂತರ ಅದನ್ನು ಬಿಡುವುದು ದುಷ್ಕರವು. ಸರ್ವಪ್ರಾಣಿಗಳಿಗೂ ಅಭಯಪ್ರದವಾದ ಮಾಂಸಭಕ್ಷಣವರ್ಜನವೆಂಬ ಈ ಉತ್ತಮ ವ್ರತಾನುಷ್ಠಾನಮಾಡುವುದು ಹೆಚ್ಚು ಪ್ರಯಾಸಕರವು. ಎಲ್ಲಾ ಭೂತಗಳಿಗೂ ಅಭಯದಾನವನ್ನು ಮಾಡುವ ವಿದ್ವಾಂಸನು ಲೋಕದಲ್ಲಿ ನಿಜವಾಗಿಯೂ ಪ್ರಾಣದಾತನೆನ್ನಲ್ಪಡುವನು. ಇದನ್ನು ಪರಮಧರ್ಮವೆಂದು ಬುದ್ಧಿವಂತರು ಕೊಂಡಾಡುವರು. ತನ್ನ ಪ್ರಾಣಗಳು ತನಗೆ ಹೇಗೆ ಪ್ರಿಯಗಳೋ ಹಾಗೆಯೇ ಸಕಲಭೂತಗಳಿಗೂ ಅವುಗಳಪ್ರಾಣಗಳು ಪ್ರಿಯವಾಗಿರುವುವು. ಬುದ್ಧಿವಂತರಾದ ನಿರ್ಮಲಾತ್ಮರು ಇತರ ಪ್ರಾಣಿಗಳು ತನ್ನ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂದು ಅಪೇಕ್ಷಿಸುವರೋ ಅದರಂತೆ ಅವುಗಳ ವಿಷಯದಲ್ಲಿ ತಾವೂ ನಡೆದುಕೊಳ್ಳುವವರಾಗಬೇಕು. ಮಾಂಸವರ್ಜನವು ಧರ್ಮಕ್ಕೂ ಸ್ವರ್ಗಸುಖಕ್ಕೂ ಹೇತುವೆಂದು ತಿಳಿಯಬೇಕು. ಅಹಿಂಸೆಯೇ ಪರಮಧರ್ಮವು. ಅಹಿಂಸೆಯೇ ಶ್ರೇಷ್ಠವಾದ ತಪಸ್ಸು, ಅಹಿಂಸೆಯೇ ಸತ್ಯವು, ಅದರಿಂದ ಧರ್ಮವು ಉತ್ಪನ್ನವಾಗುವುದು. ತೃಣದಾರು ಶಿಲೆಗಳಲ್ಲಿ ಮಾಂಸವು ಲಭಿಸದು. ಜಂತುವನ್ನು ಕೊಂದಲ್ಲದೆ ಮಾಂಸವು ಲಭಿಸದಾದುದರಿಂದ ಮಾಂಸಭಕ್ಷಣೆಯಿಂದ ಪಾಪವು ಖಂಡಿತವಾಗಿ ಸಂಭವಿಸುವುದು. ಪ್ರಾಣಿವಧೆ ಮಾಡುವವನೂ ಆ ಮಾಂಸವನ್ನು ಕ್ರಯಕ್ಕೆ ಕೊಂಡುಕೊಳ್ಳುವವನೂ ಮಾಂಸಭಕ್ಷಕನೂ ಎಲ್ಲರೂ ಪಾಪವನ್ನು ಹೊಂದುವರು. ಆತ್ಮತೃಪ್ತಿಗಲ್ಲದೇ ಕ್ರತುಗಳಲ್ಲಿ ಪಶುವಧೆಮಾಡಿ ಮಾಂಸವನ್ನು ತಿನ್ನುವವನು ಅಲ್ಪದೋಷಿಯಾಗುವನು. ಬೇರೆ ವಿಧಗಳಲ್ಲಿ ಹೊಂದಲ್ಪಡತಕ್ಕ ಮಾಂಸವು ಅನ್ಯಾಯವಧೆಯಿಂದ ಹೊಂದಲ್ಪಡುವುದಾ

ದುದರಿಂದ ಅದನ್ನು ಸತ್ಪುರುಷರು ಭುಜಿಸರು. ಈ ಲೋಕದಲ್ಲಿ ಪ್ರಾಣಿಗೆ ಪ್ರಾಣಕ್ಕಿಂತಲೂ ಹೆಚ್ಚಿನದೊಂದೂ ಇಲ್ಲ. ಆದುದರಿಂದ ತನ್ನ ಪ್ರಾಣದ ವಿಷಯದಲ್ಲಿ ತಾನು ಹೇಗೆ ದಯೆ ತೋರಿಸುವನೋ ಆರೀತಿಯಲ್ಲಿ ಇತರರ ಪ್ರಾಣದ ವಿಷಯದಲ್ಲಿಯೂ ತಾನು ದಯೆಯನ್ನು ತೋರಿಸಬೇಕು. ಕ್ಷತ್ರಿಯರು ತಮ್ಮ ಪ್ರಾಣಗಳಿಗೆ ಅಪಾಯವುಂಟಾಗುವಂತೆ ಬೇಟೆಯಾಡಿ ಅದರಿಂದ ಪ್ರಾಪ್ತವಾದ ಮಾಂಸವನ್ನು ಭಕ್ಷಿಸಬಹುದು. ಏಕೆಂದರೆ ಬೇಟೆಯಲ್ಲಿ ಕೊಲ್ಲತಕ್ಕವನಿಗೂ ಕೊಲ್ಲಲ್ಪಡತಕ್ಕ ಪ್ರಾಣಿಗೂ ಅಪಾಯವು ಸಮಾನವು. ಕೊಲ್ಲುವವನು ಯಾವಾಗಲೂ ಕೊಲ್ಲಲ್ಪಡುವನು. ತಾನು ಮಾಡಿದ ಕರ್ಮವು ಪುನಃ ಮನುಷ್ಯನನ್ನು ಬೆನ್ನಹತ್ತುವುದು. ಅಹಿಂಸೆಯು ಪರಮಧರ್ಮವು. ಅಹಿಂಸೆಯು ಶ್ರೇಷ್ಠವಾದ ದಮವು. ಅಹಿಂಸೆಯೇ ಪರಮದಾನವು. ಅಹಿಂಸೆಯೇ ಉತ್ಕೃಷ್ಟವಾದ ತಪಸ್ಸು. ಅಹಿಂಸೆಯೇ ಉತ್ಕೃಷ್ಟವಾದ ಯಜ್ಞವು. ಅಹಿಂಸೆಯೇ ಉತ್ಕೃಷ್ಟವಾದ ಬಲವು. ಅಹಿಂಸೆಯೇ ಉತ್ಕೃಷ್ಟವಾದ ಮಿತ್ರನು. ಅಹಿಂಸೆಯು ಉತ್ಕೃಷ್ಟವಾದ ಸುಖವು. ಅಹಿಂಸೆಯು ಶ್ರೇಷ್ಠವಾದ ಸತ್ಯವು. ಅಹಿಂಸೆಯು ಪರಮ ಪವಿತ್ರವಾದ ಶ್ರುತಿಯು. ಸಕಲಯಜ್ಞಗಳಲ್ಲಿ ಮಾಡಿದ ದಾನಗಳೂ ಸರ್ವಪುಣ್ಯತೀರ್ಥಗಳಲ್ಲಿ ಸ್ನಾನಮಾಡುವುದೂ ವೇದೋಕ್ತಗಳಾದ ಸಕಲದಾನಗಳನ್ನು ಮಾಡುವಿಕೆಯೂ ಅಹಿಂಸೆಯೊಡನೆ ಸಮವಾಗಲಾರವು. ಹಿಂಸೆಮಾಡದಿರುವವನ ತಪಸ್ಸು ಅಕ್ಷಯವಾದುದು. ಹಿಂಸೆಮಾಡದಿರುವ ಮನುಷ್ಯನು ಯಾವಾಗಲೂ ಯಜ್ಞಗಳನ್ನು ಮಾಡತಕ್ಕವನೆನ್ನಲ್ಪಡುವನು. ಹಿಂಸೆಮಾಡದಿರುವವನು ಸಕಲ ಭೂತಗಳಿಗೂ ತಾಯಿತಂದೆಗಳನ್ನು ಹೋಲುವನು ಎಂದು ಸರಿದಾತ್ಮಜನು ಉಪನ್ಯಾಸಮಾಡಲು ಧರ್ಮಾತ್ಮಜನು ಲೋಕಗಳಿಗೆಲ್ಲಾ ದೇವನು ಯಾರು? ಆತನ ರೀತಿಯನ್ನು ಹೇಳೆಂದು ಕೇಳಲು, ಆತನು ವಾಸುದೇವನ ಸಹಸ್ರನಾಮಗಳನ್ನೂ ಪಠಿಸುತ್ತಾ ಪುನಃ ಮತ್ತೊಂದು ಉಪನ್ಯಾಸವನ್ನು ಮಾಡಿ ಸುಮ್ಮನಾದನು. ಅದರಿಂದ ಆ ಮಹಾ ಬೋಧವು ಸಮಾಪ್ತಿಹೊಂದಿತು. ಹೀಗೆ ಗಂಭೀರವಾಗಿ ಮಾತನಾಡುವ ಭೀಷ್ಮನ ಧ್ವನಿಯು ಸ್ತಬ್ಧವಾಗಲು ಅತಿಶಯವಾದ ಶಾಂತಿಯು ಭೂಮಿಯನ್ನಾವರಿಸಿತು. ನೆರದಿದ್ದ ಎಲ್ಲಾ ರಾಜರುಗಳೂ ಚಿತ್ರಪ್ರತಿಮೆಯಂತೆ ಅಲ್ಲಾಡದಿದ್ದರು. ಅನಂತರ ವ್ಯಾಸನ ಅಪ್ಪಣೆಯಿಂದ ಭೀಷ್ಮನು ಧರ್ಮಜನನ್ನು ಹಿಂದಕ್ಕೆ ಹೋಗಲು ಅನುಜ್ಞೆಕೊಟ್ಟು ಹೀಗೆಂದನು—ನನ್ನ ಪ್ರಯಾಣಕಾಲಕ್ಕೆ ನೀನು ಪುನಃ ಬರುವವನಾಗು. ಸೂರ್ಯನು ದಕ್ಷಿಣಾಯನದಿಂದ ಉತ್ತರಾಯಣಕ್ಕೆ ತಿರುಗುವಾಗ್ಗೆ ನಾನು ಶರೀರತ್ಯಾಗಮಾಡುವೆನು ಎನ್ನಲು, ಧರ್ಮ

ಜನು ಆ ಪಿತಾಮಹನಿಗೆ ಸವಿನಯವಾಗಿ ನಮಸ್ಕರಿಸಿ ಹಸ್ತಿನಾಪುರಕ್ಕೆ ತೆರಳಿದನು. ಅಲ್ಲಿಗೆ ಸೂರ್ಯನು ಉತ್ತರಾಯಣಕ್ಕೆ ತಿರುಗುವುದಕ್ಕೆ ಐವತ್ತು ದಿನಗಳಿದ್ದುವು. ಅನಂತರದಲ್ಲಿ ಭೀಷ್ಮನ ನಿರ್ವಾಣವು ಸನ್ನಿಹಿತವಾಗಲು ಆ ನರನಾಥನು ಗಾಂಗೇಯನಿಗೆ ಸಂಸ್ಕಾರಮಾಡುವುದಕ್ಕಾಗಿ ಬೇಕಾದ ಪದಾರ್ಥಗಳನ್ನು ಸಿದ್ಧಮಾಡಿಕೊಂಡು ಎಲ್ಲರೂ ಜತೆಯಲ್ಲಿ ಬರುತಿರಲು ತಾನು ಅಗ್ನಿಪುರಸ್ಸರವಾಗಿ ಭೀಷ್ಮನ ಬಳಿಗೆ ಬಂದನು. ಆ ಮಹಾ ವೀರನು ವ್ಯಾಸ, ನಾರದ, ದೇವಲ, ಅಸಿತರಿಂದಲೂ ಹತಶೇಷರಾದ ರಾಜರುಗಳಿಂದಲೂ ಪರಿವೃತನಾಗಿ ಶರತಲ್ಪದಲ್ಲಿದ್ದುದನ್ನು ನೋಡಿ ಕುಂತೀತನಯಾಗ್ರಜನು ಆತನಿಗೆ ಅಭಿವಂದಿಸಿ ಮಹಾನುಭಾವಾ ! ಈ ರೀತಿಯಲ್ಲಿ ಸಮಯಕ್ಕೆ ಬೇಕಾದ ವಸ್ತುಸಮೂಹಗಳನ್ನು ತೆಗೆದುಕೊಂಡು ಬಂದಿರುವೆನೆಂದು ನಮ್ರತೆಯೊಡನೆ ವಿಜ್ಞಾಪಿಸಿದನು. ಆ ಮಾತುಗಳನ್ನು ಕೇಳಿ ಕುರುಪಿತಾಮಹನು ಕಣ್ಣುಗಳನ್ನು ಬಿಟ್ಟುನೋಡಿ ಪ್ರೀತಿಯಿಂದ ಆತನನ್ನು ಮನ್ನಿಸಿ ನನ್ನ ಅವಸಾನಕಾಲವು ಸಮೀಪವಾಯಿತೆಂದು ಹೇಳಿ ಧೃತರಾಷ್ಟ್ರನ ಕಡೆ ನೋಡಿ ಇನ್ನು ನಿನ್ನ ಮಕ್ಕಳಿಗಾಗಿ ವ್ಯಥೆ ಹೊಂದದೆ ಪಾಂಡವರನ್ನು ನಿನ್ನ ಮಕ್ಕಳಂತೆ ಪ್ರೀತಿಸು. ಪಾಂಡವರು ನಿನಗೆ ಪರಮ ವಿಧೇಯರಾಗಿ ನಿನ್ನನ್ನು ಪೂಜಿಸುವರೆಂದು ಹೇಳಿ ಹೆಚ್ಚಾದ ಭಕ್ತಿಯಿಂದ ಶ್ರೀಕೃಷ್ಣನ ಕಡೆ ದೃಷ್ಟಿಯನ್ನು ನಿಲ್ಲಿಸಿ ಹೀಗೆಂದನು—ದೇವದೇವಾ ! ಪುರುಷೋತ್ತಮಾ ! ನನ್ನನ್ನು ರಕ್ಷಿಸು. ಶ್ರೀಕೃಷ್ಣ ! ಈ ಲೋಕವನ್ನು ಬಿಡುವುದಕ್ಕೆ ಅಪ್ಪಣೆಯನ್ನು ಕೊಡು. ಈ ಶರೀರತ್ಯಾಗಮಾಡಲು ಅನುಮತಿಯನ್ನು ಕೊಡು. ನಿನ್ನಿಂದ ಅನುಜ್ಞಾತನಾಗಿ ನಾನು ಪರಮಗತಿಯನ್ನು ಹೊಂದತಕ್ಕವನು ಎಂದು ಬೇಡಲು ಆ ವೇಣುಗಾನವಿಶಾರದನ ಮಧುರವಚನಗಳು ಎಲ್ಲರಿಗೂ ಕರ್ಣರಸಾಯನವಾಗಿ ಹೀಗೆ ಕೇಳಬಂದುವು. ಭೀಷ್ಮಾ ! ನಿನಗನುಜ್ಞೆ ಕೊಟ್ಟಿರುವೆನು. ವಸುಲೋಕವನ್ನು ಸೇರು. ಮಹಾಮಹಿಮನೇ ! ಈ ಲೋಕದಲ್ಲಿ ನೀನು ಧರ್ಮವನ್ನು ಲೇಶವಾದರೂ ಅತಿಕ್ರಮಿಸಿದವನಲ್ಲ. ನಿನಗೆ ಪಾಪವು ಲೇಶವೂ ಇಲ್ಲ ಎಂದು ಹೇಳಿದನು. ಈ ಪ್ರಕಾರ ಕೇಶವನಿಂದ ನಿರ್ದಿಷ್ಟನೆಂದೆನಿಸಿಕೊಂಡು ಅವನ ಆಶೀರ್ವಚನವನ್ನು ಪಡೆದ ನದೀಸೂನುವು ತನ್ನನ್ನು ಪರಿವೇಷ್ಟಿಸಿದ್ದ ಸ್ನೇಹಿತರೆಲ್ಲರನ್ನು ಬಿಟ್ಟು ಕಟ್ಟಕಡೆಗೆ ಧರ್ಮನಂದನನಿಗೆ ಹಿತವನ್ನು ಹೇಳಿ ಆತನನ್ನು ಬಿಟ್ಟು ಸ್ವಲ್ಪಹೊತ್ತು ಸುಮ್ಮನಿದ್ದು ಅನಂತರ ತನ್ನ ಪ್ರಾಣವಾಯುವನ್ನು ಚಕ್ರದಿಂದ ಚಕ್ರಕ್ಕೆ ಆಕರ್ಷಿಸಿ ಕೊನೆಗೆ ಎಲ್ಲವನ್ನೂ ಸಹ ಬ್ರಹ್ಮರಂಧ್ರದ ಸಮೀಪದ

ಲ್ಲಿರುವ ಸಹಸ್ರಾರದಲ್ಲಿ ಸೇರಿಸಿದನು. ಅವು ಆತನ ತಲೆಯಲ್ಲಿ ಸೇರಿದುವು. ಆತನು ಪ್ರಾಣಗಳನ್ನು ಆಕರ್ಷಿಸುವ ಸಮಯದಲ್ಲಿ ಆತನ ಶರೀರವು ಶಿಶುವಿನ ಶರೀರದಂತೆ ಏಟೂ ಘಾಯವೂ ಇಲ್ಲದೆ ಸುಕುಮಾರವಾಗಿದ್ದಿತು. ಅನಂತರ ಆತನ ಪ್ರಾಣಗಳಿಂದ ಪ್ರಕಾಶಹೊಂದಿ ಒಂದು ಮಹನೀಯವಾದ ತೇಜಸ್ಸು ಆತನ ತಲೆಯನ್ನು ಭೇದಿಸಿಕೊಂಡು ಹೊರಗೆ ಬಂದು ಗಗನಕ್ಕೆ ಹಾರುತಿರಲು ದೇವತೆಗಳು ಪುಷ್ಪವೃಷ್ಟಿಯನ್ನು ಕರೆದರು. ಆಕಾಶವಾಣಿಯು ಆತನನ್ನು ಸ್ತುತಿಸಿತು. ಹೀಗೆ ಭರತಶ್ರೇಷ್ಠನಾದ ಶಾಂತನವನು ಬ್ರಹ್ಮಸಾಯುಜ್ಯವನ್ನು ಹೊಂದಿದನು.

ಶಾಂತಿಪರ್ವ ಆನುಶಾಸನಿಕಪರ್ವಗಳು ಸಮಾಪ್ತ.

## ೯ನೆಯ ಅಧ್ಯಾಯ.

## ಅಂತ್ಯ ವೃತ್ತಾಂತ.

### ಅಶ್ವಮೇಧಪರ್ವ.

ಅನಂತರ ಕೌಂತೇಯಾಗ್ರಜನು ಗಾಂಗೇಯನಿಗೆ ಪಿತೃಕರ್ಮಗಳನ್ನು ನಿರ್ವರ್ತಿಸಿ ಗಂಗಾನದೀ ತೀರವನ್ನು ಬಿಟ್ಟು ಹಿಂತಿರುಗುತ್ತಿರುವಲ್ಲಿ ಅತ್ಯಂತ ಶೋಕಾಕ್ರಾಂತನಾಗಿ ಬೇಟೆಗಾರನಿಂದ ಹೊಡೆಯಲ್ಪಟ್ಟ ಆನೆಯೋಪಾದಿಯಲ್ಲಿ ಕೆಳಗೆ ಬಿದ್ದನು. ಗೋವಿಂದನು ಪ್ರಿಯವಚನಗಳಿಂದ ಆತನನ್ನು ಸಮಾಧಾನಪಡಿಸಿ ಹೆಚ್ಚಾಗಿ ಶೋಕಮಾಡುವುದರಿಂದ ಮೃತರಾದವರಿಗೆ ಕಷ್ಟ ಒದಗುವುದೆಂದು ತಿಳಿಸಲು ವ್ಯಾಸನು ಆತನೊಡನೆ ನಿನ್ನ ವ್ಯಥೆಯು ಹೋಗುವುದಕ್ಕೂ ಸೌಖ್ಯವುಂಟಾಗುವುದಕ್ಕೂ ಅಶ್ವಮೇಧವೆಂಬ ಕ್ರತುವನ್ನು ಮಾಡುವುದೆಂದು ಹೇಳಿದನು. (ಆ ಯಾಗವನ್ನು ಕುರಿತು ತಿಳಿಸುವುದಾದ ಕಾರಣ ಇದಕ್ಕೆ ಅಶ್ವಮೇಧಪರ್ವವೆಂಬ ಹೆಸರುಂಟಾಯಿತು.) ಆ ಮಾತುಗಳನ್ನು ಕೇಳಿ ಧರ್ಮತನಯನಿಂತೆಂದನು. ದೇವಾ ! ನನ್ನ ಕೋಶವು ಶೂನ್ಯವಾಗಿರುವುದು. ರಾಜ್ಯದಲ್ಲಿ ಜನಗಳು ಬಡತನ ಹೊಂದಿರುವ ಕಾರಣ ಪುನಃ ನಾನು ಅವರಿಂದ ದ್ರವ್ಯವನ್ನು ತೆಗೆದುಕೊಳ್ಳಲೊಲ್ಲೆನು. ನಾನು ಹೇಗೆ ಅಶ್ವಮೇಧ ಯಜ್ಞವನ್ನು ಮಾಡಲಿ ಎಂದು ಕೇಳಲು ವ್ಯಾಸನಿಂತು ಹೇಳಿದನು. ಹಿಮವತ್ಪರ್ವತದ ತಪ್ಪಲಲ್ಲಿ ಮೊದಲು ಮರುತ್ತೆಂಬ ಪೃಥ್ವೀಶ್ವರನು ಮಹಾಯಜ್ಞವನ್ನು ಮಾಡಿ ಅಪರಿಮಿತ

ವಾದ ದಕ್ಷಿಣೆಗಳನ್ನು ಕೊಡಲು ಬ್ರಾಹ್ಮಣರು ಅದೆಲ್ಲವನ್ನು ಹೊರಲಾರದೆ ಅಲ್ಲಿಯೇ ನಿಕ್ಷೇಪ ಮಾಡಿರುವರು. ಆ ಸ್ಥಳವನ್ನು ನಿನಗೆ ತೋರಿಸುವೆನು. ಆ ಸುವರ್ಣವನ್ನು ತರಿಸಿ ಯಜ್ಞವನ್ನು ಮಾಡು ಎಂದು ಹೇಳಿ ವೇದವ್ಯಾಸನು ಆತನಿಗೆ ಮರುತ್ತನ ಚರಿತ್ರೆಯನ್ನು ಹೇಳಿದನು.

ಆ ಬಳಿಕ ವಾಸುದೇವನು ಧರ್ಮನಂದನನ ಶೋಕವನ್ನು ಹೋಗಲಾಡಿಸಲು ಯೋಚಿಸಿ ಮನಸ್ಸನ್ನು ನಿಗ್ರಹಿಸಿದಲ್ಲಿ ಶೋಕವನ್ನು ಗೆಲ್ಲಬಹುದೆಂದು ಹೇಳಿ ಹೀಗೆಂದನು. ಈಗ ನೀನೊಬ್ಬನೇ ಮನಸ್ಸಿನೊಡನೆ ಯುದ್ಧಮಾಡಬೇಕಾದ ಸಂದರ್ಭವು ಪ್ರಾಪ್ತವಾಯಿತು. ಈ ಸಂಗ್ರಾಮದಲ್ಲಿ ಬಾಣಗಳೂ ಹಿತರೂ ಭೃತ್ಯರೂ ಆವಶ್ಯಕವಿಲ್ಲ. ನೀನೊಬ್ಬನೇ ಇತರರ ಸಹಾಯವಿಲ್ಲದೆ ಹೋರಬೇಕಾದ ಯುದ್ಧವು ಸಂಪ್ರಾಪ್ತವಾಗಿರುವುದು. ಇದರಲ್ಲಿ ನೀನು ಸೋತರೆ ಹೆಚ್ಚು ದುರವಸ್ಥೆಯನ್ನು ಹೊಂದುವೆ. ಆದುದರಿಂದ ಇದನ್ನು ತಿಳಿದು ಕಾರ್ಯವನ್ನು ನಡೆಸಿ ಕೃತಕೃತ್ಯನಾಗು ಎಂದು ಬೋಧಿಸಲು ಧರ್ಮಜನು ಶೋಕವನ್ನು ದೂರಮಾಡಿ ತನಗುಪದೇಶಮಾಡಿದ ಕೃಷ್ಣಾದಿಗಳಿಗೆ ನಮಸ್ಕರಿಸಿ ಹಸ್ತಿನಾಪುರವನ್ನು ಸೇರಿ ನಿಜಧರ್ಮಗಳನ್ನು ನಡೆಸುತ್ತಿದ್ದನು.

ಅನಂತರ ಕೃಷ್ಣಾರ್ಜುನರು ಹೆಚ್ಚಾದ ಸಂತೋಷದಿಂದ ಕೆಲವುಕಾಲ ರಮಣೀಯವಾದ ಸ್ಥಳಗಳಿಗೆ ಹೊರಟು ಅಲ್ಲಿ ವಿಹಾರಮಾಡುತ್ತಿದ್ದರು. ಒಂದುದಿನ ಪಾರ್ಥನು ಗೋವಿಂದನೊಡನಿಂತೆಂದನು. ದೇವಾ! ನೀನು ಮೊದಲು ಯುದ್ಧಪ್ರಾಪ್ತವಾಗುವ ಸಮಯದಲ್ಲಿ ನನಗುಪದೇಶಿಸಿದ ದಿವ್ಯಬೋಧನೆಯನ್ನು ಮರತೆನು. ಪುನಃ ಅದನ್ನು ನನಗೆ ತಿಳಿಸುವವನಾಗು ಎಂದು ಬೇಡಲು ಪದ್ಮನೇತ್ರನು ಮೃದುವಚನಗಳಿಂದಲೇ ಆತನನ್ನು ನಿಂದಿಸುತ್ತಾ ಹೀಗೆಂದನು. ನಾನು ಆ ಸಮಯದಲ್ಲಿ ಯೋಗಯುಕ್ತನಾಗಿ ರಹಸ್ಯಗಳೂ ಸನಾತನಗಳೂ ಆದ ತತ್ವಗಳನ್ನು ತಿಳಿಯಿಸಿದೆನು. ಈಗ ಅವುಗಳನ್ನೆಲ್ಲಾ ಹೇಳಲು ನನಗೆ ಸಾಧ್ಯವಲ್ಲ. ಆದರೂ ಮೊದಲು ಒಬ್ಬ ಬ್ರಾಹ್ಮಣನು ಸ್ವರ್ಗದಿಂದ ಹೊರಟುಬಂದು ಮೋಕ್ಷವನ್ನು ಕುರಿತು ಹೇಳಿದ ವಚನಗಳನ್ನು ತಿಳಿಸುವೆನು, ಕೇಳೆಂದು ಅವನು ಹೇಳಿದನು. ಈ ಉಪನ್ಯಾಸವೇ ಅನುಗೀತೆ ಎನಿಸಲ್ಪಡುವುದು. 'ನಾನೇ ಆಚಾರ್ಯನು; ಮನಸ್ಸೇ ನನ್ನ ಶಿಷ್ಯನು;' ಎಂಬ ಮಹಾವಾಕ್ಯವು ಇದರಲ್ಲಿ ಉಕ್ತವಾಗಿದೆ. ಇದು ಬಹಳ ಗೂಢಾರ್ಥಯುಕ್ತವಾದುದರಿಂದ ಇದನ್ನು ಆವಶ್ಯಕವಾಗಿ ಪಠಿಸಬೇಕು ಎಂದು ವಾಸುದೇವನು ನರನೊಡನೆ ಹೇಳಿದನು.

ಅನಂತರದಲ್ಲಿ ಶ್ರೀ ಕೃಷ್ಣನು ದ್ವಾರಕಿಗೆ ಹೋಗಲು ಯತ್ನಿಸಿ ಕಿರೀಟಿಯೊಡನೆ ಹಸ್ತಿನಾಪುರಕ್ಕೆ ಹೊರಟು ಧರ್ಮಜನಿಂದ ಅನುಜ್ಞಾತನಾಗಿ ಪಾಂಡವ ಕೌರವರೆಲ್ಲರನ್ನೂ ಬಿಟ್ಟು ತನ್ನ ತಂಗಿಯಾದ ಸುಭದ್ರೆಯನ್ನು ಕರೆದುಕೊಂಡು ದ್ವಾರಕಿಗೆ ಹೊರಟನು. ಅಲ್ಲಿನ ಪುರಜನರೆಲ್ಲರೂ ಪರಮಾನಂದಭರಿತರಾಗಿ ಆತನನ್ನು ಎದುರುಗೊಂಡು ಸನ್ಮಾನಿಸಲು ಕೃಷ್ಣನು ದೇವಕೀ ವಸುದೇವರಿಗೆ ಮಹಾಭಾರತ ಯುದ್ಧವನ್ನು ಸವಿಸ್ತಾರವಾಗಿ ತಿಳಿಸಿದನು. ಸದಯನಾದ ಭಗವಂತನು ಅಭಿಮನ್ಯುವಿನ ಮರಣವನ್ನು ಮೊದಲೇ ಹೇಳದೆ ಕಟ್ಟಕಡೆಗೆ ಹೇಳಿದುದರಿಂದ ಅವರೆಲ್ಲರೂ ಅತಿ ಕಾರುಣ್ಯದಿಂದ ದುಃಖಿಸಿದರು. ಅವರುಗಳ ದುಃಖವನ್ನು ಶಮನಮಾಡಿ ಕುಂತಿಯು ಆ ವೃತ್ತಾಂತವನ್ನು ಕೇಳಿ ಹೇಗೋ ಸಹಿಸಿಕೊಂಡವಳಾಗಿ ವೈಧವ್ಯಹೊಂದಿದ ತನ್ನ ಮೊಮ್ಮಗಳನ್ನು ಹೇಗೆ ಸಂತೈಸಿದಳೋ ಆ ಸಮಾಚಾರವನ್ನೆಲ್ಲಾ ಹೇಳಿ ಕೃಷ್ಣನು ಅವರನ್ನು ಸಮಾಧಾನಪಡಿಸಿದನು.

ಆ ಸಮಯದಲ್ಲಿ ಧರ್ಮತನಯನು ವೇದವ್ಯಾಸ ಪ್ರಚೋದಿತನಾಗಿ ಅಶ್ವಮೇಧಯಾಗವನ್ನು ಮಾಡಲು ಯತ್ನಿಸಿ ತನ್ನತಮ್ಮಂದಿರೊಡನೆ ಅನೇಕ ಪರಿವಾರಪರಿವೃತನಾಗಿ ಹಿಮವತ್ಪರ್ವತದ ಬಳಿಗೆ ಹೋಗಿ ಮಹಾದೇವನನ್ನು ಪೂಜಿಸಿ ಮೊದಲು ನಿಕ್ಷಿಪ್ತಗಳಾಗಿದ್ದ ಧನಗಳಿರುವ ಸ್ಥಳಗಳಲ್ಲಿ ಅಗೆಯಿಸಿ ಅಪರಿಮಿತ ಧನಗಳನ್ನೂ ಪಾತ್ರೆಗಳನ್ನೂ ತೆಗೆದುಕೊಂಡು ಪುನಃ ಅಲ್ಲಲ್ಲಿ ನಿಲ್ಲುತ್ತಾ ಕ್ರಮೇಣ ತಮ್ಮ ಪಟ್ಟಣವನ್ನು ಸೇರಿದನು. ಆತನು ಬರುವುದಕ್ಕೆ ಮೊದಲೇ ಕೇಶವನು ಅಭಿಮನ್ಯು ಸುತನು ಜನಿಸುವ ಕಾಲವನ್ನು ತಿಳಿದವನಾಗಿ ಗಜಪುರಕ್ಕೆ ಬಂದಿದ್ದನು. ಆ ಸಮಯದಲ್ಲಿ ಆ ಸುತನು ಅಶ್ವತ್ಥಾಮನ ದಿವ್ಯಾಸ್ತ್ರದಿಂದ ನಿಹತನಾಗಿದ್ದುದರಿಂದ ಮೃತನಾಗಿ ಹುಟ್ಟಿದನು. ಕೃಷ್ಣನು ಜಾಗ್ರತೆಯಲ್ಲಿ ಅಂತಃಪುರವನ್ನು ಪ್ರವೇಶಿಸಲು ಅಲ್ಲಿ ಕುಂತೀ, ಸುಭದ್ರೆ ಮುಂತಾದ ಅನೇಕರು ಹೆಚ್ಚು ದೈನ್ಯಹೊಂದಿ ರೋದಿಸುತ್ತಾ ಮಹಾತ್ಮಾ ರಕ್ಷಿಸೆಂದು ಪ್ರಾರ್ಥಿಸಿದರು. ಸುಭದ್ರೆಯು ಹೆಚ್ಚಾಗಿ ವ್ಯಥೆ ಹೊಂದಿದವಳಾಗಿ ಹೀಗೆಂದಳು. ಅಣ್ಣಾ ನೀನು ಈ ಶಿಶುವನ್ನು ಬದುಕಿಸುವೆನೆಂದು ಮೊದಲೇ ಹೇಳಿದ್ದೆಯಲ್ಲವೆ. ಈಗ ಆ ಮಾತನ್ನು ನೆರವೇರಿಸು. ನೀನು ಇಷ್ಟಪಟ್ಟದಾದರೆ ಮೂರುಲೋಕಗಳಲ್ಲಿ ಯಾರು ಗತಪ್ರಾಣರಾದಾಗ್ಯೂ ಅವರನ್ನು ಬದುಕಿಸಬಲ್ಲೆ. ನಿನ್ನ ಸೋದರಳಿಯನ ಕುಮಾರನಾಗಿ ಹುಟ್ಟಿದ ಮುದ್ದುಬಾಲಕನನ್ನು ಕುರಿತು ನಿನಗೆ ಹೇಳಬೇಕೆ ? ಎಂದು ಖಿನ್ನಳಾಗಿ ಪ್ರಾರ್ಥಿಸಲು

ದಾಮೋದರನು ಹಾಗೆಯೇ ಮಾಡುವೆನೆಂದು ಹೇಳಿ ಪ್ರಸವಗೃಹಕ್ಕೆ ಹೋಗಲು ಉತ್ತರೆಯು ಶಿಶುವನ್ನು ತನ್ನ ಕೈಗಳಿಂದ ಎತ್ತಿಕೊಂಡು ಹೆಚ್ಚಾದ ದೈನ್ಯಹೊಂದಿ ಆ ಸ್ವಾಮಿಯ ಮುಖದಲ್ಲೇ ದೃಷ್ಟಿಯನ್ನು ನಿಲ್ಲಿಸಿ ಸವಿನಯಳಾಗಿ ಇವನನ್ನು ಕಾಪಾಡೆಂದು ಬೇಡುತ್ತಾ ಆ ಶಿಶುವನ್ನು ನೋಡಿ ಕಂದ! ಎದ್ದು ಸರ್ವಲೋಕಮಹೇಶ್ವರನಾದ ಈ ದೇವನಿಗೆ ನಮಸ್ಕರಿಸೆಂದು ಹೇಳುತ್ತಾ ತಾಳ್ಮೆಯನ್ನು ಹೊಂದಿ ಆತನ ದಯೆಗಾಗಿ ಕಾದಿದ್ದಳು. ಅಷ್ಟರಲ್ಲಿ ದಯಾಳುವೂ ಶಕ್ತಿವಂತನೂ ಆದ ಭಗವಂತನು ತನ್ನ ಸಾಮ್ರಾಜ್ಯಶಕ್ತಿಗರ್ಭಿತವಾದ ಈ ವಾಕ್ಯನ್ನು ಹೇಳಿದನು. ಉತ್ತರೇ! ನಾನು ಯಾವಾಗಲೂ ಸುಳ್ಳು ಹೇಳಿದವನಲ್ಲ. ನನ್ನ ಮಾತುಗಳು ಯಾವಾಗಲೂ ಸಫಲವಾಗುವುವು. ಸಕಲ ಭೂತಗಳ ಎದುರಿಗೂ ಈ ಶಿಶುವನ್ನು ನಾನು ಬದುಕಿಸುವೆನು. ಪರಿಹಾಸ್ಯಕ್ಕಾದರೂ ನಾನೊಂದು ದಿನವಾದರೂ ಅಸತ್ಯವನ್ನು ಹೇಳದಿದ್ದಲ್ಲಿ ನಾನು ಯುದ್ಧದಲ್ಲಿ ಬೆನ್ನುತೋರಿಸದವನಾಗಿದ್ದಲ್ಲಿ ಈ ಶಿಶುವು ಸಜೀವನಾಗಲಿ, ನಾನು ಧರ್ಮಕ್ಕೂ ಬ್ರಾಹ್ಮಣರಿಗೂ ಪಕ್ಷಪಾತಿಯಾಗಿದ್ದಲ್ಲಿ ಮೃತಜಾತನಾದ ಈ ಅಭಿಮನ್ಯುಸುತನು ಬದುಕಲಿ. ಒಂದು ದಿನವಾದರೂ ವಿಜಯನಿಗೂ ನನಗೂ ವಿರೋಧ ಉಂಟಾಗಲಿಲ್ಲ, ಅಂತಹ ಸತ್ಯದಿಂದ ಈ ಶಿಶುವು ಪ್ರಾಣಗಳನ್ನು ಹೊಂದಲಿ. ಸತ್ಯವೂ ಧರ್ಮವೂ ಯಾವಾಗಲೂ ನನ್ನಲ್ಲಿ ಸಂಪ್ರತಿಷ್ಠಿತವಾಗಿದ್ದುದಾದರೆ ಈ ಮೃತಶಿಶುವು ಜೀವವಂತನಾಗಲಿ. ಕಂಸನೂ ಕೇಶಿಯೂ ಧರ್ಮಯುದ್ಧದಲ್ಲಿ ನನ್ನಿಂದ ನಿಹತರಾದರು. ಅದೇ ಧರ್ಮವು ಈ ದಿನ ಈ ಬಾಲಕನನ್ನು ಬದುಕಿಸಲಿ ಎಂದು ಹೀಗೆ ವಾಸುದೇವನು ಮಧುರವಾಗಿ ಹೇಳುತ್ತಿರಲು ಆ ಶಿಶುವು ಚೈತನ್ಯವನ್ನು ಹೊಂದಿ ಕದಲಿತು. ಅಲ್ಲಿದ್ದ ಜನಗಳು ವ್ಯಥೆಯನ್ನು ಬಿಟ್ಟು ಸಂತೋಷವನ್ನು ಹೊಂದಿ ಕೃಷ್ಣನ ಮಹಿಮೆಯನ್ನು ಹೊಗಳುತಿದ್ದರು. ನಾಮಕರಣ ಸಮಯದಲ್ಲಿ ನಾರಾಯಣನು ಆ ಶಿಶುವನ್ನು ನೋಡಿ ಈ ಭರತವಂಶವು ಪರಿಕ್ಷೀಣವಾಗುವ ಸಮಯದಲ್ಲಿ ಇವನು ಹುಟ್ಟಿದನಾದಕಾರಣ ಈತನು ಪರಿಕ್ಷಿತ್ತೆಂಬ ಹೆಸರಿನಿಂದ ವಿರಾಜಿಸಲಿ ಎಂದು ಹೇಳಿದನು. ಅನಂತರ ಒಂದು ತಿಂಗಳು ಕಳೆದಮೇಲೆ ಪಾಂಡವರು ಕಾಂಚನಸಂಚಯದೊಡನೆ ಹಿಂತಿರುಗಿಬಂದರು.

ಕೂಡಲೆ ಆ ಮಹಾಕ್ರತುವಿಗೆ ಬೇಕಾದ ಸನ್ನಾಹಗಳು ಬೇಗಬೇಗ ಮಾಡಲ್ಪಡುತ್ತಿದ್ದುವು. ಕಪ್ಪಾದ ಒಂದು ಉತ್ತಮತುರಂಗವು ಯಜ್ಞಾಶ್ವವಾಗಿ ಗೊತ್ತು ಮಾಡಲ್ಪಟ್ಟಿತು.

ಯುಧಿಷ್ಠಿರನು ಶಾಸ್ತ್ರೋಕ್ತವಿಧಾನದಿಂದ ಯಾಗದೀಕ್ಷೆಯನ್ನು ಹೊಂದಿ ಸಮಸ್ತ ದೇಶಗಳಲ್ಲಿಯೂ ಸಂಚರಿಸುವುದಕ್ಕಾಗಿ ಆ ಹಯರತ್ನವನ್ನು ಬಿಟ್ಟು ಅದನ್ನು ರಕ್ಷಿಸುವುದಕ್ಕಾಗಿ ಅರ್ಜುನನನ್ನು ನಿಯಮಿಸಿ ಹೀಗೆಂದನು. ಈ ತುರಂಗಮೋತ್ತಮವು ಯಾವದೇಶವನ್ನು ಪ್ರವೇಶಮಾಡುವುದೋ ಆ ದೇಶದರಾಜನು ನನ್ನನ್ನಧೀಶ್ವರನನ್ನಾಗಿ ಒಡಂಬಟ್ಟಲ್ಲಿ ಮೇಲಾಗುವುದು. ಹಾಗೆ ಮಾಡದೆ ಇದನ್ನು ಅಡ್ಡಿಪಡಿಸಿದವನಾದರೆ ಆ ದೊರೆಯೊಡನೆ ಯುದ್ಧಮಾಡಿ ಗೆದ್ದು ಮುಂದಕ್ಕೆ ತೆರಳು ಎಂದು ಅಪ್ಪಣೆಮಾಡಲು ಗಾಂಡೀವಿಯು ಎಂದಿನಂತೆ ಧವಳಾಶ್ವಗಳಿಂದ ಅಲಂಕೃತವಾದ ರಥವನ್ನು ಹತ್ತಿ ಆ ಕುದುರೆಯನ್ನನುಸರಿಸುತ್ತಾ ಹೊರಟನು. ಆಗ ಜನಗಳೆಲ್ಲರೂ ಜಯಜಯಧ್ವನಿಯಿಂದ ಕೂಡಿದವರಾಗಿ ಆತನನ್ನು ಹೊಗಳುತ್ತಾ ಹೊರಟರು. ಹೀಗೆ ಹೊರಟು ಅರ್ಜುನನು ಅನೇಕ ದೇಶಗಳನ್ನು ದಾಟಿ ಅನೇಕ ನರಪತಿಗಳೊಡನೆ ಯುದ್ಧಮಾಡಿ ಗೆದ್ದು ಬಭ್ರುವಾಹನನೆಂಬ ತನ್ನ ಕುಮಾರನು ಪರಿಪಾಲಿಸುವ ಮಣಿಪುರವೆಂಬ ರಾಜ್ಯದ ಬಳಿಯನ್ನು ಸೇರಿದನು. ಅದನ್ನು ತಿಳಿದು ಬಭ್ರುವಾಹನನು ಭಕ್ತಿವಿನಯಗಳಿಂದ ಕೂಡಿದವನಾಗಿ ತಂದೆಯಬಳಿಗೆ ಬಂದು ನಮಸ್ಕರಿಸಲು ಪಾರ್ಥನು ಧೀರತ್ವದಿಂದ ಹೀಗೆಂದನು. ನೀನು ಕ್ಷತ್ರಿಯಧರ್ಮವನ್ನು ಬಿಟ್ಟು ಸ್ತ್ರೀಯಂತೆ ದೈನ್ಯಹೊಂದಿದವನಾಗಿ ಪತಕ್ಕೆಬಂದೆ. ನಿನಗೆ ರಾಜ್ಯದಮೇಲೆ ಆಶೆಯಿದ್ದುದಾದರೆ ನನಗೆ ಇದಿರಾಗಿನಿಂತು ಯುದ್ಧವನ್ನು ಮಾಡು; ಎಂದು ಹೇಳಲು ನಾಗಲೋಕಾಧೀಶ್ವರನ ಮಗಳಾದ ಉಲೂಪಿ ಎಂಬ ಸ್ತ್ರೀಯು ಬಭ್ರುವಾಹನನ ಸಮೀಪಕ್ಕೆ ಬಂದು ಕಿರೀಟಿಯೊಡನೆ ಯುದ್ಧವನ್ನು ಮಾಡುವುದೇ ಯುಕ್ತವೆಂದು ಉಪದೇಶಮಾಡಲು ಅವರಿಬ್ಬರಿಗೂ ಘೋರವಾದ ಯುದ್ಧವು ಸಂಪ್ರಾಪ್ತವಾಯಿತು. ಅದರಲ್ಲಿ ಬಭ್ರುವಾಹನನು ತನ್ನದರ್ಪವು ತೋರುವಂತೆ ಸಂಗರಕ್ರೀಡಾಪ್ರಾವೀಣ್ಯವನ್ನು ತೋರಿಸಿ ತಂದೆಗೆ ಸಂತೋಷವನ್ನುಂಟುಮಾಡಿದನು.

ಅನಂತರ ಅವನಿಂದ ಪ್ರಯೋಗಿಸಲ್ಪಟ್ಟ ಒಂದು ತೀಕ್ಷ್ಣ ನಾರಾಚವು ಅರ್ಜುನನ ತಲೆಯನ್ನು ಛೇದಿಸಲು, ಅರ್ಜುನನು ಧೊಪ್ಪೆಂದು ನೆಲದಲ್ಲಿ ಬಿದ್ದನು. ತಂದೆಯ ಮರಣವನ್ನು ನೋಡಿ ಮಗನು ಹೆಚ್ಚು ವ್ಯಥೆಯನ್ನು ಹೊಂದಿದನು. ಈ ವೃತ್ತಾಂತವನ್ನು ತಿಳಿದು ಅವನ ತಾಯಿಯಾದ ಚಿತ್ರಾಂಗದೆಯು ಬಹು ತೀವ್ರವಾಗಿ ಬಂದು ಯುದ್ಧಕ್ಕೆ ಉನ್ಮುಖರಾಗುವಂತೆ ಬೋಧಿಸಿದ ಉಲೂಪಿಯನ್ನು ಬಹುವಾಗಿ ನಿಂದಿಸಿ ನಮ್ಮ ಪ್ರಾಣೇಶ್ವರನಾದ ಅರ್ಜುನನನ್ನು ಬದುಕಿಸದಿದ್ದೆಯಾದರೆ ನಾನು ಪ್ರಾಯೋಪ

ವೇಶವನ್ನು ಮಾಡುವೆನೆಂದು ಹೇಳಿದಳು. ಅಷ್ಟರಲ್ಲಿ ಬಭ್ರುವಾಹನನು ಹೆಚ್ಚು ಶೋಕ ವುಳ್ಳವನಾಗಿ ತನ್ನ ತಾಯಿಯು ಬೇಡಿದ ರೀತಿಯಲ್ಲಿಯೇ ತಾನೂ ಪ್ರಾರ್ಥಿಸಿ ನೀನು ಹಾಗೆ ಮಾಡದಿದ್ದಲ್ಲಿ ನಾನೂ ಪ್ರಾಯೋಪವೇಶ ಮಾಡುವೆನೆಂದು ಶಪಥಮಾಡಲು ಉಲೂಪಿಯು ಮೃತಸಂಜೀವಿನಿ ಎಂಬ ಒಂದು ಮಣಿಯನ್ನು ಮನಸ್ಸಿನಲ್ಲಿ ಸ್ಮರಿಸಿ ಅದನ್ನು ತನ್ನಲ್ಲಿಗೆ ಬರಮಾಡಿಕೊಂಡು ಬಭ್ರುವಾಹನನೊಡನೆ ಹೀಗೆಂದಳು. ಕಂದಾ! ನೀನು ಸವ್ಯಸಾಚಿಯನ್ನು ಗೆಲ್ಲಬಲ್ಲೆಯಾ ? ಈ ಮಹಾವೀರನಿಗೆ ಒಂದು ಹಿತವುಂಟಾಗುವುದಕ್ಕೋಸ್ಕರವಾಗಿ ಯೋಚಿಸಿ ಇಂತಹ ಮಾಯೆಯನ್ನೇರ್ಪಡಿಸಿದೆನು. ಈ ರತ್ನವನ್ನು ಆತನ ಸಮೀಪದಲ್ಲಿ ಸೇರಿಸಿದೆಯಾದರೆ ಈತನು ಪ್ರಾಣಗಳನ್ನು ಧರಿಸು ವನು ಎನ್ನಲು ಆ ಕುಮಾರನು ಹಾಗೆಯೇ ಮಾಡಿದನು. ಅನಂತರ ಆ ವೀರಾಗ್ರೇಸ ರನು ಎದ್ದು ಎಚ್ಚರಿಕೆಯಿಂದ ಕೂಡಿದವನಾಗಿ ಇರ್ದೇನೆಂದು ಕೇಳಲು ಉಲೂಪಿಯು ಆತನನ್ನು ಕುರಿತು ಹೀಗೆಂದಳು. ಪ್ರಾಣನಾಥಾ! ಭೀಷ್ಮನು ನಿನ್ನೊಡನೆ ಯುದ್ಧ ಮಾಡುವುದನ್ನು ಬಿಟ್ಟಮೇಲೆ ನೀನು ಆತನನ್ನು ಅಧರ್ಮದಿಂದ ಕೊಂದೆಯಾದಕಾರಣ ವಸುಗಳು ನಿನಗೆ ಶಾಪವನ್ನು ಕೊಟ್ಟರು. ನಾನು ಇದನ್ನು ತಿಳಿದು ಹೆಚ್ಚಾಗಿ ವ್ಯಥೆ ಹೊಂದಿ ನಮ್ಮ ತಂದೆಯಬಳಿಗೆ ಹೋಗಿ ನನ್ನ ಜೀವಿತೇಶ್ವರನನ್ನು ಕಾಪಾಡಬೇಕೆಂದು ಬೇಡಲು ಆತನು ಆ ವಸುಗಳ ಬಳಿಗೆ ಹೋಗಿ ಅವರ ಕೋಪವನ್ನು ಸಮಾಧಾನಪಡಿ ಸಲು ಅವರು ಅರ್ಜುನನು ತನ್ನ ಮಗನಿಂದ ಹತನಾಗಿ ಪಾಪಫಲವನ್ನನುಭವಿಸಿ ಶಾಪ ವಿಮುಕ್ತನಾಗುವನೆಂದು ಅನುಗ್ರಹಿಸಿದರು ಎಂದು ಹೇಳಿದಳು. ಪಾರ್ಥನು ಯಜ್ಞ ಕ್ಕೆ ಬರುವಂತೆ ಮಗನಿಗೆ ಅಪ್ಪಣೆಕೊಟ್ಟು ಅನಂತರ ಅನೇಕ ದೇಶಗಳನ್ನು ದಾಟಿ ಹೊರಟು ಕೊನೆಗೆ ಹಸ್ತಿನಾಪುರವನ್ನು ಸೇರಲು ಪಟ್ಟಣಿಗರೆಲ್ಲರೂ ಆತನು ಹಾಗೆ ವಿಜಯಹೊಂದಿ ಪುನಃ ಬಂದುದಕ್ಕೆ ಹೆಚ್ಚಾಗಿ ಆನಂದಹೊಂದಿದವರಾಗಿ ಮಹಾವೈ ಭವದಿಂದ ಎದುರುಗೊಂಡು ಪ್ರೀತಿ ಹೆಚ್ಚುತಿರಲು ಪಟ್ಟಣಕ್ಕೆ ಕರೆದುಕೊಂಡು ಬಂದರು.

ಆ ಮಹಾ ಯಜ್ಞದಲ್ಲಿ ಲೆಕ್ಕಮಾಡಲಾರದಷ್ಟು ಧನವು ವ್ಯಯಮಾಡಲ್ಪಟ್ಟಿತು. ದ್ವಾರಪ್ರದೇಶಗಳೂ ಯೂಪಸ್ತಂಭವೂ ಪಾತ್ರೆಗಳೂ ಎಲ್ಲವೂ ಸುವರ್ಣಮಯವಾಗಿ ದ್ದುವು. ಕೋಟ್ಯಾಂತರ ನಿಷ್ಕಗಳನ್ನು ದಕ್ಷಿಣೆ ಕೊಟ್ಟರು. ಧರ್ಮತನಯನು ತಾನು ಜಯಿಸಿದ ಭೂಮಿಯೆಲ್ಲವನ್ನೂ ವೇದವ್ಯಾಸಮುನೀಂದ್ರನಿಗೆ ದಕ್ಷಿಣೆಯಾಗಿ ಕೊಟ್ಟು

ತಾನು ಅರಣ್ಯಕ್ಕೆ ಹೊರಡಲು ಅಪ್ಪಣೆ ಕೊಡೆಂದು ಕೇಳಿದನು. ಆ ಮಾತುಗಳನ್ನು ಕೇಳಿ ವ್ಯಾಸನು ಕೌಂತೇಯನೊಡನೆ ಕ್ರಯಕ್ಕಾಗಿ ಬಂಗಾರವನ್ನು ಕೊಟ್ಟು ಈ ಭೂಮಿಯನ್ನು ಬಿಡಿಸಿಕೊಳ್ಳೆಂದು ಹೇಳಲು ಆ ಪಾರ್ಥಿವೇಶ್ವರನು ಒಪ್ಪಿ ಅದರಂತೆ ಮಾಡಿದನು. ಆ ಸಂಯಮೀಂದ್ರನು ಆ ಬಂಗಾರವನ್ನೆಲ್ಲಾ ಎಲ್ಲರಿಗೂ ಹಂಚಿಕೊಡಲು ಬ್ರಾಹ್ಮಣರೂ ವೈಶ್ಯರೂ ಮೊದಲಾದ ಸರ್ವಜನಗಳೂ ಅಪರಿಮಿತ ಧನದಿಂದ ಪರಿತೃಪ್ತರಾಗಿ ತಮ್ಮ ತಮ್ಮ ಮನೆಗಳನ್ನು ಸೇರಿದರು. ಆ ಸ್ಥಳದಲ್ಲಿ ಒಂದು ಆಶ್ಚರ್ಯವುಂಟಾಯಿತು. ಅರ್ಧಶರೀರವು ಬಂಗಾರವಾಗಿ ಪ್ರಕಾಶಿಸುತ್ತಿದ್ದ ಮುಂಗಸಿಯೊಂದು ಅಲ್ಲಿಗೆ ಬಂದು ಹೀಗೆ ಹೇಳಿತು—ಧರಣೀನಾಥರೇ! ಪೂರ್ವದಲ್ಲಿ ಕುರುಕ್ಷೇತ್ರದಲ್ಲಿ ಉಂಛವೃತ್ತಿಯಿಂದ ಜೀವಿಸುತ್ತಿದ್ದ ದಾನಶೌಂಡನಾದ ಒಬ್ಬ ಬ್ರಾಹ್ಮಣನು ದಾನ ಮಾಡಿದ ಸ್ವಲ್ಪ ಹುರಿಟ್ಟಿಗೆ ಈ ಅಶ್ವಮೇಧವು ಸರಿಬರಲಾರದು ಎನ್ನಲು ಅಲ್ಲಿದ್ದ ಜನಗಳು ಅದು ಹೇಗೆಂದು ಕೇಳಲು ಆ ನಕುಲವು ಹೀಗೆಂದು ಹೇಳಿತು.

ಪೂರ್ವಕಾಲದಲ್ಲಿ ಕುರುಕ್ಷೇತ್ರದಲ್ಲಿ ಒಬ್ಬ ಬ್ರಾಹ್ಮಣನು ತನ್ನ ಕುಟುಂಬದೊಡನೆ ಕೂಡಿ ವಾಸಮಾಡುತ್ತಾ ಹೊಲಗಳಿಗೆ ಹೋಗಿ ಅಲ್ಲಿ ಉದಿರಿದ್ದ ಧಾನ್ಯಗಳನ್ನು ಆರಿಸಿಕೊಂಡು ಬಂದು ನಿಯತಕಾಲಕ್ಕೆ ತಾನು ಒಂದು ಹೊತ್ತು ಊಟಮಾಡುತ್ತಾ ಜೀವಯಾತ್ರೆಯನ್ನು ನಡೆಯಿಸುತ್ತಿದ್ದನು. ಹೀಗಿರಲು ದೊಡ್ಡದಾದ ಕ್ಷಾಮಬಂದುದರಿಂದ ಆತನಿಗೆ ಅನೇಕದಿನಗಳು ಕಾದರೂ ಒಂದು ದಿನಕ್ಕೆ ತಕ್ಕಷ್ಟು ಆಹಾರ ಸಿಕ್ಕದಂತಾಯಿತು. ಇದರಿಂದ ಆತನು ಸುತಸತೀಸ್ನುಷಾ ಸಹಿತನಾಗಿ ಆಹಾರವಿಲ್ಲದೆ ಅಸ್ಥಿಮಾತ್ರಾವಶಿಷ್ಟನಾಗಿದ್ದನು. ಒಂದಾನೊಂದುದಿನ ಆ ಬ್ರಾಹ್ಮಣೋತ್ತಮನು ಸ್ವಲ್ಪ ಧಾನ್ಯವನ್ನು ಆರಿಸಿಕೊಂಡು ಬಂದು ಅದನ್ನು ಹಿಟ್ಟಾಗಿ ಮಾಡಿ ನಾಲ್ಕು ಪಾಲು ಮಾಡಿಕೊಂಡು ಎಲ್ಲರೂ ಊಟಮಾಡಲು ಯತ್ನಿಸಿದರು. (ಆತನು ತಂದ ಹಿಟ್ಟು ಪ್ರಸ್ಥಮಾತ್ರವಾದುದರಿಂದ ಆ ವಿಪ್ರನಿಗೆ ಆ ದಿನದಿಂದ ಸಕ್ತುಪ್ರಸ್ಥನೆಂದು ಹೆಸರಾಯಿತು.) ಅಷ್ಟರಲ್ಲಿಯೇ ಅಲ್ಲಿಗೆ ಒಬ್ಬ ಅತಿಥಿಯು ಬರಲು ಅವರುಗಳು ಆತನನ್ನು ಅತ್ಯಂತ ಭಕ್ತಿಯಿಂದ ನಮಸ್ಕರಿಸಿ ಅರ್ಘ್ಯಪಾದ್ಯಾಸನಗಳಿಂದ ಪೂಜಿಸಿದರು. ಆ ಬ್ರಾಹ್ಮಣನು ತನ್ನ ಪಾಲಿನ ಹಿಟ್ಟನ್ನು ಆ ಅತಿಥಿಗೆ ಕೊಡಲು ಅದನ್ನು ತಿಂದು ಹಸಿವು ತೀರದಿರಲು ಆ ಬ್ರಾಹ್ಮಣನ ಪತ್ನಿಯು ತನ್ನ ಪಾಲಿನ ಹಿಟ್ಟನ್ನು ಪತಿಯ ಮುಂದಿಟ್ಟು ಇದನ್ನು ಅತಿಥಿಗೆ ಕೊಟ್ಟು ಆತನನ್ನು ತೃಪ್ತಿಪಡಿಸೆಂದಳು. ಆ ಭೂಸುರೋತ್ತಮನು ಆ ಸ್ತ್ರೀಯು ಕೃಶಿಸಿಹೋದವಳಾಗಿ ನಡುಗುತ್ತಿದ್ದುದನ್ನು ನೋಡಿ 'ನೀನು ಬಳಲಿರುವೆ; ಇದನ್ನು ನೀನೇ ತಿನ್ನು' ಎಂದು ಹೇಳಲು ಆ ಸಾಧ್ವಿಯು ಮೃದುವಚನಗ

ಳಿಂದ ಒತ್ತಿಹೇಳಲು ಆತನು ಸಮ್ಮತಿಪಟ್ಟು ಆ ಸಕ್ತುವನ್ನು ಅತಿಥಿಗೆ ಕೊಟ್ಟನು. ಅದರಿಂದಲೂ ಅತಿಥಿಯು ತೃಪ್ತನಾಗದಿರಲು ಆತನ ಪುತ್ರನೂ ತನ್ನ ಪಾಲಿನ ಸಕ್ತುವನ್ನು ತೆಗೆದುಕೊಂಡು ಅತಿಥಿಗೆ ಕೊಡೆಂದು ತಂದೆಯನ್ನು ಬೇಡಲು ಆತನು ತನ್ನ ಮುಖದಲ್ಲಿ ಕಿರುನಗೆಯುಂಟಾಗುತಿರಲು ಅದನ್ನು ಅತಿಥಿಗೆ ಕೊಟ್ಟನು. ಅದರಿಂದಲೂ ಅತಿಥಿಯ ಕ್ಷುತ್ತು ನಿವಾರಣೆಯಾಗದಿರಲು ಆ ಬ್ರಾಹ್ಮಣನು ಏನನ್ನು ಮಾಡುವುದಕ್ಕೂ ಯತ್ನವಿಲ್ಲದೆ ಯೋಚಿಸುತ್ತಿರಲು ಆತನ ಸೊಸೆಯು ತನ್ನ ಪಾಲಿನ ಹಿಟ್ಟನ್ನೂ ಅತಿಥಿಗೆ ಕೊಡೆಂದು ಹೇಳಿದಳು. ಆತನು ತನ್ನ ಸೊಸೆಯ ಶರೀರದ ಕೋಮಲತ್ವವನ್ನು ನೋಡಿ ಮನಸ್ಸಿನಲ್ಲಿ ಹೆಚ್ಚಾಗಿ ವ್ಯಥೆಹೊಂದಿ ಈ ಲಲನೆಯ ಪಾಲಿನ ಸಕ್ತುವನ್ನು ನಾನು ಹೇಗೆ ತೆಗೆದುಕೊಳ್ಳಲೆಂದು ಯೋಚಿಸುತ್ತಿರಲು ಆಕೆಯು ವಿನಯದಿಂದ ಕೂಡಿ ತಪ್ಪದೆ ಇದನ್ನು ಅತಿಥಿಗೆ ಸಮರ್ಪಿಸೆಂದು ಬೇಡಿಕೊಂಡಳು. ಆ ಬ್ರಾಹ್ಮಣನು ಅದನ್ನು ತೆಗೆದುಕೊಂಡು ಅತಿಥಿಗೆ ಕೊಟ್ಟನು. ಆ ಅತಿಥಿಯು ಅದನ್ನುಪಯೋಗಿಸಿ ದಿವ್ಯ ಪ್ರಭಾಭಾಸುರನಾಗಿ ಅವರೊಡನಿಂತೆಂದನು—ನಾನು ಧರ್ಮದೇವತೆಯಯ್ಯಾ, ನಿಮ್ಮ ಧರ್ಮಬುದ್ಧಿಯನ್ನು ಪರೀಕ್ಷಿಸಬೇಕೆಂದು ಯೋಚಿಸಿ ನಾನು ಹೀಗೆ ಮಾಡಿದೆನು. ನಿಮ್ಮ ಧರ್ಮವು ನಿರ್ಮಲವಾಗಿ ಹೀಗಿರುವುದೇ ? ಇನ್ನು ನೀವೆಲ್ಲರೂ ಎದ್ದು ಪರಮಸುಖವನ್ನನುಭವಿಸುವುದಕ್ಕಾಗಿ ಸ್ವರ್ಗಕ್ಕೆ ತೆರಳುವವರಾಗಿರಿ ಎಂದು ಹೇಳಿ ಅವರನ್ನು ಬ್ರಹ್ಮಲೋಕಕ್ಕೆ ಕರೆದುಕೊಂಡು ಹೋದನು. ಆ ಸಕ್ತುವಿನಲ್ಲಿನ ಕಣಗಳು ಕೆಲವು ಭೂಮಿಯಮೇಲೆ ಉದುರಿರಲು ಅದರ ಮೇಲೆ ನಾನು ಹೊರಳಲಾಗಿ ಆಸಕ್ತುಪ್ರಸ್ಥನ ದಾನಯಜ್ಞದ ಮಹಿಮೆಯಿಂದ ನನ್ನ ಶರೀರದಲ್ಲಿ ಅರ್ಧಭಾಗವು ಸುವರ್ಣಮಯವಾಯಿತು, ಆ ದಿನ ಮೊದಲ್ಗೊಂಡು ನಾನು ಮಿಕ್ಕ ಅರ್ಧಭಾಗವನ್ನು ಸ್ವರ್ಣಮಯವಾಗಿ ಮಾಡಬೇಕೆಂಬ ಯೋಚನೆಯಿಂದ ಅನೇಕ ಯಜ್ಞಗಳಿಗೆ ಹೋದೆನಾದರೂ ಅಷ್ಟುಮಹಿಮೆಯುಳ್ಳ ಯಜ್ಞವನ್ನು ಇದುವರೆಗೆ ಎಲ್ಲಿಯೂ ನೋಡಲಿಲ್ಲ. ಈ ಧರ್ಮಜನು ಮಾಡಿದ ಅಶ್ವಮೇಧಯಾಗಕ್ಕೆ ಬಂದಾಗ್ಯೂ ನನ್ನ ಕೋರಿಕೆಯು ಸಫಲವಾಗಲಿಲ್ಲ. ಆದುದರಿಂದ ಸುವರ್ಣರತ್ನರಾಶಿಗಳೆಷ್ಟು ಕೊಟ್ಟಾಗ್ಯೂ ಆ ಯಜ್ಞವು ಸಕ್ತುಪ್ರಸ್ಥನ ಯಾಗವನ್ನು ಹೋಲಲಾರದೆಂದು ಹೇಳಿದೆನು ಎಂದು ಹೇಳಿ ಆ ಮುಂಗಸಿಯು ಹೊರಟುಹೋಯಿತು.



# ಆಶ್ರಮವಾಸಪರ್ವ.

ಆಶ್ರಮವಾಸಪರ್ವದಲ್ಲಿ ಕುಂತೀ ಗಾಂಧಾರೀ ಧೃತರಾಷ್ಟ್ರರ ಅವಸಾನದ ರೀತಿಯು ವಿವರಿಸಲ್ಪಟ್ಟಿರುವುದು. ತನ್ನ ಮಕ್ಕಳೆಲ್ಲರನ್ನೂ ನಾಶಮಾಡಿ ನನ್ನನ್ನೂ ಇವರು ಅಲಕ್ಷ್ಯಮಾಡುವರೆಂಬ ಭಾವನೆಯನ್ನು ಆ ಅಂಧನೃಪತಿಯು ಹೊಂದದಿರುವಂತೆ ಯುಧಿಷ್ಠಿರನೂ ಆತನ ತಮ್ಮಂದಿರೂ ಆತನನ್ನು ಹೆಚ್ಚು ಭಕ್ತಿಯಿಂದ ಸೇವೆಮಾಡುತ್ತಾ ಆತನ ಅಪ್ಪಣೆಯನ್ನು ನಡೆಸುತ್ತಾ ಇರಲು ಹದಿನೈದು ವರ್ಷಗಳು ಧೃತರಾಷ್ಟ್ರನು ಇವರಲ್ಲಿ ವಿಶ್ವಾಸಭರಿತನಾಗಿ ಸೌಖ್ಯದಿಂದಿದ್ದನು. ಪವನತನಯನೊಬ್ಬನ ಮನಸ್ಸಿನಲ್ಲಿಮಾತ್ರ ಇನ್ನೂ ವೈಷಮ್ಯವು ಸ್ವಲ್ಪವಿತ್ತು. ಆತನು ವೃದ್ಧನೃಪತಿಯ ವಿಷಯದಲ್ಲಿ ಪ್ರಕಾಶದಲ್ಲಿ ವಿನಯವನ್ನು ತೋರಿಸುತ್ತಾ ಇತರರು ಇಲ್ಲದಿರುವಾಗ ಆತನು ಕೇಳುವಂತೆಯೇ ಪರುಷವಾಕ್ಯಗಳನ್ನಾಡುತ್ತಾ ಗೂಢವಾಗಿಯೇ ಆತನ ಮನಸ್ಸಿಗೆ ಬಾಧೆಯನ್ನುಂಟುಮಾಡುತ್ತಿದ್ದನು. ಅನಂತರ ಒಂದುದಿನ ಧೃತರಾಷ್ಟ್ರನು ಪಾಂಡವರನ್ನು ಕರೆಯಿಸಿ ತನ್ನ ಅವಿವೇಕದಿಂದ ಯುದ್ಧಸಂಪ್ರಾಪ್ತವಾದುದನ್ನೂ ಅದಕ್ಕಾಗಿ ತನ್ನ ಮನಸ್ಸಿನಲ್ಲಿ ಪಶ್ಚಾತ್ತಾಪ ಉಂಟಾದುದನ್ನೂ ವಿಸ್ತಾರವಾಗಿ ಹೇಳಿ ಧರ್ಮಜನೊಡನೆ ಹೀಗೆಂದು ಹೇಳಿದನು. ನಾನು ಗಾಂಧಾರೀಸಮೇತನಾಗಿ ತಪಸ್ಸನ್ನು ಮಾಡಿ ಶರೀರತ್ಯಾಗಮಾಡಲೋಸುಗ ಅರಣ್ಯಕ್ಕೆ ಹೋಗಲು ಯತ್ನಿಸಿ ನಿನ್ನನುಮತಿಯನ್ನು ಅಪೇಕ್ಷಿಸುವೆನು ಎನ್ನಲು ಧರ್ಮಜನು ಹಾಗಾಗಕೂಡದೆಂದು ಅನೇಕವಿಧದಿಂದ ನಿವಾರಿಸಿದನು. ಆದಾಗ್ಯೂ ಅಂಧನೃಪತಿಯು ತನ್ನ ಕೋರಿಕೆಯನ್ನು ತ್ಯಾಗಮಾಡಲಿಷ್ಟವಿಲ್ಲದೆ ಅದನ್ನೇ ಹೇಳುತ್ತಾ ವೃದ್ಧಾಪ್ಯದ ದೆಸೆಯಿಂದಲೂ ಉಪವಾಸದ ದೆಸೆಯಿಂದಲೂ ಗ್ಲಾನಿ ಹೊಂದಿ ಮೂರ್ಛಿತನಾದನು. ಅದನ್ನು ನೋಡಿ ಧರ್ಮಜನು ಪರಿತಪಿಸುತಿರಲು ವೇದವ್ಯಾಸನು ಅಲ್ಲಿಗೆ ದಯಮಾಡಿಸಿ ಆತನೊಡನೆ ಹೀಗೆಂದನು. ಈತನ ಕೋರಿಕೆಯನ್ನು ನಡೆಯಿಸಲು ಅಭಿಮತಿಸು. ಕ್ಷತ್ರಿಯ ಕುಲಜನಿಗೆ ಯುದ್ಧದಲ್ಲಿ ಮೃತನಾಗುವುದೊಂದು ಅರಣ್ಯದಲ್ಲಿ ತಪಸ್ಸುಮಾಡಿ ಶರೀರತ್ಯಾಗಮಾಡುವುದೊಂದು ಇವೆರಡೂ ಯುಕ್ತವು ಎನ್ನಲು ಕೌಂತೇಯನು ಮನಸ್ಸಿನಲ್ಲಿ ಪಲ್ಲಟವುಂಟಾದರೂ ಕೊನೆಗೆ ಸಮ್ಮತಿಪಟ್ಟನು. ಅನಂತರದಲ್ಲಿ ಧೃತರಾಷ್ಟ್ರನು ಅರಣ್ಯಕ್ಕೆ ಹೊರಡುವುದಕ್ಕೆ ಮುಂಚೆ ಆತನು ಹೇಳುವ ನೀತಿಗಳನ್ನು ಕೇಳುವುದಕ್ಕಾಗಿ ಪಾಂಡವರೆಲ್ಲಾ ಒಟ್ಟಾಗಿ ಸೇರಲು ಆತನು

ಧರ್ಮತನಯನಿಗೆ ಅನೇಕ ರಾಜನೀತಿಗಳನ್ನು ಬೋಧಿಸಿ ಸ್ವಲ್ಪ ವಿಶ್ರಾಂತಿಹೊಂದಿ ಅನಂತರ ಪುರಜನರನ್ನು ಕರೆಯಿಸಿ ಅವರಿಗೆ ಪ್ರಿಯೋಕ್ತಿಗಳನ್ನು ಹೇಳಿ ಹೀಗೆಂದನು. ವೃದ್ಧರೂ ಪುತ್ರ ವಿಹೀನರೂ ಆದಕಾರಣದಿಂದ ನಾನೂ ಗಾಂಧಾರಿಯೂ ಅರಣ್ಯಕ್ಕೆ ಹೊರಡುವೆವು. ನಾನು ನಿಮ್ಮಗಳಿಗೆ ಹಿತಮಾಡಲು ಯತ್ನಿಸಿದೆನಾದರೂ ನನ್ನ ತನಯನ ದೋಷದಿಂದಲೂ ನನ್ನ ದೋಷದಿಂದಲೂ ಘೋರಯುದ್ಧವು ಸಂಪ್ರಾಪ್ತವಾಗಿ ಅನೇಕರು ಮೃತರಾದರು. ಇದಕ್ಕಾಗಿ ನೀವುಗಳು ನನ್ನನ್ನು ಕ್ಷಮಿಸಬೇಕು. ರಾಜ್ಯವನ್ನು ಧರ್ಮಜನ ಕೈಗೊಪ್ಪಿಸಿರುವೆನು. ಆತನು ನಿಮ್ಮನ್ನು ಧರ್ಮದಿಂದ ಪಾಲಿಸುವನು. ಮೃತರಾದ ನನ್ನ ಪುತ್ರರು ಮಾಡಿದ ಅಪರಾಧಗಳನ್ನು ಸಹಿಸಿ ಅವುಗಳನ್ನು ಮರೆಯಿರಿ. ನಮಗೆ ವನಕ್ಕೆ ಹೊರಡಲು ಅನುಮತಿ ಕೊಡಿ, ಎಂದು ಕಾರುಣ್ಯಪೂರ್ವಕವಾಗಿ ಹೇಳಲು ಅವರು ಶೋಕದಿಂದ ಕೂಡಿದವರಾಗಿ ಆ ವೃದ್ಧನೃಪತಿಯ ಮಾತುಗಳನ್ನು ಕೇಳಿ ಕಣ್ಣುಗಳಲ್ಲಿ ನೀರು ಸುರಿಸುತ್ತಾ ಪ್ರತ್ಯುತ್ತರ ಹೇಳದೆ ಸುಮ್ಮನಿದ್ದರು. ಧೃತರಾಷ್ಟ್ರನು ಪುನಃ ಕೆಲವು ಮಾತುಗಳನ್ನು ಹೇಳಿ ನನಗೆ ಇನ್ನು ಕ್ಷತ್ರಿಯಧರ್ಮದಿಂದ ಬಿಡುಗಡೆಯನ್ನುಂಟುಮಾಡಿರೆಂದು ಕೇಳಿಕೊಂಡನು. ಆ ಸಮಯದಲ್ಲಿ ಪುರಜನರು ತಮ್ಮ ಪರವಾಗಿ ಮಾತನಾಡಲಿಕ್ಕೆ ಒಬ್ಬ ಬ್ರಾಹ್ಮಣನನ್ನು ಮುಂದೆ ನಿಲ್ಲಿಸಲು, ಆತನು ಆ ನೃಪತಿಯೊಡನೆ ಹೀಗೆಂದನು. ಜನಗಳೆಲ್ಲರೂ ನಿನ್ನಮೇಲೆ ಪ್ರೀತಿಯನ್ನೂ ಕೃತಜ್ಞತೆಯನ್ನೂ ತೋರಿಸತಕ್ಕವರಾಗಿರುವರು. ನಿನ್ನನ್ನೂ ನಿನ್ನ ಪುತ್ರರನ್ನೂ ನಾವೆಲ್ಲರೂ ನಿಜವಾಗಿಯೂ ಅಧೀಶ್ವರರನ್ನಾಗಿ ಭಾವಿಸಿ ಸೇವೆಮಾಡಿದೆವು. ಇನ್ನು ನಿನಗೆ ಇಷ್ಟ ಬಂದ ತೆರದಲ್ಲಿ ಸೌಖ್ಯದಿಂದ ಅಡವಿಗೆ ಹೋಗಿ ಧರ್ಮಯುಕ್ತವಾದ ನಿನ್ನ ಕೋರಿಕೆಯನ್ನು ಸಲ್ಲಿಸುವನಾಗು ಎಂದು ಅನುಮತಿಕೊಟ್ಟನು.

ಅನಂತರ ಧೃತರಾಷ್ಟ್ರನು ಕಾರ್ತಿಕಮಾಸದ ಹುಣ್ಣಿಮೆಯದಿನ ವನಕ್ಕೆ ಹೊರಡಲು ನಿಶ್ಚಯಿಸಿ ತಾನು ಹೊರಡುವ ಮೊದಲು ಭೀಷ್ಮಾದಿ ಕುರುಪ್ರವೀರರಿಗೆ ಶ್ರಾದ್ಧಾದಿಗಳನ್ನು ನಡೆಯಿಸುವುದಕ್ಕಾಗಿ ಧನವನ್ನು ಕೊಡಿರೆಂದು ಪಾಂಡವರನ್ನು ಕೇಳಲು ಯುಧಿಷ್ಠಿರಾರ್ಜುನರು ಸಂತೋಷದಿಂದ ನಾವೂ ನಮಗಿರುವುದೆಲ್ಲವೂ ನಿನ್ನ ಪದಾರ್ಥವೇ ಆಗಿರುವುವೆಂದು ಹೇಳಿದರು. ಅದಕ್ಕೆ ಮಾರುತಾತ್ಮಜನು ಒಬ್ಬನೇ ಒಪ್ಪದಿರಲು ಅರ್ಜುನನು ಲಲಿತವಚನಗಳಿಂದಲೂ ಧರ್ಮಜನು ಕೋಪಯುಕ್ತವಾದ ವಚನಗಳಿಂದಲೂ ಹೇಳಿದಾಗ್ಯೂ ಕೇಳದೆ ಮೊದಲು ಅವರು ಮಾಡಿದ ಅಪಕಾರಗ

ಳನ್ನೂ ನಾವು ಹೊಂದಿದ ಕಷ್ಟಗಳನ್ನೂ ಮರೆಯಲಾಗುವುದಿಲ್ಲವೆಂದು ಹೇಳಿದನು. ಕೊನೆಗೆ ಭೀಮನು ಒಪ್ಪಲು ಧೃತರಾಷ್ಟ್ರನು ಅನೇಕ ದ್ರವ್ಯಗಳನ್ನು ಖರ್ಚು ಮಾಡಿ ಶ್ರಾದ್ಧಕ್ರಿಯೆಗಳನ್ನು ನಿರ್ವರ್ತಿಸಿ ರಾಜಧರ್ಮಗಳನ್ನೂ ರಾಜೋಚಿತರೀತಿಯಲ್ಲಿ ಪೂರ್ತಿಮಾಡಿ ಪತಿವ್ರತಾಶಿರೋಮಣಿಯಾದ ನಿಜಭಾರ್ಯೆಯೊಡನೆ ಪಾದಚಾರಿಯಾಗಿ ಪಟ್ಟಣವನ್ನು ಬಿಟ್ಟು ತೊಡವರಿಸುತ್ತಿರುವ ನಡಿಗೆಯಿಂದ ಹೊರಟನು. ವಿದುರ ಸಂಜಯರು ಆತನೊಡನೆ ಹೊರಟರು. ತನಯರು ಎಷ್ಟು ನಿವಾರಿಸಿದಾಗ್ಯೂ ರೋದಿಸುತ್ತಿದ್ದಾಗ್ಯೂ ಅವರುಗಳಿಗೆ ಸಮಾಧಾನವಚನವನ್ನು ಹೇಳಿ ಕುಂತಿಯೂ ಅವರ ಹಿಂದೆಯೇ ಹೊರಟಳು. ಆ ಸಮಯದಲ್ಲಿ ಜನಗಳು ಶೋಕವೇ ಆಕಾರಹೊಂದಿರುವಂತೆ ವ್ಯಥೆ ಪಡುತಿರಲು ಪಟ್ಟಣದಿಂದ ಹೊರಹೊರಟು ಬಹಳ ದೂರಹೋಗಿ ವೃದ್ಧನೃಪತಿಯು ಜನಗಳಿಗೆ ಕಣ್ಣುಮರೆಯಾದನು. ಪಾಂಡವರು ತಮ್ಮ ತಾಯಿಯ ಗಮನಕ್ಕೆ ಕುಂದಿ ಸಮಾಧಾನ ಹೊಂದದೆ ಯಾವಾಗಲೂ ವ್ಯಥೆಪಡುತಿದ್ದರು. ಕೆಲವು ದಿನಗಳನಂತರ ಅರಣ್ಯದಲ್ಲಿ ವಾಸಮಾಡುತ್ತಿದ್ದ ತಮ್ಮವರನ್ನು ನೋಡುವುದಕ್ಕಾಗಿ ಪಾಂಡವರು ಹೊರಟರು. ಅಲ್ಲಿ ಹೋಗಿ ಅವರನ್ನು ನೋಡಿ ಎಲ್ಲರ ಚರಣಗಳಿಗೂ ನಮಸ್ಕರಿಸಿ ಅವರನ್ನು ತಬ್ಬಿಕೊಂಡು ಸ್ವಲ್ಪಕಾಲ ಅಲ್ಲಿ ವಾಸಮಾಡಿದರು. ವಿದುರನು ಅಲ್ಲಿಲ್ಲದಿರಲು ಆತನೆಲ್ಲಿ ಹೋದನೆಂದು ಧರ್ಮತನಯನು ಧೃತರಾಷ್ಟ್ರನನ್ನು ಕೇಳಿದನು. ಆ ದೊರೆಯು ಉತ್ತರ ಹೇಳುವಷ್ಟರಲ್ಲಿ ವಿದುರನು ಸಮೀಪದಲ್ಲಿಯೇ ಕಾಣಿಸಿದನು. ಧರ್ಮತನಯನು ಜಾಗ್ರತೆಯಾಗಿ ಎದ್ದು ಆತನ ಸಮೀಪಕ್ಕೆ ಹೋಗುತಿರಲು ವಿದುರನು ಪುನಃ ಹಿಂದಕ್ಕೆ ಓಡಿದನು. ಧರ್ಮನಂದನನು ಆತನ ಹಿಂದೆಯೇ ಓಡುತ್ತಾ ಕೂಗಿಕೊಳ್ಳುತ್ತಿರಲು ಬಹು ದೂರಹೋಗಿ ಒಂದು ಏಕಾಂತಸ್ಥಳವನ್ನು ಸೇರಿ ವಿದುರನು ಅಲ್ಲಿ ಒಂದು ಮರದ ಒತ್ತಾಸೆಯಿಂದ ನಿಂತನು. ಧರ್ಮಪುತ್ರನು ಆತನ ಸಮೀಪವನ್ನು ಹೊಂದಿ ನಮಸ್ಕರಿಸಲು ವಿದುರನು ಆ ದೊರೆಯನ್ನು ತಪ್ಪದೆ ನೋಡುತ್ತಾ ಯೋಗಬಲವನ್ನು ಹೊಂದಿ ತನ್ನ ಕಳೇಬರವನ್ನು ತ್ಯಾಗಮಾಡಿ ತನ್ನ ಪ್ರಾಣವನ್ನು ಧರ್ಮಜನ ಪ್ರಾಣಗಳೊಡನೆ ಸೇರಿಸಲು ಆತನು ತನಗೆ ತೇಜೋಬುದ್ಧಿ ಬಲಗಳು ಹೆಚ್ಚಾದುದರಿಂದ ತನ್ನ ಪೂರ್ವವೃತ್ತಾಂತಗಳು ಸ್ಮರಣೆಗೆ ಬಂದುವು. ಹೀಗೆ ವಿದುರನು ಶರೀರತ್ಯಾಗಮಾಡಿ ಉತ್ತಮಗತಿಯನ್ನು ಹೊಂದಲು ಯುಧಿಷ್ಠಿರನು ಪುನಃ ಬಂದು ಆ ಸಂಗತಿಯನ್ನು ಎಲ್ಲರಿಗೂ ತಿಳಿಸಿದನು.

ಹೀಗೆ ಪಾಂಡವರು ಆ ತಪಸ್ವಿಗಳ ಬಳಿಯಲ್ಲಿ ಒಂದು ಮಾಸ ಕಳೆಯಲು ವೇದವ್ಯಾಸನು ಆ ಸ್ಥಳಕ್ಕೆ ಬಂದು ಧೃತರಾಷ್ಟ್ರನನ್ನು ನೋಡಿ ಇನ್ನೂ ನಿನ್ನ ಮನಸ್ಸಿನಲ್ಲಿ ವ್ಯಥೆ ಇರುವುದೇ ಎಂದು ಕೇಳಲು ಅವನು ಆ ಮುನಿನಾಥನೊಡನಿಂತೆಂದನು. ಭೀಷ್ಮದ್ರೋಣಾದಿಗಳನೇಕರನ್ನು ಕೊಲ್ಲಿಸಿದ ನನ್ನ ಪುತ್ರರಗತಿ ಏನಾಯಿತೋ ಎಂದು ನನ್ನ ಮನಸ್ಸು ಕಳವಳಿಸುತ್ತಿರುವುದು, ಎನ್ನಲು ಕುಂತಿಯು ಜ್ಯೇಷ್ಠಪುತ್ರನಾದ ಕರ್ಣನನ್ನು ನೋಡಲಪೇಕ್ಷಿಸುವೆನೆಂದು ವಿಜ್ಞಾಪಿಸಿದಳು. ಗಾಂಧಾರಿಯು ನನ್ನ ಪುತ್ರರಗತಿ ಏನಾಯಿತೋ ತಿಳಿಸಬೇಕೆಂದು ಪ್ರಾರ್ಥಿಸುತ್ತಾ ಪಾಂಚಾಲಿ ಸುಭದ್ರೆ ಮೊದಲಾದ ಸತಿಯರು ಯುದ್ಧದಲ್ಲಿ ಮೃತರಾದ ತಮ್ಮ ಪುತ್ರರೆಂತಿರುವರೋ ತಿಳಿಸಬೇಕೆಂದು ಪ್ರಾರ್ಥಿಸುವರು ಎನ್ನಲು ವ್ಯಾಸನು ಅವರನ್ನು ಕುರಿತು ಹೀಗೆ ಹೇಳಿದನು. ರಣದಲ್ಲಿ ಮೃತರಾದ ಶೂರರೆಲ್ಲರೂ ಪೂರ್ವದಲ್ಲಿ ಋಷಿಗಳೂ ಗಂಧರ್ವರೂ ರಾಕ್ಷಸರೂ ಸುರಾಸುರರಾಗಿದ್ದು ಭಾರತಯುದ್ಧಕ್ಕಾಗಿಯೇ ಭೂಮಿಯಲ್ಲಿ ಹುಟ್ಟಿದವರು. ಈ ದಿನ ರಾತ್ರಿ ಗಂಗಾತೀರದಲ್ಲಿ ನಿಮಗೆ ಅವರೆಲ್ಲರನ್ನೂ ತೋರಿಸುವೆನು ಎಂದು ಹೇಳಿ ಅವರೆಲ್ಲರನ್ನೂ ಭಾಗೀರಥೀತೀರಕ್ಕೆ ಕರೆದುಕೊಂಡು ಹೋಗಿ ಆ ಸಂಯಮೀಂದ್ರನು ಆ ದಿನ ರಾತ್ರಿ ಆ ಪಾವನಜಲದಲ್ಲಿ ಸ್ನಾನಮಾಡಿ ರಣನಿಹತರಾದ ಶೂರರೆಲ್ಲರನ್ನೂ ಹೊರಗೆ ಬನ್ನಿರೆಂದು ಕರೆಯಲು ಅವರೆಲ್ಲರೂ ತೇಜೋಮಯವಾದ ದಿವ್ಯಶರೀರಗಳನ್ನು ಧರಿಸಿದವರಾಗಿ ಪ್ರಕಾಶಿಸುತ್ತಾ ಸಂತೋಷವುಕ್ಕುತಿರಲು ಹೊರಟುಬಂದರು. ಆಗ ಕರ್ಣನು ವೈರವನ್ನು ಬಿಟ್ಟು ಪಾಂಡವರಿಗೆ ಸ್ನೇಹಿತನಾದನು. ಅಭಿಮನ್ಯುವೂ ದ್ರೌಪದೇಯರೂ ತಮ್ಮ ತಾಯಿಯರ ಮನಸ್ಸುಗಳಿಗೆ ಸಂತೋಷವನ್ನುಂಟುಮಾಡಿದರು. ಆ ವೀರವರರೆಲ್ಲರೂ ಪೂರ್ವವೈರಗಳನ್ನು ಮರೆತು ಪ್ರಣಯರಸವು ಹೆಚ್ಚುತಿರಲು ಕೂಡಿಯಾಡುತ್ತಿದ್ದರು. ಎಲ್ಲರೂ ಪರಮಾನಂದಭರಿತರಾಗಿ ಅಪರಿಮಿತವಾದ ತೃಪ್ತಿಯನ್ನು ಹೊಂದಿದರು. ಈ ರೀತಿಯಲ್ಲಿ ಆನಂದದಿಂದ ಆ ರಾತ್ರಿಯನ್ನು ಕಳೆದು ಆ ವೀರವರರು ಒಬ್ಬರನ್ನೊಬ್ಬರು ಬಿಟ್ಟು ಹೊರಟು ತಮ್ಮ ತಮ್ಮ ಸ್ಥಳಗಳನ್ನು ಸೇರಲು ಅವರ ಪತ್ನಿಯರೂ ತಮ್ಮ ದೇಹಗಳನ್ನು ಬಿಟ್ಟು ಪತಿಗಳೊಡನೆ ಕೂಡಿ ಪುಣ್ಯಲೋಕಗಳನ್ನು ಹೊಂದಿದರು. ಅನಂತರದಲ್ಲಿ ಧರ್ಮತನಯನೂ ಸಹದೇವನೂ ನಾವೂ ನಿಮ್ಮ ಬಳಿಯಲ್ಲಿಯೇ ಇರುವೆವು ; ಪಟ್ಟಣಕ್ಕೆ ತೆರಳಲೊಲ್ಲೆವೆಂದು ಎಷ್ಟು ಬಲಾತ್ಕಾರದಿಂದ ಹೇಳಿದರೂ ಧೃತರಾಷ್ಟ್ರನೂ ಗಾಂಧಾರಿಯೂ ಕುಂತಿಯೂ ಅವರನ್ನು ಹಿಂದಿರುಗಿ ಹೊರಡುವಂತೆ ಆಜ್ಞೆಮಾಡಿದರು ಪಾಂಡವರು ಅವರನ್ನು

ಬಿಟ್ಟು ಹೊರಟು ಕೊನೆಗೆ ಹಸ್ತಿನಾಪುರವನ್ನು ಸೇರಿದರು. ಹಾಗೆ ಎರಡು ಸಂವತ್ಸರಗಳು ಕಳೆಯಲು ನಾರದನು ಅವರ ಸಮೀಪಕ್ಕೆ ಬಂದು ಅವರನ್ನು ಕುರಿತು ಧೃತರಾಷ್ಟ್ರಾದಿಗಳು ಶ್ರೇಷ್ಠವಾದ ತಪಸ್ಸನ್ನಾಚರಿಸಿ ಸಂಜಯನೊಡನೆ ಕೂಡಿ ಗಂಗಾದ್ವಾರಕ್ಕೆ ಹೋಗಿ ಪುನಃ ಬರುತಿರಲು ಆಯರಣ್ಯದಲ್ಲಿ ಹೆಚ್ಚಾದ ಕಾಡ್ಗಿಚ್ಚುಂಟಾಗಿ ಉರಿಯುತಿರುವುದನ್ನು ನೋಡಿ ಧೃತರಾಷ್ಟ್ರನು ಸಂಜಯನನ್ನು ಹೊರಟುಹೋಗೆಂದು ಹೇಳಿ ಗಾಂಧಾರಿಯೂ ಕುಂತಿಯೂ ತಾನೂ ಆ ಕಾಂತಾರದಲ್ಲಿ ಕುಳಿತುಕೊಂಡು ಸಮಾಧಿನಿಷ್ಠರಾಗಿ ಯಜ್ಞಾಗ್ನಿಸಮುದ್ಭವವಾದ ಆ ದೊಡ್ಡ ಉರಿಯಲ್ಲಿ ದೇಹಗಳನ್ನು ತ್ಯಜಿಸಿ ಪುಣ್ಯಲೋಕಗಳಿಗೆ ಹೋದರು ; ಎಂದು ಹೇಳಲು ಯುಧಿಷ್ಠಿರನು ತಾಯಿಯನ್ನು ಸ್ಮರಿಸಿ ಶೋಕೋದ್ವಿಗ್ನಚಿತ್ತನಾಗಿ ಕೈಗಳನ್ನೆತ್ತಿಕೊಂಡು ಮಗುವಿನಂತೆ ಅಳುತಿರಲು ಆತನ ತಮ್ಮಂದಿರೂ ಹಾಗೆಯೇ ಗಟ್ಟಿಯಾಗಿ ರೋದಿಸಿದರು. ಆ ಸಮಯದಲ್ಲಿ ನಾರದನು ಅವರನ್ನು ಶಾಂತಿವಚನಗಳಿಂದ ಸಮಾಧಾನ ಪಡಿಸಲು ಅವರು ಪ್ರಶಾಂತಿಹೊಂದಿ ಆ ವ್ಯಥೆಯನ್ನು ಬಿಡದಿದ್ದರೂ ತಾಳ್ಮೆಯಿಂದ ರಾಜ್ಯಭಾರ ನಡೆಸುತ್ತಿದ್ದರು. ಆ ಮಹಾಯುದ್ಧ ಮೊದಲ್ಗೊಂಡು ಧೃತರಾಷ್ಟ್ರನ ನಿರ್ವಾಣದವರಿಗೆ ಹದಿನೆಂಟುವರ್ಷಗಳು ಕಳೆದುವು.

## ಮೌಸಲಪರ್ವ.

ಮೌಸಲ ಪರ್ವದ ಎಂಟು ಅಧ್ಯಾಯಗಳಲ್ಲಿ ಯಾದವ ಕುಲಕ್ಷಯವೂ, ಕೃಷ್ಣಬಲರಾಮರ ನಿರ್ವಾಣವೂ ಹೇಳಲ್ಪಟ್ಟಿರುವುದು. ಕುರುಕ್ಷೇತ್ರದಲ್ಲಿ ಯುದ್ಧವು ನಡೆದುದು ಮೊದಲು ಮೂವತ್ತಾರು ವರ್ಷಗಳು ಕಳೆಯಲು ಎಲ್ಲಾ ಕಡೆಯಲ್ಲಿಯೂ ಮಹೋತ್ಪಾತಗಳು ಹುಟ್ಟಿದುವು. ಸೂರ್ಯನು ಕಾಂತಿ ಕುಂದಿದನು. ದಿನಕರ ರಜನಿಕರ ಬಿಂಬಗಳು ಮಹಾತೇಜಮಯವಾದ ಪರಿಧಿಯುಕ್ತವಾದುವು. ಅಷ್ಟರಲ್ಲಿ ಕಣ್ವ ನಾರದ ವಿಶ್ವಾಮಿತ್ರರು ದ್ವಾರಾವತಿಗೆ ಹೋಗಿರಲು ವೃಷ್ಣಿ ಕುಲಜರು ಕೆಲವರು ವಿಧಿನಿರ್ಣಯದಿಂದ ಅವಿನೀತರಾಗಿ ಸಾಂಬನಿಗೆ ಸ್ತ್ರೀಯಂತೆ ಅಲಂಕಾರಮಾಡಿ ಆ ಮುನಿನಾಥರನ್ನು ನೋಡಿ ಸುತಾಭಿಲಾಷಿಣಿಯಾದ ಈ ಅಂಗನೆಗೆ ಎಂತಹ

ಸಂತಾನವಾಗುವುದೆಂದು ಕೇಳಲು ಆ ತಪೋಧನರು ವೃಷ್ಣ್ಯಂಧಕ ವಂಶಗಳಿಗೆ ಕೇಡನ್ನುಂಟುಮಾಡುವ ಆಯಸ ಮುಸಲವು ಉದ್ಭವಿಸುವುದೆಂದು . ಉತ್ತರ ಕೊಟ್ಟರು. ಅವರು ಹೇಳಿದಂತೆ ಮರುದಿನ ಆ ಸಾಂಬನ ಹೊಟ್ಟೆಯಲ್ಲಿ ಕಬ್ಬಿಣದ ಒನಕೆಯು ಹುಟ್ಟಿತು. ಯಾದವ ಪತಿಯಾದ ಉಗ್ರಸೇನನು ಆ ಅಶುಭವನ್ನು ಹೋಗಲಾಡಿಸುವ ಪ್ರಯುಕ್ತ ಮುಸಲವನ್ನು ಚೂರ್ಣಮಾಡಿಸಿ ಸಮುದ್ರದಲ್ಲಿ ಹಾಕಿಸಿದನು. ಆದರೂ ಭಯಂಕರಗಳೂ, ಅಶುಭಸೂಚಕಗಳೂ ಆದ ಮಹೋತ್ಪಾತಗಳನೇಕ ಉಂಟಾದುವು. ವಾಸುದೇವನ ಚಕ್ರವು ಅಂತರಿಕ್ಷ ಮಾರ್ಗದಲ್ಲಿ ಹಾರಿಹೋಯಿತು. ಸಾರಥಿಯು ನೋಡುತ್ತಿರುವಲ್ಲಿಯೇ ಅಶ್ವಯುಕ್ತವಾದ ಆತನ ದಿವ್ಯರಥವು ಸ್ವರ್ಗಕ್ಕೆ ಹೊರಟು ಹೋಯಿತು. ಆತನ ಮತ್ತು ಬಲರಾಮನ ಕೇತನಗಳನ್ನು ಅಪ್ಸರಸ್ತ್ರೀಯರು ತೆಗೆದುಕೊಂಡುಹೋದರು. ಕೃಷ್ಣನು ಇವೆಲ್ಲವನ್ನೂ ನೋಡುತ್ತಾ ಮುಂದಾಗುವುದನ್ನು ತಿಳಿದು ತಾಳ್ಮೆ ಹೊಂದಿ ಇದ್ದನು. ಅಷ್ಟರಲ್ಲಿ ಒಂದುದಿನ ವೃಷ್ಣಿವಂಶದವರಾದ ಯಾದವರು ಮದಿರಾರಸಪಾನಪ್ರಮತ್ತರಾಗಿ ಒಬ್ಬರೊಡನೆ ಒಬ್ಬರು ಆಟಗಳನ್ನಾಡತೊಡಗಿದರು. ಸಾತ್ಯಕಿಯು ಕೃತವರ್ಮನನ್ನು ನೋಡಿ, ಛೀ ! ಪಾಂಡುಸುತರ ಸೇನೆಗಳು ನಿದ್ರಾಪರವಶಗಳಾಗಿರುವಲ್ಲಿ ಅರ್ಧರಾತ್ರಿಯ ಸಮಯದಲ್ಲಿ ನೀನು ಅವರನ್ನು ಹೊಡೆದೆ, ಇದು ನಿನ್ನ ಪೌರುಷವೇ ಎಂದು ಕೇಳಲು ಒಬ್ಬರೊಬ್ಬರಿಗೆ ವಿವಾದವು ಬೆಳೆಯಿತು. ಆ ಸಮಯದಲ್ಲಿ ಅಂಬುಜೋದರನು ಸುಮ್ಮನೆ ನೋಡುತಿರಲು ಸಾತ್ಯಕಿಯು ಕೃತವರ್ಮನ ಮೇಲೆ ಬಿದ್ದು ಆತನ ತಲೆಯನ್ನು ಛೇದಿಸಲು ಯಾದವರಿಗೆ ಮಹಾ ಘೋರಯುದ್ಧವು ಸಂಪ್ರಾಪ್ತವಾಯಿತು. ಹರಿಯು ಆ ಸಮಯದಲ್ಲಿ ಬಗ್ಗಿ ಒಂದು ಹಿಡಿ ಹುಲ್ಲನ್ನು ಕೀಳಲು ಅದು ಭಯಂಕರವಾದ ಕಬ್ಬಿಣದ ಒನಕೆಯಾಗಿರಲು ಆದನ್ನು ಮೇಲಕ್ಕೆತ್ತಿ ಯದುವೀರರ ಕೈಗಳಲ್ಲಿದ್ದ ತೃಣಗಳು ಅಯೋಮಯಮುಸಲಗಳಾದುದನ್ನು ನೊಡುತ್ತಾ ವ್ಯಥೆ ಹೊಂದಿದ ಚಿತ್ತದೊಡನೆ ಏನನ್ನೂ ಹೇಳದೆ ನೋಡುತ್ತಿದ್ದನು. ಅಷ್ಟರಲ್ಲಿ ಅವನ ಕೈಯಲ್ಲಿದ್ದ ಮುಸಲವು ಹೊರಹೊರಟು ಸಿಕ್ಕಿದವರನ್ನು ನಾಶಮಾಡುತ್ತಾ ಬರಲು ಇಬ್ಬರು ಹೊರತು ಯಾದವರೆಲ್ಲರೂ ನಾಶಹೊಂದಿದರು. ದಾಮೋದರನು ಅವರಲ್ಲೊಬ್ಬನಾದ ದಾರುಕನೆಂಬ ಸಾರಥಿಯನ್ನು ಕರೆದು ನೀನು ಹೋಗಿ ಅರ್ಜುನನನ್ನು ಕರೆದುಕೊಂಡು ಬರುವುದು ಎಂದು ಹೇಳಿಕಳುಹಿಸಿ ಎರಡನೆಯವನನ್ನು ಕರೆದು ನೀನು ಹೋಗಿ ಸ್ತ್ರೀಯರ ಕ್ಷೇಮವನ್ನು

ನೋಡೆಂದು ಅಪ್ಪಣೆ ಮಾಡಿದನು. ಅವನು ಹೋಗುತ್ತಾ ಒನಕೆಯ ಏಟು ತಗಲಿ ಸಾಯಲು ಅರವಿಂದನಯನನು ಸ್ತ್ರೀಯರನ್ನು ಕಾಪಾಡುವುದೆಂದು ತನ್ನ ತಂದೆಗೆ ಹೇಳಿ ತಾನು ಏಕಾಂಗಿಯಾಗಿ ಅರಣ್ಯಕ್ಕೆ ಹೋಗಿ ಬಲಭದ್ರನೊಡನೆ ಸೇರಿದನು. ಅಲ್ಲಿ ಬಲರಾಮನು ಯೋಗಾರೂಢನಾಗಿ ಕುಳಿತಿದ್ದನು. ಆತನ ಬಾಯಿಯಿಂದ ಒಂದು ಮಹಾ ಸರ್ಪವು ಹೊರಗೆ ಬರುತ್ತಿತ್ತು. ಆ ಪನ್ನಗಶ್ರೇಷ್ಠನೇ ಅನಂತನಾದ ಶೇಷನು. ಆತನು ಭೂಮಿಯಮೇಲೆ ಬಲರಾಮರೂಪದಿಂದಿದ್ದು ಈಗ ನಿಜಲೋಕವನ್ನು ಕುರಿತು ಹೋದನು. ಅನಂತರ ಗೋವಿಂದನು ತನ್ನ ನಿರ್ವಾಣವು ಸಮೀಪವಾಯಿತೆಂದು ತಿಳಿದು ಒಬ್ಬನಾಗಿಯೇ ಯೋಚಿಸುತ್ತಾ ಮನುಷ್ಯರು ಸಾಯುವಂತೆಯೇ ತಾನೂ ಸಾಯಲಪೇಕ್ಷಿಸಿ ತನ್ನ ಅಂಗಾಲುಗಳು ಅಪಾಯಗಳೆಂದು ತಿಳಿದವನಾದುದರಿಂದ ಅವುಗಳು ಕಾಣುವಂತೆ ಬಿಟ್ಟು ಶರೀರವನ್ನೆಲ್ಲಾ ಪೀತಾಂಬರದಿಂದ ಆಚ್ಛಾದಿಸಿಕೊಂಡು ನೆಲದಮೇಲೆ ಮಲಗಿಕೊಂಡು ಯೋಗನಿಷ್ಠನಾದನು. ಆ ಸಮಯದಲ್ಲಿ ಒಬ್ಬ ಬೇಟೆಗಾರನು ಬಂದು ಜಿಂಕೆಯು ಮಲಗಿರುವುದೆಂದು ತಿಳಿದು ಆ ಪುರುಷೋತ್ತಮನ ಮೇಗಾಲಿನಲ್ಲಿ ತೂರಿ ಹೋಗುವಂತೆ ಒಂದು ಬಾಣವನ್ನು ಹೊಡೆದು ಚನ್ನಾಗಿ ನೋಡಿ ಆತನು ಭಗವಂತನೆಂಬುದನ್ನು ತಿಳಿದು ಆತನ ಪಾದಕಮಲಗಳಿಗೆ ನಮಸ್ಕರಿಸಿ ದೈನ್ಯದಿಂದ ಬೇಡುತ್ತಿರಲು ವಾಸುದೇವನು ಅವನನ್ನು ಸಮಾಧಾನಮಾಡಿ ತೇಜೋರಾಜಿವಿಭ್ರಾಜಿತನಾಗಿ ಗಗನತಲಕ್ಕೆ ಹಾರಿದನು. ಅನೇಕ ಸಾವಿರ ದೇವತೆಗಳು ಕ್ರಮವಾಗಿ ಬಂದು ನಿಜದಿವ್ಯಲೋಕಕ್ಕೆ ಹೊರಡುತ್ತಿರುವ ಆ ಪರಮಪುರುಷನನ್ನು ಸ್ತೋತ್ರಮಾಡಿದರು. ಆ ದೇವದೇವನು ಊರ್ಧ್ವಗಮನನಾಗಿ ಭೂಲೋಕವನ್ನು ಅನಾಥವನ್ನಾಗಿಯೂ, ಶೋಭಾರಹಿತವನ್ನಾಗಿಯೂ ಮಾಡಿ ನಿಜಮಹಿಮೆಯಿಂದ ಊರ್ಧ್ವಲೋಕಗಳಿಗೆ ಸಂತೋಷವನ್ನುಂಟುಮಾಡುತ್ತಾ ನಿಜಪದವನ್ನು ಹೊಂದಿದನು.

ಆ ಪರಮೇಶ್ವರನಿಗೆ ಅತ್ಯಂತ ಪ್ರೀತಿಪಾತ್ರನಾದ ಸ್ನೇಹಿತನಾದ ಬೀಭತ್ಸುವು ಆತನು ಕಳುಹಿಸಿದ ವರ್ತಮಾನವನ್ನು ಕೇಳಿ ಕೂಡಲೇ ಹೊರಟು ದ್ವಾರಕಿಯನ್ನು ಸೇರಿ ಆ ಸ್ಥಳದಲ್ಲಿ ಎಲ್ಲಿನೋಡಿದರೂ ರೋದನವೇ ಹೆಚ್ಚಾಗಿರುವುದನ್ನು ನೋಡಿ ಕಮಲನಾಭನನ್ನು ಕಾಣದೆ ಆತನಿದ್ದ ಸ್ಥಳವನ್ನು ಯಾರಿಂದಲೂ ತಿಳಿಯದೆ ವಸುದೇವನನ್ನು ಕೇಳಲು ಆತನಿಂತೆಂದನು. ಕೃಷ್ಣನು ನೆನ್ನೊಡನೆ ಅರ್ಜುನನು ಬಂದು ಸ್ತ್ರೀಯರನ್ನೂ, ಮಕ್ಕಳನ್ನೂ ಕಾಪಾಡುವ ರೀತಿಯನ್ನು ಮಾಡುವನೆಂತಲೂ, ತಾನು ಹೊರಟ ನಂ

ತರದಲ್ಲಿ ದ್ವಾರಕಿಯು ಸಮುದ್ರದಲ್ಲಿ ಮುಳುಗಿಹೋಗುವುದೆಂದೂ ಹೇಳಿ ಹೊರಟು ಹೋದನು ಎಂದು ವಸುದೇವನು ಹೇಳಿದವನಾಗಿ ಮರುದಿನ ಬೆಳಗ್ಗೆ ಉಷಃಕಾಲಕ್ಕೆ ವಸುದೇವನೂ ಕಾಲಗತಿಯನ್ನು ಹೊಂದಿದನು. ಪುರಂದರ ನಂದನನು ಆತನಿಗೆ ಸ್ವಲ್ಪವೂ ಕೊರತೆಯಿಲ್ಲದೆ ಪ್ರೀತಿಯಿಂದ ಅಗ್ನಿಸಂಸ್ಕಾರಗಳನ್ನು ಆಚರಿಸಿ ರಾಮಕೃಷ್ಣರ ಕಳೇಬರಗಳನ್ನು ಹುಡುಕಿ ತಂದು ಅವುಗಳಿಗೂ ಅದರಂತೆ ಸಂಸ್ಕಾರಗಳನ್ನು ಮಾಡಿ ಏಳನೆಯ ದಿವಸ ಶೋಕರಸವೇ ಶರೀರವನ್ನು ಧರಿಸಿದಂತೆ ಕಾಣುತ್ತಿರಲು ಪತಿವಿಹೀನೆಯರಾದ ಸ್ತ್ರೀಯರನ್ನೂ, ದಿಕ್ಕಿಲ್ಲದವರ ಮಕ್ಕಳನ್ನೂ ಕರೆದುಕೊಂಡು ದ್ವಾರಕೆಯಿಂದ ಹೊರಟನು. ಅವರು ಹೊರಡುತ್ತಿರುವಲ್ಲಿಯೇ ಸಮುದ್ರವು ಉಕ್ಕಿ ಆ ಪಟ್ಟಣವನ್ನು ಮುಳುಗಿಸಿತು. ಹೀಗೆ ಸಮುದ್ರದ ಅಲೆಗಳು ಮೇಲೆ ಮೇಲೆ ಬರುತಿರಲು ಆ ಜನಗಳು ಹೊರಟು ಬೇಗಬೇಗ ಮುಂದಕ್ಕೆ ಹೋದರು. ಹೀಗೆ ಹೋಗುತಿರಲು ಒಂದುದಿನ ಮಾರ್ಗದಲ್ಲಿ ಕಳ್ಳರು ಅವರನ್ನು ಇದಿರಿಸಲು ಅರ್ಜುನನು ಅವರ ಕೊಬ್ಬಿಗೆ ನಗುತ್ತಾ ಅವರನ್ನು ತರುಮಲು ಯತ್ನಿಸಿ ಗಾಂಡೀವವನ್ನೆತ್ತಿ ಬಗ್ಗಿಸಲುಪಕ್ರಮಿಸಿದನು. ಅದು ಸುಲಭವಾಗಿ ಬಗ್ಗದೆ ಅದಕ್ಕೆ ನಾರಿಯನ್ನು ಸೇರಿಸುವುದಕ್ಕಾಗಲಿಲ್ಲ. ತನ್ನ ದಿವ್ಯಾಸ್ತ್ರಗಳನ್ನು ಧ್ಯಾನಿಸಲು ಅವು ಬಾರದೆಹೋದುವು. ಇಷ್ಟಕ್ಕೆ ಮೊದಲು ಅಕ್ಷಯವಾಗಿದ್ದ ಬಾಣಗಳು ಈಗ ಕ್ಷೀಣಗಳಾದವು. ಕುರುಕ್ಷೇತ್ರದ ಮಹಾಯುದ್ಧದಲ್ಲಿ ವಿಜಯಹೊಂದಿದ ಅರ್ಜುನನು ನೋಡುತಿರುವಲ್ಲಿಯೇ ಯುವತೀಮಣಿಯರನೇಕರನ್ನು ಆ ಕಳ್ಳರು ಹಿಡಿದುಕೊಂಡು ಸೆರೆ ಇಟ್ಟರು. ಶೂರೋತ್ತಮರಾದ ಪೃಥ್ವೀಶ್ವರರನ್ನು ಓಡಿಸಿದ ಗಾಂಡೀವಿಯು ಈಗ ದಸ್ಯುಗಳಿಂದ ಜಿತನಾದನು. ಹೀಗೆ ಭಂಗಪಟ್ಟು ಆ ನರನ ದೈನ್ಯಹೊಂದಿ ಮಿಕ್ಕ ಧನ ಸಮೂಹವನ್ನು ತೆಗೆದುಕೊಂಡು ಆ ಸ್ತ್ರೀಯರನ್ನೂ ಕರೆದುಕೊಂಡು ಹೊರಟು ಧರ್ಮಜನ ರಾಜ್ಯದಲ್ಲಿರುವ ಪಟ್ಟಣಗಳಲ್ಲಿ ಅಲ್ಲಲ್ಲಿ ನಿಲ್ಲಿಸಿದನು. ಅನಂತರ ಅವನು ಪಾರಾಶರ್ಯನ ಬಳಿಗೆ ಹೋಗಿ ಆತನ ಚರಣಗಳಿಗೆ ನಮಸ್ಕರಿಸಿ ತನ್ನ ಕಷ್ಟಗಳನ್ನು ಹೀಗೆಂದು ಬಿನ್ನವಿಸಿದನು. ಮಹಾತ್ಮ ! ಏನು ಹೇಳಲಿ ? ವೃಷ್ಣಿವಂಶಜರೆಲ್ಲರೂ ನಾಶಹೊಂದಿದರು. ನನ್ನ ಅಸ್ತ್ರಗಳೂ ನನ್ನನ್ನು ಬಿಟ್ಟುಹೋದುವು. ರಾಮಕೃಷ್ಣರು ಶರೀರಗಳನ್ನು ಬಿಟ್ಟು ಹೋದರು. ಗೋವಿಂದನ ಮರಣವನ್ನು ಸ್ಮರಿಸಿದರೆ ಸಮುದ್ರವು ಇಂಗುವಂತೆಯೂ, ಅಂತರಿಕ್ಷವು ನೆಲದಮೇಲೆ ಬೀಳುವಂತೆಯೂ ಆಗಿರುವುದು. ಕೃಷ್ಣನಿಲ್ಲದೆ ನಾನು

ಹೇಗೆ ಜೀವಿಸಲಿ ? ಪದ್ಮನಾಭನು ಭೂಮಿಯನ್ನು ಬಿಟ್ಟು ಹೋದುದರಿಂದ ನನ್ನ ಮನಸ್ಸು ಶೂನ್ಯವಾಯಿತು ಎಂದು ಹೇಳಲು ಗಂಭೀರವಚನಗಳಿಂದ ಸತ್ಯವತೀ ನಂದನನು ಕುಂತೀನಂದನನೊಡನೆ ಹೀಗೆಂದನು—ದೇವತೆಗಳು ಏರ್ಪಡಿಸಿದ ಘನಕಾರ್ಯವು ತೀರಿತು. ಇದಕ್ಕೆ ವ್ಯಥೆಪಡುವುದೇತಕ್ಕೆ ? ನೀನೂ ನಿನ್ನ ಸಹೋದರರೂ ಮಾಡಬೇಕಾದ ಕೆಲಸಗಳನ್ನೆಲ್ಲಾ ಮಾಡಿದಿರಿ. ಇನ್ನು ನೀವುಗಳು ನಿಮ್ಮ ಸ್ಥಳಗಳಿಗೆ ಹೊರಡಬೇಕಾದ ಸಮಯವು ಪ್ರಾಪ್ತವಾಯಿತು. ನಿನ್ನ ಅಸ್ತ್ರಗಳಿಂದ ಇನ್ನು ಕೆಲಸವಿಲ್ಲವಾದುದರಿಂದ ಅವು ತಮ್ಮ ಸ್ಥಳಗಳಿಗೆ ಹೋದುವು. ಇದೇ ನಿಮಗೆ ವಿಮೋಚನ ಕಾಲವು ಎಂದು ಬೋಧಿಸಲು ಕಿರೀಟಿಯು ನಿಜಪುರಕ್ಕೆ ತೆರಳಿ ಯುಧಿಷ್ಠಿರಾದಿಗಳಿಗೆ ಎಲ್ಲವನ್ನೂ ತಿಳಿಯಪಡಿಸಿದನು.

## ಮಹಾಪ್ರಸ್ಥಾನ.

ಅನಂತರ ಪಾಂಡವರು ಅಂತ್ಯಕಾಲವು ಸಮೀಪಿಸುತಿರುವುದೆಂದು ತಿಳಿದು ತಾವೂ ಮಹಾಪ್ರಸ್ಥಾನಮಾಡಲು ಯತ್ನಿಸಿದರು. ಆ ವೃತ್ತಾಂತವನ್ನು ಮೂರು ಚಿಕ್ಕ ಅಧ್ಯಾಯಗಳಲ್ಲಿ ಮಹಾಪ್ರಸ್ಥಾನಿಕ ಪರ್ವವು ಹೇಳುತಿರುವುದು. ಅರ್ಜುನನು ಹೇಳಿದುದೆಲ್ಲವನ್ನೂ ಕೇಳಿ ಧರ್ಮತನಯನು ನಾವುಗಳು ಶರೀರಗಳನ್ನು ತ್ಯಜಿಸಬೇಕಾದ ಕಾಲವು ಬಂದಿತೆಂದು ಹೇಳಲು ಇಂದ್ರತನಯನು ಚಿತ್ತದಲ್ಲಿ ಕಳವಳಹೊಂದುತ್ತಾ ಕಾಲದಲೀಲೆಗೆ ಆಶ್ಚರ್ಯ ಹೊಂದುತ್ತಾ ಕಾಲವೇ ! ಕಾಲವೇ ! ಎಂದು ನಿಟ್ಟುಸುರುಬಿಡುತ್ತಿದ್ದನು. ಮಿಕ್ಕಾದ ಅನುಜರೂ ಅದರಂತೆಯೇ ಇರಲು ಧರ್ಮಜನು ಪರೀಕ್ಷಿತನಿಗೆ ಹಸ್ತಿನಾಪುರದ ರಾಜ್ಯವನ್ನು ಕೊಟ್ಟು ಆತನಿಗೆ ಕೃಪಾಚಾರ್ಯನನ್ನು ಆಚಾರ್ಯನನ್ನಾಗಿ ನಿಯಮಿಸಿ ವೃದ್ಧರಾದ ರಾಜವೀರರಲ್ಲಿ ಮರಣದಲ್ಲಿ ತಪ್ಪಿಸಿಕೊಂಡ ಯುಯುತ್ಸುವನ್ನು ರಾಜ್ಯತಂತ್ರವನ್ನು ನಡೆಸುವುದಕ್ಕಾಗಿ ಕಳುಹಿಸಿದನು. ಅನಂತರದಲ್ಲಿ ಪಾಂಡವರೈವರೂ, ಪಾಂಚಾಲಿಯೂ ನಾರುಬಟ್ಟೆಗಳನ್ನು ಧರಿಸಿ ಕಡೇಸಾರಿ ಹಸ್ತಿನಾಪುರವನ್ನು ಬಿಟ್ಟು ಹೊರಟರು. ಆ ಸಮಯದಲ್ಲಿ ಎಲ್ಲರೂ ಪೂರ್ವದಲ್ಲಿ ಜೂಜಿನಲ್ಲಿ ಸೋತು ಪಟ್ಟಣವನ್ನು ಬಿಡುವ ಸಮಯದಲ್ಲಿ ಹೇಗೋ ಹಾಗೆ ಅವರು ಮನಸ್ಸಿನಲ್ಲಿ ವ್ಯಥೆಹೊಂದಿ ಬಾಷ್ಪಾಕುಲಿತನಯನರಾದರು. ಪಾಂಡವರಿಗಿನ್ನು ರಾಜ್ಯವು ರುಚಿಸದಾದುರಿಂದ ರಾಜ್ಯಭಾರವು ತೊಲಗಿತೆಂದು ಮನಸ್ಸಿನಲ್ಲಿ ಉಲ್ಲಾಸಹೊಂದಿದವರಾಗಿ ಯುಧಿಷ್ಠಿರನು ಮುಂಭಾಗದಲ್ಲಿಯೂ

ಆತನ ಹಿಂದೆ ಕ್ರಮವಾಗಿ ಭೀಮಾರ್ಜುನ ನಕುಲ ಸಹದೇವರೂ, ಎಲ್ಲರಿಗೆ ಹಿಂದೆ ದ್ರೌಪದಿಯೂ ಹೊರಟರು. ಅವರನ್ನು ಅನುಸರಿಸುತ್ತಾ ಹಿಂದೆ ಒಂದು ನಾಯಿಯೂ ಹೋಗುತ್ತಿತ್ತು. ಅರ್ಜುನನು ಧನುಸ್ತೂಣೀರಗಳನ್ನು ಬಿಡಲೊಲ್ಲದೆ ಅವುಗಳನ್ನು ತೆಗೆದುಕೊಂಡು ಹೊರಟನು. ಹೀಗೆ ಅವರು ಪೂರ್ವದಿಕ್ಕಿನಲ್ಲಿ ಬಹುದೂರ ಹೊರಟು ಪಾರಾವಾರವನ್ನು ಸೇರಲು ಸಪ್ತಾರ್ಚಿಯಾದ ಅಗ್ನಿದೇವನು ಅವರ ಮುಂಭಾಗದಲ್ಲಿ ಪ್ರತ್ಯಕ್ಷನಾಗಿ ಅರ್ಜುನನೊಡನೆ ಗಾಂಡೀವ ಮೊದಲಾದ ನಿನ್ನ ಆಯುಧಗಳನ್ನು ವರುಣನಿಗೆ ಪುನಃ ಒಪ್ಪಿಸಬೇಕಾದುದರಿಂದ ಇವುಗಳನ್ನು ಸಮುದ್ರದಲ್ಲಿ ಹಾಕಿಬಿಡೆಂದು ಹೇಳಿದನು. ಆತನು ಅವುಗಳನ್ನು ಪಯೋನಿಧಿಯಲ್ಲಿಟ್ಟನು. ಆದರಿಂದ ಅವನಿಗೆ ಬಂಧನಗಳೆಲ್ಲಾ ತೀರಿದುವು.

ಅನಂತರ ಪಾಂಡವರು ಬಹಳದೂರ ದಕ್ಷಿಣದಿಕ್ಕಿಗೂ, ಅನಂತರ ವಾಯುವ್ಯದಿಕ್ಕಿಗೂ, ಪಶ್ಚಿಮಕ್ಕೂ ಹೊರಟು ಅಲ್ಲಿಂದ ಉತ್ತರಾಭಿಮುಖವಾಗಿ ತಿರುಗಿ ಪ್ರಯಾಣ ಮಾಡಿ ಅಂತರಿಕ್ಷವನ್ನು ಮುಟ್ಟುವ ಭೀಕರಗಳಾದ ಶೃಂಗಗಳಿಂದ ಪ್ರಕಾಶಿಸುವ ಹಿಮವತ್ಪರ್ವತವನ್ನು ಸೇರಿ ಆ ಶ್ರೇಷ್ಠವಾದ ಪರ್ವತವನ್ನು ದಾಟಲು ತಮ್ಮ ಮುಂಭಾಗದಲ್ಲಿ ಬಹು ವಿಶಾಲವಾದ ಸಿಕತಾಮಯವಾದ ಒಂದು ಮರುಭೂಮಿಯೂ, ಅದರ ಆಚೆಕಡೆಯಲ್ಲಿ ಪುರಾತನವಾದ ಪರ್ವತರಾಜನೆಂದು ಪ್ರಸಿದ್ಧಿಹೊಂದಿದ ಮೇರುಪರ್ವತವೂ ಕಾಣಬಂದುವು. ಅವರು ಮೌನದಿಂದ ಆ ಮರುಭೂಮಿಯಲ್ಲಿ ಹೋಗುತಿರುವಾಗ ದ್ರೌಪದಿಯು ವಿಗತಜೀವಿತೆಯಾಗಿ ಆ ಮರುಭೂಮಿಯಲ್ಲಿ ಬಿದ್ದಳು. ಆಕೆಯ ಪತನವನ್ನು ಭೀಮನು ನೋಡಿ ಹೆಚ್ಚಾದ ವ್ಯಥೆಹೊಂದಿ ಪಾಂಚಾಲಿಯು ಏಕೆ ಬಿದ್ದಳೆಂದು ಕೇಳಲು ಧರ್ಮಪುತ್ರನಿಂತೆಂದನು. ಈ ವನಿತೆಗೆ ಧನಂಜಯನಲ್ಲಿ ಪಕ್ಷಪಾತವಿದ್ದುದರಿಂದ ಅದರ ಫಲವನ್ನು ಈಗ ಅನುಭವಿಸಿದಳು, ಎಂದು ಹೇಳಿ ಯುಧಿಷ್ಠಿರನು ಕೃಷ್ಣೆಯನ್ನು ಬಿಟ್ಟು ಮುಂದೆ ಹೊರಡುತಿರಲು ಅಷ್ಟರಲ್ಲಿ ಸಹದೇವನು ಪ್ರಾಣತ್ಯಾಗಮಾಡಿ ನೆಲದಲ್ಲಿ ಬೀಳಲು ಭೀಮನು ಅಣ್ಣನೊಡನೆ ಈತನೇಕೆ ಹೀಗಾದನೆಂದು ಕೇಳಲು, ಧರ್ಮತನಯನು "ಈತನು ತನಗೆ ಸಮಾನನಾದ ಪ್ರಾಜ್ಞನು ಎಲ್ಲಿಯೂ ಇಲ್ಲವೆಂದು ಯೋಚಿಸುತ್ತಾ ಇದ್ದನಾದುದರಿಂದ ಆ ಫಲವನ್ನು ಹೀಗೆ ಅನುಭವಿಸಿದನು" ಎಂದು ಉತ್ತರಹೇಳಿ ನಿಲ್ಲದೆ ಮುಂದೆ ಹೋಗುತಿರಲು ಪಾಂಚಾಲಿಯ ಪತನವನ್ನೂ, ತಮ್ಮನ ಮರಣವನ್ನೂ ನೋಡಿ ದುಃಖಿಸುತ್ತಾ ನಕುಲನು ಭೂಮಿಯಲ್ಲಿ ಬೀಳಲು, ಭೀಮನು ಅಣ್ಣನಿಗೆ ತಿಳಿಸಿ ಏನುಕಾರಣದಿಂದ ಈತನಿಗೆ ಇಂತಹ ದೆಸೆಯು

ಪ್ರಾಪ್ತವಾಯಿತೆಂದು ಕೇಳಲು, ಧೀರಚಿತ್ತನಾದ ಧರ್ಮತನಯನಿಂತೆಂದನು.— “ಇವನು ತನ್ನಂತಹ ಸೌಂದರ್ಯಶಾಲಿಯು ಯಾರೂ ಇಲ್ಲವೆಂದು ತಿಳಿದಿದ್ದ ನಾದುದರಿಂದ ಹೀಗೆ ಬಿದ್ದನು.” ಎಂದು ಹೇಳುತ್ತಾ ಧೈರ್ಯದಿಂದ ಮುಂದೆ ನಡೆದನು. ಇನ್ನು ಸ್ವಲ್ಪ ದೂರದಲ್ಲಿ ವಿರಾಗ್ರೇಸರನೂ, ಅಜೇಯನೂ ಆದ ಅರ್ಜುನನು ಭೂಮಿಯಲ್ಲಿ ಬೀಳಲು ಅಳುತ್ತಾ ವಾಯುಪುತ್ರನು ಇವನ ದೋಷ ವೇನೆಂದು ಅಣ್ಣನನ್ನು ಕೇಳಿದನು. ಆತನು ತಮ್ಮನೊಡನೆ ಹೀಗೆಂದನು. “ಈತನು ತನ್ನ ಪೌರುಷಕ್ಕೆ ಬಹುವಾಗಿ ಗರ್ವಪಡುತ್ತಾ ಶತ್ರುಗಳೆಲ್ಲರನ್ನೂ ಒಂದೇ ದಿನದಲ್ಲಿ ನಾಶಮಾಡುತ್ತೇನೆಂಬದಾಗಿ ಹೇಳುತ್ತಿದ್ದು ಹಾಗೆ ಮಾಡದ ಕಾರಣದಿಂದ ಹೀಗೆ ಬಿದ್ದನು” ಎಂದು ಹೇಳಿ ಧಿಟ್ಟತನದಿಂದ ಪುನಃ ಮುಂದಕ್ಕೆ ಹೊರಡುತಿರಲು ವಾಯು ಪುತ್ರನೂ ಭೂಮಿಯಲ್ಲಿ ಬಿದ್ದು ಗಟ್ಟಿಯಾಗಿ ಕೂಗುತ್ತಾ ಅಣ್ಣನೊಡನಿಂತು ಹೇಳಿದನು– “ಮಹೀನಾಥಾ! ನಿನ್ನ ದೊಡ್ಡ ತಮ್ಮನಾದ ನಾನೂ ಬಿದ್ದೆನು. ಇದಕ್ಕೆ ಕಾರಣವನ್ನು ತಿಳಿದಿದ್ದರೆ ಹೇಳುವವನಾಗು” ಎಂದು ಕೇಳಲು ಧರ್ಮನಂದನನು ಹಿಂದಕ್ಕೆ ತಿರುಗಿ ನೋಡದೆಯೇ ಹೀಗೆಂದನು–“ನಿನಗೆ ತಿಂಡಿಯಮೇಲೆ ಅಭಿಲಾಷೆ ಹೆಚ್ಚು. ನಿನ್ನ ಭುಜ ಶಕ್ತಿಯನ್ನು ಕುರಿತು ಅನೇಕವೇಳೆ ಹೊಗಳಿಕೊಳ್ಳುತ್ತಿದ್ದೆ. ನೀನು ತಿನ್ನುವ ಕಾಲದಲ್ಲಿ ಇತರರ ಹಸಿವನ್ನು ಕುರಿತು ಒಂದು ವೇಳೆಯಾದರೂ ಯೋಚಿಸಿದವನಲ್ಲ. ಆದುದರಿಂದ ನೀನು ಬಿದ್ದೆ.” ಎಂದು ಹೇಳಿ ಸ್ವಲ್ಪವೂ ವ್ಯಥೆ ಹೊಂದದೆ ಆ ಧರ್ಮಜನು ಮುಂದಕ್ಕೆ ಹೊರಟನು. ಶುನಕವು ಭಕ್ತಿಯಿಂದ ಆತನನ್ನು ಬಿಡದೆ ಹಿಂದೆಯೇ ಹೋಗುತ್ತಿತ್ತು.

ಅಷ್ಟರಲ್ಲಿ ಸಿಡಿಲಿನ ತೆರದಲ್ಲಿ ದೊಡ್ಡ ಶಬ್ದವುಂಟಾಗಲು ದಿವ್ಯ ವಿಮಾನವನ್ನು ಹತ್ತಿ ದೇವೇಂದ್ರನು ಅಲ್ಲಿಗೆ ಬಂದು ಧರ್ಮಜನೊಡನೆ–ಇದನ್ನು ಹತ್ತಿ ಸ್ವರ್ಗಲೋಕಕ್ಕೆ ಬರುವುದೆಂದು ಹೇಳಲು ಆ ಭೂಪಾಲಕನು ದೇವತೆಗಳ ದೊರೆಯೊಡನೆ ಹೀಗೆಂದನು– “ನಾನು ಹಾಗೆ ಮಾಡೆನು. ನನ್ನ ತಮ್ಮಂದಿರೂ, ಪ್ರೇಯಸಿಯೂ ಮಾರ್ಗದಲ್ಲಿ ಬಿದ್ದು ಹೋದರು. ಅವರಿಲ್ಲದೆ ನಾನೊಬ್ಬನೇ ಸ್ವರ್ಗಕ್ಕೆ ಬರಲಾರೆನು.” ಎನ್ನಲು ದಿವಿಜ ವಲ್ಲಭನು ಆ ಮನುಜವಲ್ಲಭನೊಡನಿಂತೆಂದನು. “ಅವರೆಲ್ಲರೂ ನಿನಗಿಂತ ಮುಂಚೆಯೇ ಸ್ವರ್ಗಕ್ಕೆ ತೆರಳಿದರು. ನೀನು ಸಶರೀರನಾಗಿ ಸ್ವರ್ಗಕ್ಕೆ ಬರಬೇಕು. ಇನ್ನು ತಡವೇಕೆ?” ಎನ್ನಲು ಆ ಮಹೀರಮಣನು ಭೂತಭವ್ಯಪ್ರಭುವಾದ ಓ ದೇವಾ! ಈ ಸಾರಮೇಯವು ನನ್ನನ್ನು ದೃಢಭಕ್ತಿಯಿಂದ ಆಶ್ರಯಿಸಿರುವುದು. ಆದುದರಿಂದ

ಇದೂ ನನ್ನೊಡನೆ ಬರಬೇಕು. ನನ್ನ ಹೃದಯದಲ್ಲಿ ಇದರ ವಿಷಯವಾಗಿ ಕೃಪಾರಸವು ಉಕ್ಕುತ್ತಿರುವುದು ಎನ್ನಲು ಸುರಪತಿಯು ಆ ನರಪತಿಗಿಂತೆಂದನು. “ನಾಯನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗಬಹುದೇ ? ದೇವತ್ವವೂ ನನ್ನ ಸಮತ್ವವೂ ಸಮಸ್ತ ಸಂಪತ್ತುಗಳೂ, ಹೆಚ್ಚಾದ ಸಿದ್ಧಿಯೂ, ಸ್ವರ್ಗ ಸುಖಗಳೂ ಈ ದಿನ ನಿನಗೆ ಕೈಗೂಡಿದುವು. ಈ ನಾಯನ್ನು ಬಿಟ್ಟುಬಿಡು. ಇದು ಕ್ರೂರಕರ್ಮವಲ್ಲ” ಎನ್ನಲು ನಿರ್ಮಲಾತ್ಮನಾದ ಧರ್ಮತನಯನಿಂತುಹೇಳಿದನು. “ಸಹಸ್ರಾಕ್ಷ ! ಧರ್ಮಾಚರಣಪರ ! ಆರ್ಯನು ಅನಾರ್ಯವಾದ ಕಾರ್ಯವನ್ನು ಮಾಡುವನೇ ? ನನ್ನಲ್ಲನುರಕ್ತನಾದ ಭಕ್ತನನ್ನು ಬಿಟ್ಟು ಸಿರಿಯನ್ನು ಹೊಂದಲೊಲ್ಲೆನು” ಎನ್ನಲು ನಿರ್ಜರನಾಥನು ಆ ಮಾನವನಾಥನೊಡನೆ ನಾಯನ್ನು ಕರೆದುಕೊಂಡು ಬರುವವರಿಗೆ ಸ್ವರ್ಗಲೋಕದಲ್ಲಿ ಸ್ಥಳವಿಲ್ಲ. ಇದನ್ನು ತ್ಯಜಿಸೆಂದು ಹೇಳಲು ಧರ್ಮಜನಿಂತೆಂದನು. “ಭಕ್ತನನ್ನು ತ್ಯಜಿಸುವುದು ಮಹಾಪಾತಕವೆಂದು ಆರ್ಯರು ಹೇಳುವರು. ಅದು ಬ್ರಾಹ್ಮಣವಧೆಯ ಪಾತಕಕ್ಕೆ ಸಮವಾದುದು. ಆದುದರಿಂದ ಓ ಮಹೇಂದ್ರ ! ನನ್ನ ಸುಖಕ್ಕಾಗಿ ಇದನ್ನು ಬಿಡಲೊಲ್ಲೆನು” ಎನ್ನಲು ಪುನಃ ಶತಮುಖನಿಂತು ಹೇಳಿದನು. “ನೀನು ತಮ್ಮಂದಿರನ್ನೂ, ದ್ರೌಪದಿಯನ್ನೂ ಬಿಟ್ಟೆ. ಈ ನಾಯನ್ನು ಏಕೆ ಬಿಡಲೊಲ್ಲೆ” ಎಂದು ಹೀಗೆ ಪುರಂದರನು ಅಧರ್ಮವನ್ನಾಚರಿಸುವಂತೆ ಎಷ್ಟು ಬೋಧಿಸಿದಾಗ್ಯೂ ಧರ್ಮತನಯನು ಧರ್ಮನಿರತನಾದುದರಿಂದ ಮನಸ್ಸಿನಲ್ಲಿ ಚಲಿಸದಿದ್ದನು. ಕುರುಕ್ಷೇತ್ರದಲ್ಲಿ ಅಸತ್ಯವನ್ನು ಹೇಳಿದಾಗ ಆತನು ತಿಳಿದ ಧರ್ಮವು ಈ ರೀತಿಯಲ್ಲಿ ಆತನನ್ನು ಕಾಪಾಡಿತು. ನಾಕಲೋಕಸುಖಕ್ಕಾದರೂ ದೇವೇಂದ್ರನು ಹೇಳಿದರೂ ಆತನು ಅಧರ್ಮವನ್ನು ಮಾಡಲೊಲ್ಲದೆ ಆತನೊಡನಿಂತು ಹೇಳಿದನು.

“ಸತ್ತವರೊಡನೆ ಸ್ನೇಹವೂ, ವೈರವೂ ಇಲ್ಲವೆಂದು ಎಲ್ಲಾ ಲೋಕಗಳಲ್ಲಿಯೂ ಸುಪ್ರಸಿದ್ಧವು. ನನ್ನ ತಮ್ಮಂದಿರೂ, ದ್ರೌಪದಿಯೂ ಸಾಯಲು ನಾನು ಅವರನ್ನು ಬದುಕಿಸುವುದಕ್ಕೆ ಶಕ್ತನಾಗಲಿಲ್ಲ. ಆದುದರಿಂದ ನಾನು ಅವರನ್ನು ಬಿಟ್ಟೆನು. ಅವರು ಜೀವಿತರಾಗಿರುವವರೆಗೂ ಅವರನ್ನು ಬಿಟ್ಟವನಲ್ಲ. ಶರಣಾಗತನಿಗೆ ಭಯವನ್ನುಂಟುಮಾಡುವುದೂ, ಸ್ತ್ರೀವಧೆಯೂ, ಬ್ರಾಹ್ಮಣನ ಧನವನ್ನು ಕದಿಯುವುದೂ, ಮಿತ್ರದ್ರೋಹವೂ ಎಂಬ ಒಂದೊಂದೂ ಭಕ್ತತ್ಯಾಗಕ್ಕೆ ಸಮವಾದ ಪಾತಕಗಳೆಂದು ತಿಳಿಯುವೆನು.” ಎಂದು ಧರ್ಮಜನು ಹೇಳಲು ಆ ಶ್ವಾನವು ಅದೃಶ್ಯವಾಗಿ ಧರ್ಮದೇವತೆಯು ನಿಜದಿವ್ಯರೂಪದಿಂದ ಪ್ರಕಾಶಿಸುತ್ತಾ ಪ್ರತ್ಯಕ್ಷನಾಗಿ ನಿಜನಂದನನೊಡನಿಂತೆಂದನು.—“ನಿನ್ನಲ್ಲಿ

ಕಾಣಬರುವ ಸಕಲ ಭೂತದಯೆಗೂ ಕೃತಜ್ಞತೆಗೂ ನಾನು ಬಹುವಾಗಿ ಮೆಚ್ಚಿದೆನು. ಈ ನಾಯಿಯು ನಿನಗೆ ಭಕ್ತನೆಂದು ತಿಳಿದು ಅದನ್ನು ಬಿಡಲೊಲ್ಲದೆ ದೇವೇಂದ್ರನ ರಥವನ್ನೂ ಬಿಟ್ಟೆ. ಅಕ್ಷಯಗಳಾದ ಪುಣ್ಯಲೋಕಗಳು ನಿನಗೆ ಕೈಗೂಡಿದುವು. ಅತ್ಯುತ್ತಮವಾದ ಗತಿಯು ನಿನಗೆ ಪ್ರಾಪ್ತವಾಯಿತು '' ಎಂದು ಅಪ್ಪಣೆಮಾಡಲು ಧರ್ಮತನಯನು ಧರ್ಮದೇವತೆ ದೇವೇಂದ್ರರೊಡನೆ ರಥವನ್ನು ಹತ್ತಿ ಅನೇಕ ದೇವತೆಗಳೊಡನೆ ಕೂಡಿ ವಿಭವದಿಂದ ಸ್ವರ್ಗಲೋಕಕ್ಕೆ ಹೋಗಲು ನಾರದನು ಆತನನ್ನು ರಾಜರ್ಷಿ ಸತ್ತಮನೆಂದು ಪ್ರಶಂಸೆಮಾಡಿದನು. ಇಷ್ಟು ಅತಿಶಯಸುಖವನ್ನು ಹೊಂದಿದಾಗ್ಯೂ ಧರ್ಮಾತ್ಮಜನು ಮನಸ್ಸಿನಲ್ಲಿ ಸಹೋದರರನ್ನೂ, ಧರ್ಮಪತ್ನಿಯನ್ನೂ ಸ್ಮರಿಸುತ್ತಾ ಕಳವಳ ಹೊಂದಿ ಪುರಂದರನೊಡನೆ ಹೀಗೆಂದನು-“ ದೇವಾ ! ನನ್ನ ತಮ್ಮಂದಿರು ಹೊಂದಿರುವ ಲೋಕವನ್ನು ನಾನೂ ಸೇರಿ ಅವರೊಡನೆ ಸುಖವನ್ನಾಗಲೀ ದುಃಖವನ್ನಾಗಲಿ ಅನುಭವಿಸಲು ಅಪೇಕ್ಷಿಸುತ್ತೇನೆ. ಬೇರೆ ಸ್ಥಳಕ್ಕೆ ನಾನು ಹೋಗಲೊಲ್ಲೆನು.'' ಎನ್ನಲು ದೇವೇಂದ್ರನು ಆ ರಾಜನೊಡನೆ ಹೀಗೆ ಹೇಳಿದನು.-“ ನೀನು ಮನುಷ್ಯಧರ್ಮಗಳಾದ ಸ್ನೇಹಗಳನ್ನು ಬಿಟ್ಟು ಪ್ರಾಪ್ತವಾದ ಸ್ವರ್ಗಸುಖವನ್ನನುಭವಿಸುವವನಾಗು. ನಿನ್ನ ತಮ್ಮಂದಿರುಗಳು ಸುಖಿಗಳಾಗಿರುವರು. ಅವರಿರುವ ಕಡೆಯಲ್ಲಿಯೇ ಸುಖಿಗಳಾಗಿರಲಿ'' ಎನ್ನಲು ದ್ರೌಪದೀರಮಣನು ಶಚೀರಮಣನೊಡನೆ ಹೀಗೆಂದನು-“ದ್ರೌಪದಿಯಿರುವಲ್ಲಿ ನಾನೂ ವಾಸಿಸುವೆನು. ನನ್ನ ತಮ್ಮಂದಿರು ಹೋಗಿರುವ ಸ್ಥಳಕ್ಕೆ ನಾನೂ ಹೋಗಲಿಷ್ಟಪಡುವೆನು. ಅವರನ್ನು ಬಿಟ್ಟು ನಾನು ಎಲ್ಲಿಯೂ ವಾಸಿಸಲು ಉತ್ಸಾಹಹೊಂದಲಾರೆನು '' ಎಂದು ಹೇಳಿದನು.



## ಸ್ವರ್ಗಾರೋಹಣಪರ್ವ.

ದೇವೇಂದ್ರನೊಡನೆ ಈ ರೀತಿ ಸಂಭಾಷಣೆ ಮಾಡಿ ಧರ್ಮನಂದನನು ಅಸಂತುಷ್ಟಚಿತ್ತನಾಗಿ ಅಲ್ಲಿರುವವರನ್ನೊಬ್ಬೊಬ್ಬರನ್ನೂ ನೋಡಲು ಯತ್ನಿಸಿ ತಮ್ಮಂದಿರನ್ನೆಲ್ಲಿಯೂ ಕಾಣದೆ ತಾನು ನೋಡಲಪೇಕ್ಷಿಸದ ದುರ್ಯೋಧನನಲ್ಲಿರುವುದನ್ನು ನೋಡಿ ಕೋಪದಿಂದ ಕೂಡಿದ ಮನಸ್ಸಿನಿಂದ ಇಂದ್ರಾದಿಗಳೊಡನಿಂತು ಹೇಳಿದನು. ‘ ಇದು ಏನನ್ಯಾಯ ? ಈ ದುರಾತ್ಮನ ಮುಖವನ್ನು ನಾನು ನೋಡಲೊ

ಲ್ಲೆನು. ನನ್ನ ತಮ್ಮಂದಿರಿರುವ ಸ್ಥಳಕ್ಕೆ ನನ್ನನ್ನು ಕಳುಹಿಸುವರಾಗಿರಿ ' ಎಂದ ಮಾತನ್ನು ಕೇಳಿ ನಾರದನು ತನ್ನ ಮುಖದಲ್ಲಿ ಕಿರುನಗೆಯುಂಟಾಗುತಿರಲು ಆತ ನೊಡನೆ ಸ್ವರ್ಗದಲ್ಲಿ ವೈರಿಗಳಿಲ್ಲವೆಂದು ಹೇಳಿದನು. ಧರ್ಮಜನು ತಮ್ಮಂದಿರನ್ನೂ, ಕರ್ಣನನ್ನೂ, ತನಗಾಗಿ ಯುದ್ಧದಲ್ಲಿ ಮೃತರಾದ ಶೂರರನ್ನೂ ಹುಡುಕುತ್ತ ಹೀಗೆಂದನು-‹‹ ನಾನು ಇಲ್ಲಿರಲು ಇಷ್ಟಪಡೆನು. ನಿಜವನ್ನೇ ಹೇಳತಕ್ಕವನು. ದೇವೋತ್ತಮರಿರಾ ! ನನ್ನ ತಮ್ಮಂದಿರನ್ನು ಬಿಟ್ಟವನಾದರೆ ಸ್ವರ್ಗದಿಂದ ನನಗೆ ಪ್ರಯೋಜನ ವಿಲ್ಲ. ಅವರೆಲ್ಲಿರುವರೋ ಅದೇ ನನಗೆ ಸ್ವರ್ಗವು ; ಅಲ್ಲದೆ ಇದು ನನಗೆ ಸ್ವರ್ಗವಲ್ಲ'' ಎಂದು ಹೇಳಲು ದೇವತೆಗಳು ಒಬ್ಬ ದೂತನನ್ನು ಕರೆದು ನೀನು ಯುಧಿಷ್ಠಿರನನ್ನು ಆತನ ತಮ್ಮಂದಿರೂ ಹಿತರೂ ಇರುವ ಸ್ಥಳಕ್ಕೆ ಕರೆದುಕೊಂಡು ಹೋಗೆಂದು ಅಪ್ಪಣೆ ಮಾಡಲು ಅವರಿಬ್ಬರೂ ಹೊರಟು ಮುಂದೆ ನಡೆಯುತ್ತಿದ್ದರು. ದಾರಿಯು ಬರಬರುತ್ತಾ ಅಂಧಕಾರಯುಕ್ತವಾಗಿ ದುರ್ಗಮವಾಗುತ್ತಿದ್ದಿತು. ದುರ್ಗಂಧದೂಷಿತಗಳಾಗಿ ಘೋರಾಕಾರಗಳಾದ ಭೀಕರಗಳಾದ ಹೇಯವಸ್ತುನಿಕರಗಳು ದಾರಿಯಲ್ಲಿ ಕಿಕ್ಕಿರಿದಿದ್ದುವು. ರಕ್ತದಿಂದ ತುಂಬಿದುದಾಗಿಯೂ, ದಾರಿಯೆಲ್ಲವೂ ಶವಗಳ ತುಂಡುಗಳಿಂದ ತುಂಬಿದುದಾಗಿಯೂ ಇತ್ತು. ಸೂಜಿಗಳಂತಿರುವ ಮುಳ್ಳುಗಳೂ, ಕತ್ತಿಗಳಂತಿರುವ ಎಲೆಗಳೂ, ಧಗಧಗನೆ ಉರಿಯುತ್ತಿರುವ ಮರಳೂ, ಸಂತಪ್ತಗಳಾದ ಕಬ್ಬಿಣದ ಶಿಲೆಗಳೂ ಆ ಮಾರ್ಗದಲ್ಲಿ ಬಹುವಾಗಿದ್ದುವು. ಅದನ್ನು ನೋಡಿ ಧರ್ಮಜನು ಆಶ್ಚರ್ಯಹೊಂದಿ ‹‹ ನನ್ನನ್ನೆಲ್ಲಿಗೆ ಕರೆದುಕೊಂಡು ಹೋಗುವಿ '' ಎಂದು ದೇವದೂತನನ್ನು ಕೇಳಲು ಆತನು ಧರ್ಮಜನೊಡನೆ ಹೀಗೆಂದನು-‹‹ಇದುವರೆಗೆ ನಿನ್ನನ್ನು ಕರೆದುಕೊಂಡು ಹೋಗುವಂತೆ ದೇವತೆಗಳು ನನಗೆ ಅಪ್ಪಣೆಮಾಡಿದರು. ನೀನು ಆಯಾಸಹೊಂದಿದೆಯಾದರೆ ಹಿಂದಿರುಗಿಹೋಗುವ, ನಡೆ'' ಎನ್ನಲು ಧರ್ಮನಂದನನು ಮೆಲ್ಲಗೆ ಪುನಃ ಮುಂದೆ ಹೊರಡಲುದ್ಯುಕ್ತನಾಗಲು ಅಲ್ಲಿ ದೀನಾಲಾಪವುಂಟಾಗುವಂತೆ ‹‹ಓ ಧರ್ಮಾತ್ಮಾ ! ನೀನು ಬಂದುದರಿಂದ ನಮ್ಮ ಯಾತನೆಗಳು ಸ್ವಲ್ಪ ನಿವಾರಣೆಯಾದುವು. ಆದುದರಿಂದ ಇನ್ನು ಸ್ವಲ್ಪಹೊತ್ತು ಇಲ್ಲಿ ನಿಲ್ಲುವವನಾಗು'' ಎನ್ನುವ ಧ್ವನಿಗಳು ಕೇಳಬಂದುವು. ಆ ಆರ್ತಸ್ವರಗಳನ್ನು ಕೇಳಿ ದಯಾದ್ರ್ರಹೃದಯನಾಗಿ ಧರ್ಮಾತ್ಮಜನು ಸ್ವಲ್ಪಹೊತ್ತು ನಿಂತು ದೊಡ್ಡ ಕೂಗಿನಿಂದ ನೀವು ಯಾರೆಂದು ಕೇಳಲು ಅವರುಗಳು ಹೀಗೆಂದರು-‹‹ ನಾನು ಕರ್ಣನು, ನಾನುಭೀಮನು, ನಾನು ಅರ್ಜುನನು, ನಾನು ನಕುಲನು, ನಾನು ಸಹ

ದೇವನು, ನಾನು ಧೃಷ್ಟದ್ಯುಮ್ನನು, ನಾನು ದ್ರೌಪದಿಯು, ನಾವು ದ್ರೌಪದೇಯರು ಎಂದು ದೀನರಾಗಿ ತಮ್ಮನ್ನು ತಿಳಿಯಪಡಿಸಿದರು. ಹೀಗೆ ದುರ್ಯೋಧನನು ಸ್ವರ್ಗದಲ್ಲಿಯೂ ಈ ವೀರವರರು ನರಕದಲ್ಲಿಯೂ ಇರುವುದನ್ನು ನೋಡಿ ಧರ್ಮಜನ ಮನಸ್ಸಿನಲ್ಲಿ ಗಾಬರಿಯೂ, ವ್ಯಸನವೂ, ಕೋಪವೂ ಉಂಟಾದುವು.

ಧರ್ಮಜನು ದೇವದೂತನೊಡನಿಂತು ಹೇಳಿದನು. ನೀನು ಹಿಂತಿರುಗಿ ಯಾರ ದೂತನೋ ಅವರಬಳಿಗೆ ಹೋಗು. ನಾನು ಇಲ್ಲಿದ್ದುದಾದರೆ ಯಾತನೆ ಹೊಂದುತಿರುವ ನನ್ನ ತಮ್ಮಂದಿರಿಗೆ ಸ್ವಲ್ಪ ಸಹಾಯವಾಗುವುದು. ಆದುದರಿಂದ ನಾನು ಇಲ್ಲಿಯೇ ನಿಲ್ಲುವೆನೇ ಹೊರತು ಅವರಬಳಿಗೆ ಬರುವುದಿಲ್ಲವೆಂದು ಹೇಳು ಎಂದು ಹೀಗೆ ಉದಾತ್ತಚಿತ್ತನಾಗಿ ಧೀರತ್ವದಿಂದ ಕೂಡಿ ಹೇಳಲು ಆ ಮಾತುಗಳನ್ನು ಕೇಳಿ ದೇವತೆಗಳು ಪುರುಹೂತಪುರಸ್ಸರರಾಗಿ ಜಾಗ್ರತೆಯಾಗಿ ಆ ಸ್ಥಳಕ್ಕೆ ಬಂದರು. ಈ ಭೀಕರಗಳೆಲ್ಲವೂ ಅಂಧಕಾರಗಳೂ ಪೂತಿಗಂಧದೂಷಿತಗಳಾದ ಕುಣಪಾದಿಗಳೂ ದುಸ್ವಪ್ನದಂತೆ ಅದೃಶ್ಯಗಳಾದುವು. ಎಲ್ಲೆಲ್ಲಿಯೂ ಬೆಳಕೂ ಸುವಾಸನೆಯೂ ಉಂಟಾದುವು. ಅನಂತರ ಸುರೇಂದ್ರನು ಆ ನರೇಂದ್ರನೊಡನಿಂತುಹೇಳಿದನು. ಇನ್ನು ನೀನು ವ್ಯಥೆಪಡಬೇಡ. ನೀನೂ ನಿನ್ನ ತಮ್ಮಂದಿರೂ ನರಕವನ್ನು ನೋಡುವಿಕೆಯು ಮಾಯೆಯಿಂದಲೇ ಹೊರತು ನಿಶ್ಚಯವಾಗಲ್ಲ. ದ್ರೋಣನಲ್ಲಿ ನೀನು ಮಾಡಿದ ಪಾಪದಿಂದ ನಿನಗೆ ಕ್ಷಣದುಃಖವಾದ ನರಕವು ವ್ಯಾಜದಿಂದ ಪ್ರಾಪ್ತವಾಯಿತು. ಆ ಮಾಯೆಯೂ ಕಳೆದು ಹೋಯಿತು. ಇನ್ನು ನೀನು ಸ್ವರ್ಗಕ್ಕೆ ಹೊರಟು ನಿನ್ನ ಬರುವಿಕೆಯನ್ನು ನಿರೀಕ್ಷಿಸುತ್ತಿರುವ ನಿನ್ನ ಅನುಜರೊಡನೆ ಕೂಡಿ ದಿವ್ಯಸುಖಗಳನ್ನನುಭವಿಸು, ಏಳು ಎನಲು ಧರ್ಮದೇವತೆಯು ತನ್ನ ಕುಮಾರನ ಸುಗುಣಗಳನ್ನು ಸ್ತೋತ್ರಮಾಡಿ ಮಂದಾಕಿನಿಯಲ್ಲಿ ಸ್ನಾನಮಾಡೆಂದು ಅಪ್ಪಣೆಮಾಡಲು ಧರ್ಮನಂದನನು ಅದರಂತೆ ಮಾಡಿ ಮಾನುಷಶರೀರವನ್ನು ಬಿಟ್ಟು ದಿವ್ಯಶರೀರವನ್ನು ಧರಿಸಿದನು.

ಅನಂತರದಲ್ಲಿ ಆ ಮಹನೀಯನು ಭೂಲೋಕದಲ್ಲಿ ತನಗೆ ಸ್ನೇಹಿತನಾಗಿದ್ದು ಈಗ ದಿವ್ಯಮಹಿಮೆಯಿಂದ ಪ್ರಕಾಶಿಸುತ್ತಿರುವ ಗೋವಿಂದನನ್ನೂ ಅವನಿಗೆ ಪ್ರೇಮಪದವಾಗಿ ಪ್ರಕಾಶಿಸುತ್ತಾ ಆತನ ಬಳಿಯಲ್ಲಿರುವ ನರನನ್ನೂ ನೋಡಿ ಪ್ರಮೋದಾಯತ್ತಚಿತ್ತನಾದನು. ಒಂದುಕಡೆಯಲ್ಲಿ ಕರ್ಣನು ಸಮುಜ್ಜ್ವಲಕಿರಣಗಳುಳ್ಳ ಸೂರ್ಯನನ್ನು ಕೂಡಿ ಪ್ರಕಾಶಿಸುತ್ತಿದ್ದನು. ಭೀಮನು ವಾಯುದೇವನೊಡನೆ ಕೂಡಿ ಆನಂದ

ದಿಂದಿದ್ದನು. ನಕುಲಸಹದೇವರು ಅಶ್ವಿನೀದೇವತೆಗಳೊಡನೆ ಕೂಡಿ ಆನಂದವನ್ನು ಹೊಂದಿದರು. ದ್ರೌಪದಿಯು ಮಹಾಲಕ್ಷ್ಮಿಯಾಗಿ ಪ್ರಕಾಶಿಸಿದಳು. ಅಭಿಮನ್ಯುವು ಚಂದ್ರನೋಪಾದಿಯಲ್ಲಿ ಧವಳಮರೀಚಿನಿಕರಗಳಿಂದ ಪ್ರಕಾಶಿಸುತ್ತಿದ್ದನು. ಕುಂತೀ ಮಾದ್ರಿಯರೊಡಗೂಡಿ ಪಾಂಡುರಾಜನು ಸುಖಿಸುತ್ತಿದ್ದನು. ಭೀಷ್ಮನು ವಸುಗಳ ಬಳಿಯಲ್ಲಿ ಸೇರಿ ನಿಜಪದವನ್ನು ಹೊಂದಿದನು. ದ್ರೋಣನು ಬೃಹಸ್ಪತಿಯ ಬಳಿಯಲ್ಲಿ ವಾಸಿಸಿದನು. ಶೋಕವೆಲ್ಲವೂ ನಾಶವಾಯಿತು. ಪ್ರಮೋದವು ಹೆಚ್ಚಾಯಿತು.

ಹೀಗೆ ಮಹಾಭಾರತದ ಕಥೆಯು ಮುಗಿಯಿತು.

ಎಲ್ಲಾ ಕಡೆಯಲ್ಲಿಯೂ ವೈರವು ನಾಶವಾಗಿ

ಶಾಂತಿಯು ನೆಲೆಗೊಂಡಿತು.

ಓಂ ಶಾಂತಿಶ್ಶಾಂತಿಶ್ಶಾಂತಿಃ.

|| ಶ್ರೀ ಕೃಷ್ಣಾರ್ಪಣಮಸ್ತು ||



PRINTED AT THE CROWN PRESS, MYSORE.